# ಕರ್ನಾಟಕದಲ್ಲಿನ ಭಾಷಾದ್ವೀಪಗಳು: ಸಮಾಜೋಭಾಷಿಕ ಅಧ್ಯಯನ

## (ತಮಿಳು ಭಾಷಿಕರನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ನವೀನಕುಮಾರ್ ಡಿ.

ಮಾರ್ಗದರ್ಶಕರು
ಡಾ. ಡಿ. ಪಾಂಡುರಂಗಬಾಬು
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಭಾಷಾನಿಕಾಯ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೯

# ಕರ್ನಾಟಕದಲ್ಲಿನ ಭಾಷಾದ್ವೀಪಗಳು: ಸಮಾಜೋಭಾಷಿಕ ಅಧ್ಯಯನ

(ತಮಿಳು ಭಾಷಿಕರನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

**ನವೀನಕುಮಾರ್ ಡಿ.**

ಮಾರ್ಗದರ್ಶಕರು

**ಡಾ. ಡಿ. ಪಾಂಡುರಂಗಬಾಬು**

ಪ್ರಾಧ್ಯಾಪಕರು

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ



ಭಾಷಾನಿಕಾಯ

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೧೯

# ಮಾರ್ಗದರ್ಶಕರ ದೃಢೀಕರಣ ಪತ್ರ

*****

"ಕರ್ನಾಟಕದಲ್ಲಿನ ಭಾಷಾದ್ವೀಪಗಳು: ಸಮಾಜೋಭಾಷಿಕ ಅಧ್ಯಯನ (ತಮಿಳು ಭಾಷಿಕರನ್ನು ಅನುಲಕ್ಷಿಸಿ)" ಎಂಬ ವಿಷಯದ ಕುರಿತು ನವೀನಕುಮಾರ್ ಡಿ. ಇವರು ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಹಾಗೂ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದು ಇವರ ಸ್ವತಂತ್ರ ಸಂಶೋಧನ ಅಧ್ಯಯನವಾಗಿದೆ. ಇದನ್ನು ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲಾಗಿದೆ.

ಮಾರ್ಗದರ್ಶಕರು

**ಡಾ. ಡಿ. ಪಾಂಡುರಂಗಬಾಬು**
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ

ದಿನಾಂಕ: 07-09-2019

ಸ್ಥಳ: ವಿದ್ಯಾರಣ್ಯ

# ಸಂಶೋಧಕರ ಪ್ರಮಾಣ ಪತ್ರ

*****

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ **"ಕರ್ನಾಟಕದಲ್ಲಿನ ಭಾಷಾದ್ವೀಪಗಳು: ಸಮಾಜೋಭಾಷಿಕ ಅಧ್ಯಯನ(ತಮಿಳು ಭಾಷಿಕರನ್ನು ಅನುಲಕ್ಷಿಸಿ)"** ಎಂಬ ಮಹಾಪ್ರಬಂಧವು ಡಾ. ಡಿ. ಪಾಂಡುರಂಗಬಾಬು, ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಂಶೋಧನಾತ್ಮಕ ಅಧ್ಯಯನವನ್ನು ಆಧರಿಸಿ ರಚನೆಗೊಂಡಿದೆ. ಈ ಮಹಾಪ್ರಬಂಧವನ್ನು ನಾನು ಈ ಮೊದಲು ಯಾವುದೇ ಪದವಿಗಾಗಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿಲ್ಲವೆಂದು ಹಾಗೂ ಇದು ಬಿಡಿ ಇಲ್ಲವೆ ಇಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ನವೀನಕುಮಾರ್ ಡಿ.**
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ

ದಿನಾಂಕ:

ಸ್ಥಳ: ವಿದ್ಯಾರಣ್ಯ

## ಪರಿವಿಡಿ

# ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ-ಮಿತಿ, ವಿಧಾನ

**ಪೀಠಿಕೆ:**

ಭಾಷೆಯ ಆರಂಭಕಾಲದ ಅಧ್ಯಯನಗಳೆಲ್ಲಾ ಬರಹಭಾಷೆ ಮತ್ತು ವ್ಯಾಕರಣ ಕುರಿತೆ ಆಗಿವೆ. ನಂತರ ಆಧುನಿಕ ಭಾಷಾಧ್ಯಯನಕಾರರು ಭಾಷೆಯ ಹುಟ್ಟು, ಸ್ವರೂಪ ಕುರಿತು ಅಧ್ಯಯನ ನಡೆಸಿದರು. ಅಮೆರಿಕ ಭಾಷಾಧ್ಯಯನ ಪಂಥದ ವೇಳೆಗಾಗಲೆ ಭಾಷಾಧ್ಯಯನವು ತನ್ನ ಸ್ವರೂಪವನ್ನು ವಿಸ್ತರಿಸಿಕೊಂಡಿತ್ತು. ಈ ಸಮಯದಲ್ಲಿ ಭಾಷೆಯನ್ನು ಕೇವಲ ಸಂಪರ್ಕ ಸಾಧನವಾಗಿ ಅಷ್ಟೇ ಅಲ್ಲದೆ ಭಾಷೆ, ಜನರ ಸಂಸ್ಕೃತಿ, ಸಮುದಾಯದ ವಿಚಾರಗಳು, ಜೀವನಕ್ರಮ ಹೀಗೆ ಹಲವು ವಿಷಯಗಳನ್ನು ಅಧ್ಯಯನ ಮಾಡುವ ಕ್ರಮವಾಗಿ ಪ್ರಾರಂಭಗೊಂಡಿತು.

ಬರಹದ ಭಾಷೆಯನ್ನೇ ಮುಖ್ಯವಾಗಿಟ್ಟುಕೊಂಡು ನಡೆದ ನಂತರ ಅಧ್ಯಯನಗಳನ್ನ ಆಡುಭಾಷೆಯನ್ನು ಆಧಾರವಾಗಿರಿಸಿಕೊಂಡು ವಿವರಣಾತ್ಮಕ ಅಧ್ಯಯನಗಳು ನಡೆದಿವೆ. ಹೀಗೆ ಭಾಷೆ ಕುರಿತಾದ ಅಧ್ಯಯನಗಳು ಮುಂದುವರೆದು ಭಾಷೆಯ ಐತಿಹಾಸಿಕ ಹಾಗೂ ತುಲನಾತ್ಮಕ ಅಧ್ಯಯನಗಳು ರೂಢಿಗೊಂಡವು. ೧೯೫೦ರ ಸುಮಾರಿಗೆ ಅಮೆರಿಕದಲ್ಲಾದಂತಹ ಭಾಷೆಯ ಕುರಿತಾದ ಚಿಂತನೆಗಳು ಭಾಷಾಧ್ಯಯನವನ್ನು ಹೊಸ ಆಚಲೋಚನೆಯತ್ತ ತಿರುಗಿಸಿದವು. ಅಂದರೆ ಆ ವರೆಗೂ ಇದ್ದಂತಹ ಭಾಷೆಯ ಕುರಿತಾದ ಸಾಂಪ್ರದಾಯಿಕ ಯೋಜನೆಗಳನ್ನು ಬದಿಗಿತ್ತು, ಹಲವು ಜ್ಞಾನಶಿಸ್ತುಗಳ ಮೂಲಕ ಭಾಷೆಯನ್ನು ಅಧ್ಯಯನ ಮಾಡಲಾಯಿತು. ಅದರಲ್ಲಿ ಮುಖ್ಯವಾಗಿ ಭಾಷೆಯೊಂದಿಗೆ ಇತರ ಶಾಸ್ತ್ರಗಳಾದ ಸಮಾಜಶಾಸ್ತ್ರ, ಮಾನವಶಾಸ್ತ್ರ, ಗಣಿತಶಾಸ್ತ್ರ, ವಿಜ್ಞಾನಶಾಸ್ತ್ರ ಹಲವು ಶಾಸ್ತ್ರಗಳು ಹೊಂದಿರುವಂತಹ ಸಂಬಂಧವನ್ನು ಹುಡುಕುವ ಪ್ರಯತ್ನ ಮಾಡಲಾಯಿತು. ಈ ಎಲ್ಲಾ ಶಾಸ್ತ್ರಗಳನ್ನು ಭಾಷೆಯ ಮೂಲಕ ಕಂಡುಕೊಳ್ಳಲಾಯಿತು.

೧೯೫೦ರಿಂದ ಈಚೆಗೆ ಭಾಷಾಧ್ಯಯನದಲ್ಲಿ ಗುರುತಿಸುವಂತಹ ಬದಲಾವಣೆ ಎಂದರೆ ಸಾಮಾಜಿಕ ಭಾಷಾವಿಜ್ಞಾನ. ಸಾಮಾಜಿಕ ಭಾಷಾವಿಜ್ಞಾನವು ಅಮೆರಿಕ ಭಾಷಾವಿಜ್ಞಾನಗಳ ಸಂಶೋಧನೆಗಳಿಂದ ಹೆಚ್ಚು ವೃದ್ಧಿಗೊಂಡಿತು. ಆ ಮೂಲಕ ಅಮೆರಿಕದ ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದಲ್ಲಿ ನಡೆಸಿದ ಸಾಮಾಜಿಕ ಭಾಷಾವಿಜ್ಞಾನದ ಕುರಿತ ಸಮ್ಮೇಳನಗಳು ಇದಕ್ಕೆ ಪೂರಕವಾಗಿದ್ದವು. ಮೊದಮೊದಲು "ಲಾಂಗ್ವೇಜ್ ಇನ್ ಕಲ್ಚರ್ ಇನ್ ಸೋಸೈಟಿ", "ದಿ ಸೋಶಿಯಲ್ ಸ್ಪಾಟಿಫಿಕೇಶನ್ ಆಫ್ ಇನ್ ನ್ಯೂಯಾರ್ಕ್ ಸಿಟಿ"

ವಿಷಯಗಳ ಕುರಿತು ಸಂಶೋಧನೆ ಮತ್ತು ಲೇಖನಗಳು ಹೊರಬಂದವು. ಈ ಎಲ್ಲಾ ಕಾರಣಗಳಿಂದ ೧೯೫೦-೬೦ ವರ್ಷವು ಚಿರಸ್ಮರಣೀಯ ವರ್ಷ ಎಂದು ಸಾಮಾಜಿಕ ಭಾಷಾವಿಜ್ಞಾನ ಕ್ಷೇತ್ರದಲ್ಲಿ ಗುರುತಿಸಿಕೊಂಡಿದೆ. ಸಾಮಾಜಿಕ ಭಾಷಾವಿಜ್ಞಾನ ಕುರಿತಾಗಿ ಲ್ಯಾಬೊವ್, ಫಿಶಮನ್, ಫರ್ಗ್ಯೂಸನ್ ಮುಂತಾದ ವಿದ್ವಾಂಸರು ಕೆಲಸ ನಿರ್ವಹಿಸಿದ್ದಾರೆ.

ಸಾಮಾಜಿಕ ಭಾಷಾವಿಜ್ಞಾನವು ಸಮಾಜ ಮತ್ತು ಸಂಸ್ಕೃತಿಗಳಲ್ಲಿ ಮಾನವರ ಭಾಷೆ ಹೇಗೆ ಹೆಣೆದುಕೊಂಡಿದೆ ಎಂಬುದನ್ನು ವಿಶ್ಲೇಷಿಸುವ ಕೆಲಸ ಮಾಡುತ್ತದೆ. ಭಾಷೆಯಲ್ಲಿ ಹೇಗೆ ರಚನೆಯ ಅಂಶಗಳನ್ನು ಕಾಣುತ್ತೇವೆಯೋ ಹಾಗೆಯೇ ಸಮಾಜದಲ್ಲಿ ರಚನೆಯ ಅಂಶಗಳಾದ ಜಾತಿ, ಲಿಂಗ, ವಯಸ್ಸು, ವಿದ್ಯೆ ಹಲವಿವೆ. ಈ ಸಾಮಾಜಿಕ ಅಂಶಗಳು ಭಾಷೆಯ ರಚನೆಯ ಮೇಲೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಪ್ರಭಾವ ಬೀರುವುದನ್ನು ಸಾಮಾಜಿಕ ಭಾಷಾವಿಜ್ಞಾನ ಅಧ್ಯಯನದ ಹಿನ್ನೆಲೆಯಲ್ಲಿ ತಿಳಿಯಬಹುದು. ಸಮಾಜ ಮತ್ತು ಭಾಷೆ ಮಾನವರ ಪರಿಸರವನ್ನು ಅವಲಂಬಿಸಿರುವಂತಹ ಅಂಶಗಳೇ ಆಗಿರುವುದರಿಂದ ಒಂದಕ್ಕೊಂದು ಬೇರೆಯಾದರೂ ಆಂತರಿಕ ಸಂಬಂಧವನ್ನು ಹೊಂದಿವೆ ಎಂಬುದನ್ನು ಇಲ್ಲಿ ಅರಿಯಬಹುದು.

ಹಾಗೆಯೇ ಪಾಶ್ಚಾತ್ಯ ಪ್ರೇರಣೆಯಂತೆ ಕನ್ನಡದಲ್ಲಿಯೂ ಕೂಡ ಸಾಮಾಜಿಕ ಭಾಷಾವಿಜ್ಞಾನದ ಅಧ್ಯಯನಗಳು ನಡೆದಿವೆ. ಇದರಲ್ಲಿ ಭಾಷಾಸಂಪರ್ಕ, ಭಾಷಾಯೋಜನೆಗಳು ಒಂದಕ್ಕಿಂತ ಹೆಚ್ಚಿನ ಭಾಷೆಗಳು ಪರಿಸರದಲ್ಲಿ ಹೇಗೆ ರೂಢಿಯಾಗುತ್ತವೆ, ಒಟ್ಟಾರೆಯಾಗಿ ಭಾಷೆ ಸಮಾಜದಲ್ಲಿ ಪ್ರಭಾವಿಸಿರುವ ಅಂಶಗಳಾವವು ಎಂಬುದನ್ನು ವಿವರಿಸುತ್ತದೆ. ಕನ್ನಡದಲ್ಲಿ ಏಕಭಾಷೆ, ದ್ವಿಭಾಷೆ, ಬಹುಭಾಷೆ ಕುರಿತಾದ ಅಧ್ಯಯನಗಳು ನಡೆದಿವೆ. ಅದರಲ್ಲೂ ಕೆ. ಪಿ. ಭಟ್ಟರ ಕೋಲಾರ ಜಿಲ್ಲೆಯ ದ್ವಿಭಾಷಿಕ ಪರಿಸರ, ಎಂ. ಭಾಗ್ಯಲಕ್ಷ್ಮಿ ಅವರ ದ್ವಿಭಾಷಿಕರು, ಎಸ್. ಎಸ್. ಅಂಗಡಿಯವರ ಮರಾಠಿ ಮತ್ತು ಕನ್ನಡ ಪರಿಸರ ಹಾಗೂ ಕನ್ನಡ ಮತ್ತು ತೆಲುಗು ದ್ವಿಭಾಷಿಕ ಪರಿಸರ ಹೀಗೆ ಹಲವರು ಅಧ್ಯಯನ ಮಾಡಿದ್ದಾರೆ. ಈ ಎಲ್ಲಾ ಅಧ್ಯಯನಗಳು ದ್ವಿಭಾಷಿಕ ಪರಿಸರವನ್ನು ಕುರಿತು ವಿವರಿಸುತ್ತವೆ. ಇಲ್ಲಿ ಒಂದು ಭಾಷಿಕ ಪರಿಸರದಲ್ಲಿ ಮೊತ್ತೊಂದು ಭಾಷೆ ಹೇಗೆ ಬಳಕೆಯಾಗುತ್ತದೆ? ಅದರ ಸಾಮಾಜಿಕ ಸಂದರ್ಭಗಳೇನು? ಯಾವ ಸ್ವರೂಪದಲ್ಲಿ ಭಾಷಿಕ ರಚನೆಯ ಹೊಂದಿರುತ್ತದೆ? ಕೊನೆಯದಾಗಿ ಈ ಎರಡು ದ್ವಿಭಾಷಿಕರಲ್ಲಿ ಯಾವ ಭಾಷೆ ಹೆಚ್ಚು ಬಳಕೆಯಾಗಿ ಮುಂದಿನ ಜನಾಂಗಕ್ಕೆ ಉಳಿದು ಸಂಗೋಪನೆಗೊಳ್ಳುತ್ತದೆ ಎಂದು ವಿವರಿಸಿದ್ದಾರೆ. ಜಾಗತೀಕರಣ, ವಲಸೆ, ವೈವಾಹಿಕ ಸಂಬಂಧ ಬೆಳೆಸುವುದು, ಸಾಮಾಜಿಕ ಸ್ಥಾನಮಾನ ಕಾಯ್ದುಕೊಳ್ಳುವ, ಸಾಮಾಜಿಕ ಅವಶ್ಯಕತೆಗಳನ್ನು ಪಡೆದುಕೊಳ್ಳಲು ಭಾಷಾ ಪರಿಸರಗಳ ಬದಲಾವಣೆಗಳಿಗೆ ಕಾರಣಗಳೇನೆಂದು ಹೇಳಿದ್ದಾರೆ.

ಮಾನವರ ಜೀವನ, ಸಂಸ್ಕೃತಿ ಬದಲಾವಣೆಗೆ ಮುಖ್ಯವಾಗಿ ಸಾಮಾಜಿಕ ಬದಲಾವಣೆ(ಔದ್ಯೋಗಿಕರಣ ಮತ್ತು ಆರ್ಥಿಕ ಸ್ಥಿತಿ) ಕಾರಣವೆಂದು ಗುರುತಿಸುತ್ತೇವೆ. ಈ ಬದಲಾವಣೆಯ ಪ್ರಭಾವದಿಂದ ಮಾನವರ ಜೀವನ ವಿಧಾನಗಳಾದ ಉಡುಪು, ಊಟ, ವಸತಿ ಹೀಗೆ ಹಲವು ಬದುಕಿನ ಕ್ರಮಗಳು ಮತ್ತು ಸಾಂಸ್ಕೃತಿಕ ಆಚರಣೆಗಳು, ಆಲೋಚನೆಯ ಕ್ರಮಗಳು ಬದಲಾಗಿವೆ. ಉದಾ: ಈ ಹಿಂದೆ ಮನೆಗಳಲ್ಲಿ ರಾತ್ರಿ ಬೆಳಕಿಗಾಗಿ ಬಳಸುತ್ತಿದ್ದ ಮಣ್ಣಿನ ದೀಪ ಮೇಣದ ಬತ್ತಿ, ಹರಳೆಣ್ಣೆ ದೀಪ, ಲ್ಯಾಟಿನ್ ದೀಪ, ಸೀಮೆ ಎಣ್ಣೆ(ದೀಪ) ಪ್ರಸ್ತುತ ಸಂದರ್ಭದ ಮನೆಗಳಲ್ಲಿ ಬಳಕೆ ಕಡಿಮೆಯಾಗಿದೆ. ಇದನ್ನು ಸಾಮಾಜಿಕ ಬದಲಾವಣೆಯ

ದೃಷ್ಟಿಯಿಂದ ವಿವರಿಸುವುದಾದರೆ ಈ ಎಲ್ಲ ಬೆಳಕಿನ ವಸ್ತುಗಳಿಗೆ ಪರ್ಯಾಯವಾಗಿ ನಾವುಗಳು ಇಂದು ವಿದ್ಯುತ್ ದೀಪವನ್ನು ಬಳಸುತ್ತಿದ್ದು, ಈ ಹಿಂದೆ ಬಳಸುತ್ತಿದ್ದ ಬೆಳಕಿನ ವಸ್ತುಗಳೆಲ್ಲ ಅಳಿವಿನಂಚಿನಲ್ಲಿವೆ. ಹೀಗೆ ಅಳಿವಿನಂಚಿನಲ್ಲಿರುವ ವಸ್ತುಗಳು ಸಮಾಜದ ಬಳಕೆಯಿಂದ ದೂರವಾಗಿವೆ. ಇದರ ಪರಿಣಾಮವನ್ನು ಭಾಷೆಯಲ್ಲೂ ಕಾಣುಬಹುದು. ಅಂದರೆ ಸಮಾಜದ ಬಳಕೆಯಿಂದ ಬಿಟ್ಟುಹೋಗಿರುವ ವಸ್ತುಗಳು ಸಹ ಭಾಷೆ ಬಳಕೆಯಿಂದಲೂ ಬಿಟ್ಟು ಹೋಗುತ್ತವೆ. ವಿದ್ಯುತ್ ದೀಪವು ಸಹ ಪ್ರಾದೇಶಿಕವಾಗಿ ಪರಿಶೋಧಗೊಂಡು ಅಥವಾ ನಿರ್ಮಾಣಗೊಂಡ ವಸ್ತುವಲ್ಲ. ಅದು ಬೇರೆ ಪ್ರದೇಶದಲ್ಲಿ ಶೋಧಗೊಂಡು ರಚನೆಹೊಂದಿ ನಮ್ಮ ಸಮಾಜದಲ್ಲಿ ಬೆಳಕಿಗೆ ಬಂದಿದೆ. ಅದೇ ರೀತಿಯಲ್ಲಿ ನಮ್ಮ ಭಾಷೆಯಲ್ಲಿ ಈ ಪದವು ಬೆರತು ಹೊಗಿದೆ. ಹೀಗೆ ಸಮಾಜ ಕಾಲದಿಂದ ಕಾಲಕ್ಕೆ ಬದಲಾದಂತೆ ಭಾಷೆಯ ಬಳಕೆ, ಬಳಕೆಯ ನೆಲೆ, ಸ್ವರೂಪ ಸಹ ಬದಲಾಗುವುದನ್ನು ಕಾಣಬಹುದು. ಪ್ರಸ್ತುತ ಮಾಹಿತಿ ತಂತ್ರಜ್ಞಾನ, ಆಲೋಚನ ಕ್ರಮಗಳು ವಿಸ್ತಾರಗೊಂಡಂತೆ ಭಾಷೆ ಮತ್ತು ಸಮಾಜಿಕ ಬದಲಾವಣೆಗಳೂ ಹೆಚ್ಚುತಾ ಸಾಗಿವೆ. ಇದೇ ರೀತಿಯಲ್ಲಿ ಬೇರೆ ಬೇರೆ ಭಾಷೆಗಳು ಸಂಪರ್ಕಕ್ಕೆ ಬಂದು ಭಾಷೆ ಬಳಕೆಯ ರೂಪ, ಸಂದರ್ಭಗಳು ಬದಲಾಗುತ್ತಾ ಸಾಗುತ್ತಿವೆ.

ಈ ರೀತಿಯ ಭಾಷಿಕ ಮತ್ತು ಸಾಮಾಜಿಕ ಬದಲಾವಣೆಗಳು ಮಾನವ ಅಪೇಕ್ಷೆಗಳನ್ನು ಅನುರಿಸಿಯೇ ನಡೆಯುತ್ತವೆ. ಈ ಬದಲಾವಣೆಗಳಲ್ಲಿ ಒಂದು ಭಾಷೆಗೆ ಬೇರೆ ಭಾಷೆ ಪದಗಳು, ಹೊಸ ಧ್ವನಿ, ಧ್ವನಿಮಾಗಳು ಸೇರುವುದು, ಪರಸ್ಪರ ಭಾಷಾ ಕೊಡುಕೊಳ್ಳುವಿಕೆ ನಡೆಯಬಹುದು. ಯಾವುದಾದರೂ ಎರಡು ಅಥವಾ ಹೆಚ್ಚು ಭಾಷೆಗಳನ್ನು ಒಂದೆಡೆ ಸಂಪರ್ಕಕ್ಕೆ ಬಂದು ಸಮೀಕರಣಗೊಳ್ಳಬಹುದು. ಹಾಗೂ ಭಾಷಿಕರು ಇತರ ಭಾಷಿಕರೊಂದಿಗೆ ಸಾಂಸ್ಕೃತಿಕವಾಗಿ ಬೆರೆತು ಹೋಗಬಹುದು. ಆದರೆ ಕೆಲವು ಭಾಷಿಕ ಪರಿಸರದಲ್ಲಿ ಈ ಬದಲಾವಣೆಗಳು ಆಗದೆ ತನ್ನದೇ ಆದ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರುವುದು ಕಾಣಬಹುದು. ಅಂದರೆ ಬೇರೆ ಭಾಷಿಕ ಪರಿಸರದ ಮಧ್ಯೆ ಇದ್ದು ಆ ಭಾಷೆಯ ಆಂಶಿಕ ಅಂಶಗಳನ್ನು ಬಳಸಿಕೊಂಡು, ಸಾಂಸ್ಕೃತಿಕವಾಗಿ ಬೆರೆಯದೆ, ತಮ್ಮದೇ ಭಾಷೆ ಮತ್ತು ಸಂಸ್ಕೃತಿಯಲ್ಲಿ ಜೀವನ ನಡೆಸುವುದನ್ನ ಕಾಣಬಹುದು. ಬಹುಭಾಷಿಕ ಅಥವಾ ದ್ವಿಭಾಷಿಕ ಪರಿಸರದಲ್ಲಿ ಗಮನಿಸಿದಾಗ ಕೆಲ ಭಾಷಿಕ ಸಮುದಾಯಗಳು ಬೇರೆ ಭಾಷಿಕ ಸಮುದಾಯದೊಂದಿಗೆ ಭಾಷಿಕವಾಗಿ ಸಾಂಸ್ಕೃತಿಕವಾಗಿ ಬೆರೆಯದೇ ತನ್ನದೇ ಅಸ್ತಿತ್ವವನ್ನು ಕಾಪಾಡಿಕೊಂಡು ಬಂದಿವೆ. ಅವುಗಳನ್ನು 'ಭಾಷಾದ್ವೀಪ'ಗಳೆಂದು ಕರೆಯಲಾಗಿದೆ. ಇವುಗಳ ಭಾಷಿಕ ಹಿನ್ನೆಲೆಯನ್ನು ಅಧ್ಯಯನ ಮಾಡಿದರೆ ಅವುಗಳ ಅಸ್ತಿತ್ವ ಮತ್ತು ಸಾಮಾಜಿಕ ಜೀವನವನ್ನು ತಿಳಿಯಬಹುದಾಗಿದೆ.

**ಪ್ರಸ್ತಾವನೆ: ಭಾಷಾದ್ವೀಪಗಳು**

ಭಾಷಾದ್ವೀಪ ಎಂದರೆ ಒಂದು ಭಾಷೆಯ ಸಮುದಾಯದ ಸುತ್ತ ಬೇರೊಂದು ಅಥವಾ ಬೇರೆ ಹಲವು ಭಾಷೆಗಳ ಸಮುದಾಯಗಳು ಸುತ್ತುವರಿದಿದ್ದರೆ ಅದನ್ನು ಭಾಷಾದ್ವೀಪ ಎಂದು ಸಾಮಾನ್ಯವಾಗಿ ವ್ಯಾಖ್ಯಾನ ಮಾಡಲಾಗುತ್ತಿದೆ. ಆದರೆ ನಿರ್ದಿಷ್ಟವಾಗಿ ಭಾಷಾದ್ವೀಪ ಹೇಗೆ ರಚನೆಗೊಂಡಿರುತ್ತದೆ? ಅವುಗಳ ಭೌಗೋಳಿಕ ಹಾಗೂ ಭಾಷಿಕ ರಚನೆಯ ಸ್ವರೂಪವೇನು ಎಂಬುದನ್ನು ತಮಿಳು ಭಾಷಾದ್ವೀಪಗಳನ್ನು ಅನುಲಕ್ಷಿಸಿ ವಿವರಿಸಲಾಗುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಭಾಷಾದ್ವೀಪಗಳು ಅಂದರೆ ಯಾವುದನ್ನು

ಗುರುತಿಸುತ್ತೇವೆ? ಅಲ್ಲಿನ ಜನರು ಏಕೆ ತಮ್ಮ ಭಾಷೆಯನ್ನು ರೂಢಿಸಿಕೊಂಡಿರುತ್ತಾರೆ? ತಮ್ಮ ಸಾಮಾಜಿಕ ಅವಶ್ಯಕತೆಗಳನ್ನು ಹೇಗೆ ಇತರ ಪರಿಸರದೊಂದಿಗೆ ಪಡೆದುಕೊಳ್ಳುತ್ತಾರೆ ಎಂಬುದನ್ನು ಈ ಅಧ್ಯಯನವು ವಿವರಿಸುತ್ತದೆ.

ಭಾಷೆ ಮತ್ತು ಸಮಾಜ ಪರಸ್ಪರಅಂತರ ಸಂಬಂಧ ಹೊಂದಿರುವಂತಹ ಅಂಶಗಳೇ ಆಗಿದ್ದು, ಸಮಾಜದಲ್ಲಿ ಆದಂತಹ ಬದಲಾವಣೆಗಳು ಭಾಷೆಯಲ್ಲಿ ಕಾಣಸಿಗುತ್ತವೆ. ಆದರೆ ಈ ಆಧುನಿಕತೆಯಿಂದ ಹೊಸ ಹೊಸ ಬದಲಾವಣೆಗಳು ಜರುಗಿದರೂ ಸಹ ಕೆಲವು ಪ್ರದೇಶಗಳಲ್ಲಿ ವಲಸೆ, ವೈವಾಹಿಕ ಸಂಬಂಧ, ಔದ್ಯೋಗೀಕರಣದಿಂದ ಜನರು ಒಂದು ಭಾಷೆಯಿಂದ ಮತ್ತೊಂದು ಭಾಷಾಪರಿಸರಕ್ಕೆ ಸ್ಥಾನಪಲ್ಲಟವಾದರು, ಆ ಪರಿಸರದ ಭಾಷೆಯನ್ನು ಕಲಿಯದೆ ತಮ್ಮದೇ ಭಾಷೆ ಸಂಸ್ಕೃತಿಯನ್ನು ಉಳಿಸಿಕೊಂಡು ಸಂಗೋಪನೆ ಮಾಡುತ್ತಿದ್ದಾರೆ. ಅದು ಏಕೆ? ಹೇಗೆ? ಎಂಬ ಪ್ರಶ್ನೆಗಳು ಮೂಡುತ್ತವೆ. ಇಂತಹ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ಈ ಅಧ್ಯಯನದ ಗುರಿಯಾಗಿದೆ.

ಸಾಮಾನ್ಯವಾಗಿ ಒಂದು ಬೃಹತ್ ಭಾಷಿಕ ಸಮುದಾಯದ ನಡುವೆ ಅಥವಾ ಭಾಷಿಕ ಪರಿಸರದಲ್ಲಿ ಯಾವುದೇ ಒಂದು ಭಾಷೆಯ ಸಮುದಾಯ ಇದ್ದು, ಈ ಸಮುದಾಯವು ಸುತ್ತಲಿನ ಇತರ ಭಾಷಿಕ ಪರಿಸರದೊಂದಿಗೆ ಹೊಂದಿಕೊಂಡಿರುವ ಸಾಮಾಜಿಕ, ಆರ್ಥಿಕ, ರಾಜಕೀಯ ಅಂಶಗಳಾವುವು? ಹಾಗೆಯೇ ಈ ಎಲ್ಲವನ್ನು ಮೀರಿ ಆ ಭಾಷಿಕ ಪರಿಸರದಲ್ಲಿ ಬದಲಾಗದೇ ಅಥವಾ ಇತರ ಪರಿಸರದೊಂದಿಗೆ ಹೊಂದಿಕೊಳ್ಳದೇ ಇರುವಂತಹ ಭಾಷಿಕ, ಸಾಂಸ್ಕೃತಿಕ ಅಂಶಗಳನ್ನು ಹುಡುಕಿ ಅವುಗಳ ಸ್ವರೂಪವನ್ನು ವಿವರಿಸುವುದು. ಒಂದು ವೇಳೆ ಈ ಎಲ್ಲಾ ಅಂಶಗಳು ಬದಲಾಗದೆ ಇದ್ದರೆ ಅವುಗಳಿಗೆ ಕಾರಣಗಳನ್ನು ಹುಡುಕುವುದು. ಜೊತೆಗೆ ಭಾಷೆಯಲ್ಲಿ ಬದುಕು, ಆಲೋಚನೆ, ಸಂಸ್ಕೃತಿಗಳು ಹೇಗೆ ಪರಸ್ಪರ ಸೇರಿವೆ ಎಂಬುದನ್ನು ಹುಡುಕುವುದು. ಅನ್ಯಭಾಷಾ ಸಂಪರ್ಕದ ಪರಿಣಾಮಗಳನ್ನು ಕಾರಣಗಳನ್ನು ಪರಿಶೀಲಿಸುವುದು ಈ ಅಧ್ಯಯನದ ಉದ್ದೇಶಗಳಲ್ಲಿ ಒಂದು.

ಭಾಷಾದ್ವೀಪದಲ್ಲಿ ಕಲಿಯುವ ಮಕ್ಕಳು ತಮ್ಮ ಭಾಷೆಯನ್ನು ಯಾವ ಕ್ರಮದಲ್ಲಿ ಕಲಿಯುತ್ತಾರೆ? ತಮ್ಮ ಭಾಷೆಯನ್ನು ಅಲ್ಲಿನ ಜನರು ಹೇಗೆ ಮುಂದಿನ ಜನಾಂಗಕ್ಕೆ ಕಲಿಸಿ, ಸಂಗೋಪನೆ ಮಾಡುತ್ತಾರೆ ಎಂಬುದನ್ನು ಕಂಡುಕೊಳ್ಳುವುದು.

ಈ ಒಟ್ಟು ಭಾಷಿಕ ಪರಿಸರದಲ್ಲಿ ಭಾಷೆ ಬಳಕೆಯಾಗುವ ರೀತಿ, ಬಳಕೆಯಾಗುವ ಸಂದರ್ಭ, ಬಳಕೆದಾರರಿಗಿರುವ ಒತ್ತಡ ಮತ್ತು ಪ್ರೇರಣೆಗಳನ್ನು ಕುರಿತು ಪ್ರಾಯೋಗಿಕವಾಗಿ ಅಧ್ಯಯನ ಮಾಡುವುದು. ಹಾಗೆಯೇ ಕನ್ನಡ ಭಾಷಾಧ್ಯಯನದಲ್ಲಿ ಇದುವರೆಗೂ ವಿಸ್ತಾರವಾಗಿ ಅಧ್ಯಯನವಾಗದ ಭಾಷಾದ್ವೀಪಗಳಿಗೆ ಕರ್ನಾಟಕದ ಭೂಚೌಕಟ್ಟಿಗೆ ಅನ್ವಯಿಸಿ ಮಾಹಿತಿ ಸಂಗ್ರಹಿಕೆಯ ಮೂಲಕ ಮಂಡಿಸುವುದು. ಸೂಕ್ತ ವಿವರಣೆಯ ಮೂಲಕ ಕನ್ನಡ ಭಾಷಾಧ್ಯಯನದ ಹೊಸ ಸಾಧ್ಯತೆಗಳ ಕಡೆ ಗಮನ ಸೆಳೆಯುವುದು.

## ಅಧ್ಯಯನದ ಉದ್ದೇಶಗಳು

* ಸಮಾಜೋಭಾಷಿಕ ಹಿನ್ನೆಲೆಯಲ್ಲಿ ಭಾಷಾದ್ವೀಪಗಳನ್ನು ಅಧ್ಯಯನ ಮಾಡುವುದು. ಆ ಮೂಲಕ ಬೇರೆ ಭಾಷಿಕರ ನಡುವೆ ನೆಲೆಸಿ ವಾಸಿಸುವ ಭಾಷಿಕ ಸಮುದಾಯಗಳ ಭಾಷೆಯ ಸ್ಥಿತಿಯನ್ನು ತಿಳಿಯುವುದು.
* ಭಾಷಾದ್ವೀಪಗಳಲ್ಲಿ ಬದುಕುತ್ತಿರುವ ಸಮುದಾಯಗಳ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಸ್ಥಿತಿಯನ್ನು ಅರಿಯುವುದು.
* ಇದುವರೆಗೂ ಹೇಳಿರುವಂತೆ ಭಾಷಾದ್ವೀಪಗಳಲ್ಲಿ ವಾಸಿಸುವ ಸಮುದಾಯಗಳು ತಮ್ಮ ಭಾಷೆಯನ್ನೇ ಏಕೆ ರೂಢಿಸಿಕೊಂಡಿರುತ್ತಾರೆ? ಹಾಗೆಯೇ ತಮ್ಮ ಭಾಷೆಯನ್ನು ರೂಢಿಸಿಕೊಂಡು ಬಂದಿರುವ ಬಗ್ಗೆ ಹಾಗೂ ಭಾಷೆಯನ್ನು ರೂಢಿಸಿಕೊಂಡು ಬಂದಿರುವಲ್ಲಿ ಲಿಂಗ ಮತ್ತು ವಯೋಮಾನದ ಪಾತ್ರಗಳ ಕುರಿತು ವಿವೇಚಿಸುವುದು.
* ಭಾಷಾದೀಪಗಳಲ್ಲಿ ಸಾಮಾನ್ಯವಾಗಿ ಇತರ ಸಮುದಾಯದೊಂದಿಗೆ ಭಾಷಿಕವಾಗಿ ಹೊಂದಿರುವ ಸಂಬಂಧ ಕುರಿತು ಅಧ್ಯಯನ ಮಾಡುವುದು.
* ಭಾಷಾದ್ವೀಪಗಳಲ್ಲಿ ಭಾಷಿಕರು ತಮ್ಮ ಭಾಷೆಯನ್ನು ಸಂಗೋಪನೆ ಮಾಡಿಕೊಂಡು ಬಂದಿರುವ ಕ್ರಮಗಳನ್ನು ವಿವರಿಸುವುದು.
* ಭಾಷಾದ್ವೀಪಗಳಿಗೆ ಸಂಬಂಧಿಸಿ ಭಾಷಿಕ ಚಲನೆ ಪಲ್ಲಟಗಳಿಗೆ ಕಾರಣವಾಗಬಹುದಾದ ಒತ್ತಡ ಅಥವಾ ಪ್ರೇರಣೆಗಳನ್ನು ಗುರುತಿಸಿ, ಬದಲಾಗಿದ್ದರೆ ಅದರ ಸ್ವರೂಪವನ್ನು ವಿವರಿಸಿಕೊಳ್ಳುವುದು.
* ಭಾಷಾದ್ವೀಪಗಳ ಶೈಕ್ಷಣಿಕ ಸ್ಥಿತಿಗತಿ ಅರಿಯುವುದು.

ಒಟ್ಟಾರೆ ಹೇಳುವುದಾದರೆ ಒಂದು ಬೃಹತ್ ಭಾಷಿಕ ಸಮುದಾಯದ ನಡುವೆ ಯಾವುದೇ ಬೇರೊಂದು ಭಾಷಿಕ ಸಮುದಾಯ ವಾಸವಾಗಿದ್ದರೆ ಅದನ್ನು ಭಾಷಾದ್ವೀಪವೆಂದು ಗುರುತಿಸಿದ್ದು, ಈ ಸಮುದಾಯಗಳಲ್ಲಿ ಭಾಷೆ, ಸಂಸ್ಕೃತಿ, ಬದುಕುವ ವಿಧಾನ ಹೀಗೆ ಈ ಎಲ್ಲವುಗಳಿಗೆ ಭಾಷೆ ಅನುಕೂಲಕಾರಿಯಾಗಿದೆಯೇ ಅಥವಾ ಸಮಸ್ಯೆಯಾಗಿದೆಯೇ? ಸಾಂಸ್ಕೃತಿಕ ಬದುಕಿಗೂ ವ್ಯಾವಹಾರಿಕ ಬದುಕಿಗೂ ಇರುವ ಭಿನ್ನತೆ ಹಾಗೆಯೇ ಬೃಹತ್ ಭಾಷಿಕರೊಂದಿಗೆ ಸಾಂಸ್ಕೃತಿಕವಾಗಿ ಭಾಷಿಕವಾಗಿ ಗುರುತಿಸಕೊಂಡಿರುವಿಕೆ ಹಾಗೂ ಹೊಂದಾಣಿಕೆಗಾಗಿ ಕಳೆದುಕೊಂಡಿರುವ ಗಳಿಸಿಕೊಂಡಿರುವ ಅಂಶಗಳನ್ನು ಶೋಧಿಸುವುದೇ ಈ ಅಧ್ಯಯನದ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ ಮತ್ತು ಮಿತಿ

ಭೌಗೋಳಿಕವಾಗಿ ಭಾಷಾದ್ವೀಪಗಳಿಗೆ ಸಂಬಂಧಿಸಿದಂತೆ ಒಟ್ಟು ಕರ್ನಾಟಕ ಭೂಪ್ರದೇಶವನ್ನು ಆಯ್ಕೆ ಮಾಡಿಕೊಂಡಿದ್ದು, ನಿರ್ದಿಷ್ಟ ವಿಷಯಗಳನ್ನು ವಿವರಿಸುವುದಕ್ಕಾಗಿ ತಮಿಳು ಭಾಷಾದ್ವೀಪಗಳನ್ನು ಗಮನಿಸಲಾಗುತ್ತದೆ. ಅದಕ್ಕೆ ಸಂಬಂಧಿಸಿದಂತೆ ಹಿರಿಯೂರು, ಹೊಸಪೇಟೆಯ ನಗರ ಮತ್ತು ಗ್ರಾಮಾಂತರ ಪ್ರದೇಶಗಳನ್ನು ಈ ಅಧ್ಯಯನಕ್ಕೆ ಗುರುತಿಸಿಕೊಳ್ಳಲಾಗಿದೆ.

ಕರ್ನಾಟಕದಲ್ಲಿ ಬೇರೆ ಬೇರೆ ಭಾಷೆಗಳ ಭಾಷಾದ್ವೀಪಗಳಿದ್ದು, ಈ ಅಧ್ಯಯನದಲ್ಲಿ ಕೇವಲ ತಮಿಳು ಮಾತನಾಡುವ ಆಯ್ದ ಭಾಷಾದ್ವೀಪಗಳನ್ನು ಮಾತ್ರ ಅಧ್ಯಯನದ ನಿಖರತೆಗಾಗಿ ನಿರ್ದಿಷ್ಟಪಡಿಸಿಕೊಳ್ಳಲಾಗಿದೆ. ತಮಿಳು ಭಾಷಾದ್ವೀಪಗಳಲ್ಲಿ ಬಳಕೆಯಲ್ಲಿರುವ ತಮಿಳು ಭಾಷೆಯ ರಚನಾತ್ಮಕ ವಿವರಣೆಯು ಈ ಅಧ್ಯಯನದ ಉದ್ದೇಶವಲ್ಲ. ಸಮಾಜೋಭಾಷಿಕ ವಿವರಣೆಗೆ ಪೂರಕವಾಗಿ ಮಾತ್ರ ಕೆಲವು ರಚನೆಗಳ ಪರಿಶೀಲಿಸಿದೆ.

ಪ್ರಸ್ತುತ ಅಧ್ಯಯನಕ್ಕೆ ಭಾಷಿಕವಾಗಿ ನುಡಿಜಗಿತ, ನುಡಿಬೆರಕೆ, ಭಾಷಾಸಂಗೋಪನ, ಸಾಂಸ್ಕೃತಿಕ ಅಭಿವ್ಯಕ್ತಿ ಕ್ರಮ, ಮಕ್ಕಳ ಶಿಕ್ಷಣ ಕ್ರಮ, ವಿವಿಧ ಸಂದರ್ಭಗಳಲ್ಲಿ ಬಳಕೆಯಾಗುವ ಭಾಷೆ, ಏಕಬಾಷೆ, ದ್ವಿಭಾಷಿಕತೆ, ಭಾಷೆಯ ಮೂಲಕ ಸಾಮಾಜಿಕ ಸ್ಥಾನಮಾನಗಳ ಅಧ್ಯಯನ ಮಾಡುವ ವ್ಯಾಪ್ತಿಯನ್ನು ಗುರುತಿಸಿಕೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ**

ಕರ್ನಾಟಕದ ಭಾಷಾದ್ವೀಪಗಳ ಸಮಾಜೋಭಾಷಿಕ ಅಧ್ಯಯನ ತಮಿಳು ಭಾಷಿಕರನ್ನು ಅನುಲಕ್ಷಿಸಿ ವಿಷಯವನ್ನು ಅಧ್ಯಯನಕ್ಕೆ ಸಂಬಂಧಿಸಿದಂತೆ ಒಟ್ಟು ಎಂಟು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಅಧ್ಯಾಯ ಒಂದು: ಅಧ್ಯಯನದ ಉದ್ದೇಶ, ವ್ಯಾಪ್ತಿ–ಮಿತಿ, ಸ್ವರೂಪ

ಅಧ್ಯಾಯ ಎರಡು: ಪೂರ್ವ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ ಮೂರು: ಭಾಷಾದ್ವೀಪದ ಪರಿಕಲ್ಪನೆ

ಅಧ್ಯಾಯ ನಾಲ್ಕು: ಕರ್ನಾಟಕದಲ್ಲಿನ ತಮಿಳು ಭಾಷಾದ್ವೀಪಗಳು

ಅಧ್ಯಾಯ ಐದು: ಭಾಷಾದ್ವೀಪಗಳ ಸಮಾಜೋಭಾಷಿಕ ಅಧ್ಯಯನ

ಅಧ್ಯಾಯ ಆರು: ಭಾಷಾದ್ವೀಪಗಳ ತಮಿಳು ಭಾಷಾ ಸ್ವರೂಪ

ಅಧ್ಯಾಯ ಏಳು: ಭಾಷಾದ್ವೀಪಗಳಲ್ಲಿ ಮಕ್ಕಳ ಶಿಕ್ಷಣ ಮತ್ತು ಭಾಷೆ

ಅಧ್ಯಾಯ ಎಂಟು: ಸಮಾರೋಪ

**ಅಧ್ಯಾಯ ಒಂದು:** ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರಾಥಮಿಕ ಮಾಹಿತಿಗಳಾದ ಅಧ್ಯಯನದ ಉದ್ದೇಶ, ಅಧ್ಯಯನದ ವ್ಯಾಪ್ತಿ, ಅಧ್ಯಯನದ ಸ್ವರೂಪ ಮತ್ತು ಅಧ್ಯಯನದ ವಿಧಾನಗಳ ಕುರಿತು ತಿಳಿಸಿದೆ. ಒಟ್ಟು ಅಧ್ಯಯನದ ಉದ್ದೇಶಗಳನ್ನು ಗುರುತಿಸಿಕೊಂಡು ಅಧ್ಯಯನದ ವಿಧಿವಿಧಾನಗಳನ್ನು ವಿವರಿಸಿದೆ.

**ಅಧ್ಯಾಯ ಎರಡು:** ಭಾಷಾದ್ವೀಪದ ಕುರಿತು ಈ ಹಿಂದೆ ಪ್ರಕಟಗೊಂಡಿರುವ ಲೇಖನ, ಮಹಾಪ್ರಬಂಧಗಳು, ಪುಸ್ತಕಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಅವುಗಳಲ್ಲಿ ಕೆಲವು ಲೇಖನಗಳಾಗಿದ್ದು, ಇನ್ನು ಕೆಲವು ವಿಶೇಷವಾಗಿ ತಮಿಳು ಭಾಷಿಕರ ಕುರಿತ ಅಧ್ಯಯನಗಳಾಗಿವೆ. ಅವುಗಳನ್ನು ಅಧ್ಯಯನಕ್ಕೆ ಸೀಮಿತಗೊಳಿಸಿಕೊಂಡು ಪರಾಮರ್ಶಿಸಿ ವಿಶ್ಲೇಷಿಸಿದೆ. ಈ ಅಧ್ಯಯನವು ಅವುಗಳಿಗಿಂತ ಹೇಗೆ ಭಿನ್ನ ಎಂದು ತಿಳಿಸಿದೆ.

**ಅಧ್ಯಾಯ ಮೂರು:** ಈ ಅಧ್ಯಾಯದಲ್ಲಿ 'ಭಾಷಾದ್ವೀಪ' ಪರಿಕಲ್ಪನೆಯನ್ನು ಕ್ಷೇತ್ರಕಾರ್ಯದ ಮಾಹಿತಿಯ ಮೇರೆಗೆ ಕಟ್ಟಿಕೊಡಲಾಗಿದೆ. ಅಂದರೆ ಕರ್ನಾಟಕದಲ್ಲಿ ಈವರೆಗೂ ಭಾಷಾದ್ವೀಪಗಳ ಕುರಿತು ಅಧ್ಯಯನಕಾರರು ಏನು ಹೇಳಿದ್ದಾರೆ? ಪ್ರಸ್ತುತದಲ್ಲಿ ಭಾಷಾದ್ವೀಪಗಳು ಎಂದು ಯಾವುಗಳನ್ನು ಗುರುತಿಸುತ್ತೇವೆ? ಅವು ರೂಪುಗೊಳ್ಳಲು ಕಾರಣಗಳೇನು, ಅವುಗಳ ಭಾಷಿಕ ಸ್ವರೂಪ, ಭೌಗೋಳಿಕ ಸ್ವರೂಪ, ಹೀಗೆ ಭಾಷಾದ್ವೀಪದ ಒಟ್ಟು ರಚನೆ ಸ್ವರೂಪದ ಕುರಿತು ಚರ್ಚಿಸಿದೆ.

**ಅಧ್ಯಾಯ ನಾಲ್ಕು:** ಅಧ್ಯಾಯ ಮೂರರಲ್ಲಿ ತಿಳಿಸಿದಂತೆ ಭಾಷಾದ್ವೀಪಗಳ ರಚನೆಯನ್ನು ಆಧರಿಸಿ ಕರ್ನಾಟಕದಲ್ಲಿನ ತಮಿಳು ಭಾಷಾದ್ವೀಪಗಳ ಸ್ವರೂಪ, ಭಾಷಾಬಳಕೆಯ ಕುರಿತು ವಿವರಿಸಲಾಗಿದೆ. ಅದರೊಂದಿಗೆ ಹೊಸಪೇಟೆ ಮತ್ತು ಹಿರಿಯೂರು ಪರಿಸರದಲ್ಲಿ ಇರುವಂತಹ ತಮಿಳು ಭಾಷಾದ್ವೀಪ ಪ್ರದೇಶಗಳನ್ನು ಗುರುತಿಸಿ ಮಾಹಿತಿ ನೀಡಿದೆ. ಹೀಗೆ ಕನ್ನಡ ಭಾಷಾಧ್ಯಯನದಲ್ಲಿ ತಮಿಳು ಭಾಷಾದ್ವೀಪಗಳ ಕುರಿತ ಕಲ್ಪನೆಯನ್ನು ಕಟ್ಟಿಕೊಡಲಾಗಿದೆ.

**ಅಧ್ಯಾಯ ಐದು:** ಈ ಅಧ್ಯಾಯದಲ್ಲಿ ತಮಿಳು ಭಾಷಾದ್ವೀಪಗಳ ಸಮಾಜೋಭಾಷಿಕ ಹಿನ್ನೆಲೆಯಲ್ಲಿ ಕನ್ನಡದ ಪರಿಸರದಲ್ಲಿ ವಾಸವಾಗಿರುವ ತಮಿಳರು ಸಾಮಾಜಿಕವಾಗಿ ಕನ್ನಡದೊಂದಿಗೆ ರಚನೆ ಹೊಂದಿರುವುದನ್ನು ತಿಳಿಸಲಾಗಿದೆ. ಇದರೊಂದಿಗೆ ಕನ್ನಡ ಪರಿಸರದಲ್ಲಿ ವಾಸವಾಗಿರುವ ಇವರು ರಾಜಕೀಯವಾಗಿ, ಸಾಮಾಜಿಕವಾಗಿ ಯಾವ ರೀತಿಯ ಸ್ಥಾನವನ್ನು ಪಡೆದಿದ್ದಾರೆ ಎನ್ನುವುದನ್ನು ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ವಿವರಿಸಿದೆ. ಇಲ್ಲಿ ತಮಿಳು ಭಾಷೆಯ ವಿವಿಧ ಜಾತಿ, ಧರ್ಮದವರು ಕನ್ನಡದ ಪರಿಸರದಲ್ಲಿ ಧಾರ್ಮಿಕ, ಸಾಮಾಜಿಕ, ರಾಜಕೀಯ ಸ್ಥಾನವನ್ನು ಪಡೆದಿರುವ ಕುರಿತು ಮಾಹಿತಿ ಸಂಗ್ರಹಿಸಿ ವಿವರಿಸಿದೆ. ಭಾಷಾದ್ವೀಪಗಳಲ್ಲಿ ಭಾಷಾಸಂಗೋಪನೆಯು ಒಂದು ಮುಖ್ಯ ಅಂಶವಾಗಿ ಕಂಡುಬರುತ್ತದೆ. ಭಾಷಾದ್ವೀಪಗಳ ಆವರಣದಲ್ಲಿ ತಮಿಳು ಭಾಷೆಯ ಬಳಕೆ ಮತ್ತು ಸಂಗೋಪನೆ ಹೇಗೆ ನಡೆಯುತ್ತದೆ? ಇದಕ್ಕೆ ಸಾಮಾಜಿಕ ಭಿನ್ನಾಂಶಗಳಾದ ಲಿಂಗ ಮತ್ತು ವರ್ಗಗಳು ಹೇಗೆ ಸಹಾಯಕವಾಗಿದೆ? ಭಾಷಾಸಂಗೋಪನೆಯಲ್ಲಿ ಈ ಎರಡು ಸಾಮಾಜಿಕ ಭಿನ್ನಾಂಶಗಳಲ್ಲಿ ಯಾವುದು ಹೆಚ್ಚು ಪಾತ್ರ ವಹಿಸುತ್ತದೆ ಎಂಬುದನ್ನು ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿಯಿಂದ ವಿಶ್ಲೇಷಿಸಿದೆ. ಈ ಮಾಹಿತಿಯನ್ನು ತಮಿಳು ಭಾಷಿಕರ ವಿವಿಧ ವರ್ಗ, ಜಾತಿ, ಲಿಂಗ ಇತರ ಅಂಶಗಳನ್ನು ಆಧರಿಸಿ ಮಾಹಿತಿ ಸಂಗ್ರಹಿಸಿ, ವರ್ಗೀಕರಿಸಿ ವಿಶ್ಲೇಷಿಸಿದೆ. ಭಾಷಾದ್ವೀಪಗಳಲ್ಲಿ ಯಾವ ಕಾರಣಗಳಿಂದಾಗಿ ತಮಿಳು ಭಾಷೆಯು ಕನ್ನಡದೊಂದಿಗೆ ಸಮೀಕರಣಗೊಳ್ಳುತ್ತಿದೆ ಎಂಬುದನ್ನು ನುಡಿಜಿಗತ ಮತ್ತು ನುಡಿಬೆರಕೆಗಳ ಮೂಲಕ ವಿವರಿಸಲಾಗಿದೆ. ಇದರೊಂದಿಗೆ ಕನ್ನಡದ ಪರಿಸರದಲ್ಲಿ ವಾಸವಾಗಿರುವ ತಮಿಳರು ಯಾವ ಪರಿಸರದಲ್ಲಿ, ಯಾವ ಕಾರಣಗಳಿಗಾಗಿ ಕನ್ನಡದ ದ್ವಿಭಾಷಿಕತೆಯ ನಂಟನ್ನು ಹೊಂದಿದ್ದಾರೆ ಎಂಬುದನ್ನು ತಿಳಿಸಲಾಗಿದೆ. ತಮಿಳು ಭಾಷಾದ್ವೀಪಗಳನ್ನು ಕೇವಲ ಭಾಷೆಯ ದ್ವೀಪಗಳಾಗಿ ನೋಡದೆ ಅವುಗಳನ್ನು ಸಾಂಸ್ಕೃತಿಕ, ಸಾಮಾಜಿಕ ಆಚರಣೆಗಳ ಹಿನ್ನೆಲೆಯಿಂದ ದ್ವೀಪಗಳಾಗಿ ಇರುವುದನ್ನು ಕಾಣಬಹುದು. ಹೀಗೆ ತಮಿಳು ಭಾಷಾದ್ವೀಪಗಳಲ್ಲಿ ಸಾಂಸ್ಕೃತಿಕ ಅಭಿವ್ಯಕ್ತಿಗಳನ್ನು ಮುಖ್ಯವಾಗಿರಿಸಿಕೊಂಡು ಕನ್ನಡದ ಪರಿಸರದಲ್ಲಿ ತಮಿಳರನ್ನು ಗುರುತಿಸಲು ಇರುವ ಸಾಂಸ್ಕೃತಿಕ, ಬದುಕಿನ ಕ್ರಮಗಳನ್ನು ಕಂಡುಕೊಳ್ಳಲಾಗಿದೆ.

**ಅಧ್ಯಾಯ ಆರು:** ಕರ್ನಾಟಕದಲ್ಲಿ ವಾಸವಾಗಿರುವ ತಮಿಳು ಭಾಷಿಕರು ಭಾಷಾದ್ವೀಪಗಳಲ್ಲಿ ಬಳಕೆ ಮಾಡುವ ತಮಿಳು ಭಾಷೆಯ ಕೆಲವು ಭಾಷಾಂಶಗಳಾದ ನಾಮಪದ, ಸಂಖ್ಯಾವಾಚಕಗಳು, ಸಂಬಂಧವಾಚಕಗಳ ಹಿನ್ನೆಲೆಯಲ್ಲಿ ಕಂಡುಕೊಂಡಿದೆ. ಇಲ್ಲಿ ಸಾಮಾಜಿಕ ವರ್ಗಗಳು ಬಳಕೆ ಮಾಡುವಂತೆ ವಿವರಿಸಲಾಗಿದೆ.

**ಅಧ್ಯಾಯ ಏಳು:** ತಮಿಳು ಮಕ್ಕಳ ಶಿಕ್ಷಣ ಎಂಬ ಶೀರ್ಷಿಕೆಯಡಿಯಲ್ಲಿ ತಮಿಳು ಮಕ್ಕಳು ಕನ್ನಡದ ಪರಿಸರದಲ್ಲಿ ಯಾವ ಭಾಷೆಯ ಮೂಲಕ ಶಿಕ್ಷಣ ಕಲಿಯುತ್ತಾರೆ? ಇದಕ್ಕೆ ಕಾರಣ ಮತ್ತು ಒತ್ತಡಗಳನ್ನು ವಿವರಿಸಲಾಗಿದೆ. ಕನ್ನಡದ ಪರಿಸರದಲ್ಲಿರುವ ತಮಿಳರಿಗೆ ಕನ್ನಡ ಕಲಿಕೆಗೆ ಇರುವ ಪ್ರೇರಕಾಂಶಗಳನ್ನು ಕಂಡುಕೊಂಡಿದೆ. ತಮಿಳು ಭಾಷೆಯನ್ನು ಕಲಿಯಲು ಇರುವ ಸಮಸ್ಯೆಗಳು ಮತ್ತು ಕಲಿಕೆಯ ನಂತರದಲ್ಲಿ ಇವರು ಸವಾಲುಗಳನ್ನು ಕ್ಷೇತ್ರಕಾರ್ಯ ಆಧರಿಸಿ ವಿವರಿಸಿದೆ. ಕರ್ನಾಟಕದಲ್ಲಿ ತಮಿಳು ಮಕ್ಕಳು ಇತರೆ ಪರಿಸರಗಳಲ್ಲಿ ಬಳಸುವ ಭಾಷೆಗಳ ಕುರಿತು ವಿವರಿಸಿದೆ.

**ಅಧ್ಯಾಯ ಎಂಟು:** ಈ ಅಧ್ಯಾಯದಲ್ಲಿ ಕಂಡುಕೊಂಡ ಫಲಿತಗಳು, ಅಧ್ಯಯನದ ಮಿತಿಗಳು, ಮುಂದಿನ ಅಧ್ಯಯನದ ಸಾಧ್ಯತೆಗಳನ್ನು ತಿಳಿಸಿದೆ.

**ಅಧ್ಯಯನದ ವಿಧಾನಗಳು**

* **ಅವಲೋಕನ ವಿಧಾನ:** ಭಾಷಾದ್ವೀಪಗಳಲ್ಲಿನ ಜನರು ಸಾಮಾಜಿಕ ಪರಿಸರದಲ್ಲಿ ಬಳಸುವ ಭಾಷೆ, ಮನೆವಾತಾವರಣದಲ್ಲಿ ಬಳಸುವ ಭಾಷೆ ಮತ್ತು ಭಾಷಿಕರ ಮನೋಧೋರಣೆಯನ್ನು ಈ ವಿಧಾನದಿಂದ ಗುರುತಿಸಿಕೊಳ್ಳುವುದು.

* **ಕ್ಷೇತ್ರಾಧ್ಯಯನ ವಿಧಾನ:** ಈ ವಿಧಾನದಲ್ಲಿ ಭಾಷಿಕರನ್ನು ಪ್ರಶ್ನಾವಳಿ ಮತ್ತು ನೇರವಾಗಿ ಸಂಪರ್ಕಿಸಿ ಅವರಿಂದ ಜೀವನಕ್ರಮ, ಭಾಷೆಯ ಬಗ್ಗೆ ಅವರಿಗಿರುವ ತಿಳುವಳಿಕೆ, ಭಾಷಾ ಬಳಕೆ ಹೀಗೆ ಹಲವು ಮಾಹಿತಿಯನ್ನು ಸಂಗ್ರಹಿಸಿ ವಿವರಿಸಲಾಗಿದೆ.

* **ಸಂದರ್ಶನ:** ಭಾಷಿಕ ಸಮುದಾಯದ ಮುಖಂಡರು, ಶಿಕ್ಷಕರು, ಅಧಿಕಾರಿಗಳು ಆಯ್ದ ಮಾಹಿತಿದಾರರನ್ನು ನೇರವಾಗಿ ಭೇಟಿ ಮಾಡಿ ಬೇರೆ ಬೇರೆ ಭಾಷಿಕ ಪರಿಸರದಲ್ಲಿ ಅವರಿಗಿರುವಂತಹ ಸವಾಲುಗಳು, ಸ್ಥಾನಮಾನ, ಮಾಹಿತಿದಾರನಿಂದ ಭಾಷೆ, ಭಾಷಾಬಳಕೆಯ ಸಂದರ್ಭ ಹೀಗೆ ಹಲವು ಅಂಶಗಳ ಕುರಿತು ತಿಳಿಯಲಾಗಿದೆ.

* ಭಾಷಾಧ್ಯಯನಕ್ಕೆ ಸಂಬಂಧಿಸಿದಂತೆ ವಿವರಣಾತ್ಮಕ ಮತ್ತು ವಿಶ್ಲೇಷಣಾತ್ಮಕ ಭಾಷಾವಿಜ್ಞಾನದ ವಿಧಾನವನ್ನು ಅನುರಿಸಿದೆ. ಅಂದರೆ ಸಮಾಜೋಭಾಷಿಕ ಅಧ್ಯಯನದ ಮಾದರಿಯಲ್ಲಿ ಸಾಮಾಜಿಕ ಭಿನ್ನಾಂಶಗಳಾದ ಜಾತಿ, ವಯಸ್ಸು, ಲಿಂಗ, ವರ್ಗ, ಪರಿಸರಗಳು ಹೀಗೆ ವಿವಿಧ ಅಂಶಗಳನ್ನು ಆಧರಿಸಿ ಅಧ್ಯಯನ ಮಾಡಲಾಗಿದೆ.

* * *

## ಅಧ್ಯಾಯ: ಎರಡು

# ಪೂರ್ವ ಅಧ್ಯಯನಗಳ ಸಮೀಕ್ಷೆ

ಭಾರತವನ್ನು ಬಹುಭಾಷಿಕ ಪರಿಸರ ಎಂದು ಹಲವು ಭಾಷಾವಿಜ್ಞಾನಿಗಳು ಹೇಳಿದ್ದಾರೆ. ಈ ಬಹುಭಾಷಿಕ ಪರಿಸರದಲ್ಲಿ ಕೆಲವು ಭಾಷೆಗಳು ಸೀಮಿತ ಸಾಮಾಜಿಕ ಪರಿಸರದಲ್ಲಿ ಬಳಕೆಯಲ್ಲಿದ್ದು, ಇನ್ನು ಕೆಲವು ಆಡಳಿತ, ಶೈಕ್ಷಣಿಕ ಭಾಷೆಗಳಾಗಿ ಬಳಕೆಯಲ್ಲಿವೆ. ಇಲ್ಲಿರುವ ಪ್ರತಿ ಭಾಷೆಯು ಜನಭಾಷೆಯಾಗಿದ್ದು, ಅವು ಆ ಜನರ ಜೀವನ ಮತ್ತು ಸಂಸ್ಕೃತಿ ಅಭಿವ್ಯಕ್ತಿಯನ್ನು ಒಳಗೊಂಡಿವೆ. ಈ ಕುರಿತು ಹಲವು ಅಧ್ಯಯನಗಳು ನಡೆದಿವೆ. ಆಧುನಿಕ ಭಾರತದ ಮಟ್ಟಿಗೆ ವಲಸೆ ಒಂದು ಪ್ರಕ್ರಿಯೆಯಾಗಿದ್ದು, ವಲಸೆ ಮೂಲಕ ಭಾಷೆ-ಸಂಸ್ಕೃತಿ-ಸಮುದಾಯಗಳು(ಸಮಾಜ) ವಿಸ್ತಾರತೆಯನ್ನು ಪಡೆಯುತ್ತಿವೆ. ಇದರಿಂದ ಬಹುತೇಕ ಭಾಷೆಗಳು ತನ್ನ ಭೌಗೋಳಿಕ ಚೌಕಟ್ಟನ್ನು ಮತ್ತು ಭಾಷಾಬಳಕೆಯ ಪರಿಸರವನ್ನು ವಿಸ್ತರಿಸಿಕೊಳ್ಳುತ್ತಿವೆ. ಇಂತಹ ಪರಿಸ್ಥಿತಿಯಲ್ಲಿ ವಲಸಿಗರು ತಮ್ಮ ಭಾಷೆಯನ್ನು ಭಿನ್ನ ಭಾಷಿಕ ಪರಿಸರದಲ್ಲಿ ಹೇಗೆ ಸಂಗೋಪನೆ ಮಾಡಿಕೊಂಡಿದ್ದಾರೆ ಎಂಬುದನ್ನು ತಿಳಿಯುವ ಅವಶ್ಯಕತೆ ಇದೆ. ಇನ್ನು ಕರ್ನಾಟಕದಲ್ಲಿ ವಲಸಿಗ ಸಮುದಾಯಗಳೆಂದು ಗುರುತಿಸಿಕೊಂಡಿರುವ ಲಂಬಾಣಿ, ರಾಜಸ್ಥಾನಿ ಶೇಟು, ಗುಜರಾತಿ ವ್ಯಾಪಾರಿ, ಬಂಗಾಳಿ ನಿರಾಶ್ರಿತರು, ಟಿಬೆಟ್‌ನ ನಿರಾಶ್ರಿತರು, ಇವರೊಂದಿಗೆ ನಮ್ಮ ನೆರೆಯ ರಾಜ್ಯಗಳ ವಲಸಿಗರಾದ ತೆಲುಗು, ತಮಿಳು, ಮಲಯಾಳಿ, ಮರಾಠಿ ಭಾಷಿಕರು ಕನ್ನಡದ ಪರಿಸರದಲ್ಲಿ ಹೇಗೆ ತಲೆಮಾರುಗಳಿಂದ ತಮ್ಮ ಭಾಷೆಯನ್ನು ಸಂಗೋಪನೆ ಮಾಡಿಕೊಂಡು ಬಂದಿದ್ದಾರೆ ಎಂಬುದನ್ನು ತಿಳಿಯಬೇಕಿದೆ. ಇದರೊಂದಿಗೆ ಈ ಭಾಷಿಕರು ತಾವು ನೆಲೆಸಿರುವ ಸ್ಥಳಗಳಲ್ಲಿ ನಿರ್ಮಿಸಿಕೊಂಡಿರುವ ಭಾಷಿಕ ಆವರಣಗಳನ್ನು ಕಂಡುಕೊಳ್ಳಬೇಕಿದೆ ಮತ್ತು ಇತರೆ ಪರಿಸರದೊಂದಿಗೆ ಹೊಂದಿಕೊಂಡು, ಭಾಷಿಕ ಅಂಶಗಳನ್ನು ಕಳೆದುಕೊಂಡಿರುವ ಕುರಿತು ಕಂಡುಕೊಳ್ಳಬೇಕಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಈಗಾಗಲೇ ಕರ್ನಾಟಕದ ಮತ್ತು ಕರ್ನಾಟಕದ ಹೊರಭಾಗದಲ್ಲಿ ತಮಿಳು ಭಾಷಿಕರ ಕುರಿತು ನಡೆದಿರುವ ಭಾಷಿಕ-ಸಮಾಜೋಭಾಷಿಕ ಲೇಖನಗಳನ್ನು, ಸಂಶೋಧನಾ ಅಧ್ಯಯನಗಳನ್ನು ಪೂರಕವಾಗಿ ಬಳಸಿಕೊಂಡು ಪರಾಮರ್ಶಿಸಿ ಈ ಕೆಳಗೆ ಸಂಗ್ರಹಿಸಿದೆ.

೧. ತಮಿಳ್ ಇನ್ ಫಿಜಿ(Tamil in Fiji)

ಈ ಲೇಖನವು ಐಜೆಡಿಎಲ್ ಪತ್ರಿಕೆಯ IJDL Vol XXVIII NO 2 ಸಂಚಿಕೆಯಲ್ಲಿ ಪ್ರಕಟಗೊಂಡಿದೆ. ಫ್ರಾನ್ಸಿಸ್ ಮುಗ್ಲೆರ್, ದಕ್ಷಿಣ ಫೆಸಿಫಿಕ್ ವಿಶ್ವವಿದ್ಯಾಲಯ ಮತ್ತು ಸ್ಯಾಮ್ ಮೋಹನ್ ಲಾಲ್, ಕೇಂದ್ರೀಯ ಭಾರತೀಯ ಭಾಷಾ ಸಂಸ್ಥಾನ ಮೈಸೂರು ಇವರು ಬರೆದಿದ್ದಾರೆ.

ಒಟ್ಟು ಲೇಖನವು ಫಿಜಿ ದೇಶದಲ್ಲಿ ತಮಿಳು ಭಾಷಿಕರು ನೆಲಸಿದ ಬಗೆ, ಅವರು ಸಾಮಾಜಿಕ ಮತ್ತು ಖಾಸಗಿ ಆವರಣಗಳಲ್ಲಿ ಬಳಸುವ ಭಾಷೆ, ಪಿಜಿ ದೇಶದಲ್ಲಿ ತಮಿಳು ಭಾಷಿಕರಿಂದ ಉಂಟಾಗಿರುವ ಬಹುಭಾಷಿಕತೆಯ ಕುರಿತು ಚರ್ಚಿಸಲಾಗಿದೆ. ಈ ಲೇಖನದ ಮುಖ್ಯ ಉದ್ದೇಶವಾಗಿ ಈ ಕೆಳಗಿನ ಅಂಶಗಳು ಕಂಡುಬರುತ್ತವೆ. ಬೇರೊಂದು ಪ್ರದೇಶದಲ್ಲಿ ತಮಿಳು ಭಾಷಿಕರು ತಮ್ಮ ಭಾಷೆಯನ್ನು ಹೇಗೆ ಉಳಿಸಿಕೊಂಡಿದ್ದಾರೆ ತಮಿಳು ಭಾಷಾಬಳಕೆಯ ಸ್ವರೂಪ(ಆಡುಮಾತು-ಬರವಣಿಗೆ), ಫಿಜಿ ಸ್ಥಳೀಯ ಭಾಷೆಯು ತಮಿಳಿನ ಭಾಷಾಬಳಕೆಯ ಮೇಲೆ ಪ್ರಭಾವವೇನು?

ಲೇಖನವು ಸಮಾಜೋಭಾಷಿಕ ಅಧ್ಯಯನದಲ್ಲಿ ರೂಪುಗೊಂಡಿದ್ದು, ಕ್ಷೇತ್ರ ಅಧ್ಯಯನ ಮಾದರಿಯದ್ದಾಗಿದೆ. ಈ ಕ್ಷೇತ್ರಕಾರ್ಯಕ್ಕೆ ದಕ್ಷಿಣ ಪೆಸಿಫಿಕ್ ವಿಶ್ವವಿದ್ಯಾಲಯದ ೧೦ ಜನ ಭಾಷಾಶಾಸ್ತ್ರದ ವಿದ್ಯಾರ್ಥಿಗಳು ಭಾಷಾಬಳಕೆ ಮತ್ತು ಭಾಷಾ ಮನೋಭಾವದ ೨೦೦ ಪ್ರಶ್ನೆಗಳುಳ್ಳ ಪ್ರಶ್ನಾವಳಿಯನ್ನು ತಯಾರಿಸಿ ಮಾಹಿತಿ ಸಂಗ್ರಹಿಸಿದ್ದಾರೆ. ಫಿಜಿ ದೇಶದಲ್ಲಿರುವ ತಮಿಳು ಭಾಷಿಕರನ್ನು ಕ್ಷೇತ್ರಕಾರ್ಯದ ಮೂಲಕ ಸಂಪರ್ಕಿಸಿ ಮಾಹಿತಿಗಳನ್ನು ಸಂಗ್ರಹಿಸಿ ಭಾಷಿಕ ವಿವರಣೆ ಸಮಾಜೋಭಾಷಿಕ ವಿವರಣೆಗಳನ್ನು ನೀಡಿದ್ದಾರೆ.

ಪ್ರಸ್ತುತ ಅಧ್ಯಯನಕ್ಕೆ ಸಬಂಧಿಸಿದಂತೆ ಈ ಲೇಖನವನ್ನು ಪೂರ್ವ ಅಧ್ಯಯನಗಳ ಸಮೀಕ್ಷೆಯಲ್ಲಿ ಬಳಸಿಕೊಳ್ಳಲು ಕಾರಣವೆಂದರೆ ಇಡೀ ಲೇಖನವು ಅನ್ಯಭಾಷಿಕರ ಮಧ್ಯ ಬದುಕುತ್ತಿರುವ ಒಂದು ಭಾಷಿಕ ಸಮುದಾಯದ ಸ್ವರೂಪವನ್ನು ಕುರಿತು ತಿಳಿಸುತ್ತದೆ. ಫಿಜಿ ದೇಶದಲ್ಲಿ ಫಿಜಿನ್ಸ್ ಮತ್ತು ಇಂಡೋ ಫಿಜಿನ್ಸ್ ಎಂದು ಗುರುತಿಸಿ ಇಂಡೋ ಫಿಜಿನ್ಸ್ ಭಾಷೆಗಳನ್ನು ಪರಿಚಯಿಸಲಾಗಿದೆ. ಈ ಒಟ್ಟು ಚೌಕಟ್ಟಿನಲ್ಲಿ ಇದನ್ನು ಭಾಷಾದ್ವೀಪವೆಂದು ಪರಿಗಣಿಸಿ ಭಾಷಾಬಳಕೆ, ಭಾಷಾ ಸಂಗೋಪನೆ ದೃಷ್ಟಿಯಿಂದ ಈ ಲೇಖನವನ್ನು ಬಳಸಿಕೊಳ್ಳಲಾಗಿದೆ.

**ಲೇಖನದ ಸ್ವರೂಪ**

ಈ ಲೇಖನವು ಫಿಜಿ ದೇಶದಲ್ಲಿ ತಮಿಳು ಭಾಷಿಕರು ವಲಸೆ ಹೋಗಿ ನೆಲಸಲು ಕಾರಣ, ಕಾಲಘಟ್ಟ, ಫಿಜಿ ದೇಶದ ಜನಗಣತಿ, ಭೌಗೋಳಿಕ ಲಕ್ಷಣ, ಇಂದಿನ ತಮಿಳು ಭಾಷೆಯ ಜ್ಞಾನ, ತಮಿಳು ಭಾಷೆಯ ಬಳಕೆ, ಭಾಷಾ ಸಂಗೋಪನೆ ಪ್ರಯತ್ನ, ಫಿಜಿ ತಮಿಳಿನ ರಚನೆ, ಆಕೃತಿಮಾಗಳ ರಚನೆ–ಸಂಖ್ಯಾವಾಚಕಗಳು, ಈ ಭಾಷೆಯ ಬರವಣಿಗೆಯ ಮೇಲಾಗಿರುವ ಪರಿಣಾಮಗಳು, ಆಡುಮಾತಿಗೂ ಬರವಣಿಗೆಗೂ ಇರುವ ವ್ಯತ್ಯಾಸಗಳು ಹೀಗೆ ಬೇರೆ ಬೇರೆ ಉಪಘಟಕಗಳಾಗಿ ವಿಂಗಡಿಸಿಕೊಂಡು ಲೇಖನವನ್ನು ರಚಿಸಲಾಗಿದೆ.

**ಲೇಖನದಲ್ಲಿ ಮುಖ್ಯವಾಗಿ ಗಮನಿಸಿದ ಅಂಶಗಳು**

ಭಾರತೀಯರ ವಲಸೆ: ಭಾರತೀಯರು ಒಪ್ಪಂದದ ಮೇಲೆ ಕೂಲಿ ಕಾರ್ಮಿಕರಾಗಿ ಫಿಜಿ ದೇಶಕ್ಕೆ ವಲಸೆ ಹೋದವರು. ೧೮೭೯ರಿಂದ ೧೯೧೬ರವರೆಗೆ ಸುಮಾರು ೬೦.೦೦೦ ಜನರನ್ನು ಬ್ರಿಟಿಷ್ ವಸಾಹತು ಸರ್ಕಾರಗಳು ಕಬ್ಬು ಬೆಳೆ ಕೆಲಸಕ್ಕಾಗಿ(Sugar-cane plantations) ಉತ್ತರಭಾರತ ಮತ್ತು ದಕ್ಷಿಣಭಾರತದ ಬೇರೆ ಬೇರೆ ಭಾಷಿಕರನ್ನು ಕರೆದೊಯ್ಯಲಾಗಿತ್ತು. ಈ ಕೂಲಿ ಕಾರ್ಮಿಕರಲ್ಲಿ ಉತ್ತರ ಭಾರತದವರು ಹಿಂದಿ ಮತ್ತು ಹಿಂದಿಯ ಉಪಭಾಷೆಗಳನ್ನು ಬಳಸುತ್ತಿದ್ದರು. ೧೯೦೩ರಿಂದ ೧೯೧೬ರ ವರೆಗೆ ಒಪ್ಪಂದದ ಮೇಲೆ ಕೂಲಿ ಕಾರ್ಮಿಕರಾಗಿ ತಮಿಳು ಮತ್ತು ಇತರೆ ದ್ರಾವಿಡ ಭಾಷೆಯವರಾದ ತಮಿಳು, ತೆಲುಗು, ಮಲಯಾಳಿ, ಕನ್ನಡದವರು ಫಿಜಿ ದೇಶಕ್ಕೆ ವಲಸೆ ಹೋಗಿರುವುದನ್ನು ಇಲ್ಲಿ ಗುರುತಿಸಲಾಗಿದೆ. ಲೇಖನದಲ್ಲಿ ನೀಡುವ ವಿವರಣೆಯಂತೆ

| ಭಾಷೆ | ಸಂಖ್ಯೆ | ಶೇಕಡ |
|---|---|---|
| ತೆಲುಗು | ೩೧೮ | ೫೪.೦ |
| ತಮಿಳು | ೧೬೪ | ೨೭.೮ |
| ಕನ್ನಡ | ೩೨ | ೫.೪ |
| ಮಲಯಾಳಿ | ೧೭ | ೨.೯ |
| ಮರಾಠಿ | ೩೩ | ೫.೬ |
| ಹಿಂದುಸ್ತಾನಿ | ೨೫ | ೪.೨ |

(Source: Siegel 1987:147)

ಹೀಗೆ ದಕ್ಷಿಣ ಭಾರತದ ಹಲವು ಭಾಷಿಕರು ವಲಸೆ ಹೋಗಿರುವ ದಾಖಲೆಗಳನ್ನು ಸಿಗೆಲ್ ಅವರು ದಾಖಲೆಗಳನ್ನು ಆಧರಿಸಿ ವಿವರಿಸುತ್ತಾರೆ. ಇದರೊಂದಿಗೆ ದ್ರಾವಿಡ ಭಾಷೆಯವರು ಯಾವ ಯಾವ

ಪ್ರದೇಶ(ಜಿಲ್ಲೆಗಳಿಂದ)ಗಳಿಂದ ವಲಸೆ ಹೋಗಿದ್ದಾರೆ ಎಂಬ ಮಾಹಿತಿಯನ್ನು ಕೆಳಗಿನ ಕೋಷ್ಟಕದಲ್ಲಿ ತಿಳಿಸಿದ್ದಾರೆ.

| ಜಿಲ್ಲೆಗಳ ಹೆಸರು | ರಾಜ್ಯ | ವಲಸಿಗರ ಸಂಖ್ಯೆ | ಶೇಕಡ |
|---|---|---|---|
| ಉತ್ತರ ಆರ್ಕಾಟ್ | ತಮಿಳುನಾಡು | ೧೫೬ | ೨೬.೫ |
| ಅನಂತಪುರಂ | ಆಂಧ್ರಪ್ರದೇಶ | ೫೯ | ೧೦.೦ |
| ಗೋದಾವರಿ | ಆಂಧ್ರಪ್ರದೇಶ | ೫೬ | ೯.೫ |
| ವಿಶಾಖಪಟ್ಟಣಂ | ಆಂಧ್ರಪ್ರದೇಶ | ೪೦ | ೬.೮ |
| ಕರ್ನೂಲ್ | ಆಂಧ್ರಪ್ರದೇಶ | ೩೬ | ೬.೧ |
| ಚೆಂಗಲ್‌ಪೇಟೆ | ತಮಿಳುನಾಡು | ೩೫ | ೫.೯ |
| ಕಡಪ | ಆಂಧ್ರಪ್ರದೇಶ | ೨೭ | ೪.೬ |
| ಸೇಲಂ | ತಮಿಳುನಾಡು | ೨೨ | ೩.೭ |
| ಬಳ್ಳಾರಿ | ಕರ್ನಾಟಕ | ೨೦ | ೩.೪ |
| ಸೊಲ್ಲಾಪುರ | ಮಹಾರಾಷ್ಟ್ರ | ೧೬ | ೨.೭ |
| ನೆಲ್ಲೂರು | ಆಂಧ್ರಪ್ರದೇಶ | ೧೩ | ೨.೨ |
| ಮಲಬಾರ್ | ಕೇರಳ | ೧೨ | ೨.೦ |

(Source: Siegel 1987:136)

ಈ ಅಂಕಿ–ಅಂಶಗಳ ವಿವರಣೆ ನೀಡುತ್ತಾ ಲೇಖಕರು ಫಿಜಿ ದೇಶದಲ್ಲಿ ಭಾರತೀಯ ವಲಸೆಗಾರರಿಂದ ನಿರ್ಮಾಣವಾದ 'ಫಿಜಿ–ಹಿಂದಿ'ಯ ಕುರಿತು ವಿವರಿಸುತ್ತಾರೆ. ಈ ವಲಸೆ ಪ್ರಕ್ರಿಯೆಯಲ್ಲಿ ಉತ್ತರ ಭಾರತದ ಹಿಂದಿ ಮಾತನಾಡುವವರು ಮೊದಲು ಫಿಜಿಯಲ್ಲಿ ನೆಲಸಿದ್ದರಿಂದ 'ಫಿಜಿ–ಹಿಂದಿ' ರೂಪುಗೊಂಡಿತು. ನಂತರ ದ್ರಾವಿಡ ಭಾಷಿಕರು ನೆಲಸಿದ್ದರಿಂದ ದ್ರಾವಿಡ ಭಾಷೆಗಳ ಮೇಲೆ ಫಿಜಿ–ಹಿಂದಿಯ ಒತ್ತಡವು ಹೆಚ್ಚಿತು. ಕಾಲು ಶತಮಾನದ ನಂತರದಲ್ಲಿ ಫಿಜಿ–ಹಿಂದಿಯು ತುಂಬಾ ವಿಸ್ತಾರತೆಯನ್ನು ಪಡೆದು 'ಲಿಂಗ್ವಾ ಫ್ರಾಂಕ'(IJDL Vol XXVIII NO 2, ಪುಟ–೧೪) ಆಗಿ ರೂಪುಗೊಂಡಿತ್ತು ಎಂದು ತಿಳಿಸುತ್ತಾರೆ.

ಫಿಜಿ ದೇಶದ ೧೯೫೬ ಮತ್ತು ೧೯೬೬ರ ಜನಗಣತಿಯನ್ನು ಆಧರಿಸಿ ದ್ರಾವಿಡ ಭಾಷೆಗಳ ಕುರಿತು ವಿವೇಚಿಸಿದ್ದಾರೆ. ಇಲ್ಲಿ ಶೇ.೩೩ರಷ್ಟು ತಮಿಳು ಭಾಷಿಕರು ತಮ್ಮ ಭಾಷೆಯನ್ನು ಕಳೆದುಕೊಂಡಿರುವುದನ್ನು ಸಿಗೆಲ್ ಅವರ ಅಂಕಿ–ಅಂಶಗಳಿಂದ ವಿವರಿಸಿದ್ದಾರೆ. ಇದರೊಂದಿಗೆ ಫಿಜಿ ದೇಶದ ಜನಗಣತಿಯನ್ನು ಭಾಷೆಯ ದೃಷ್ಟಿಯಿಂದ ಸರಿಯಾದ ಗಣತಿಯಲ್ಲ ಎಂದು ಅಭಿಪ್ರಾಯಿಸುತ್ತಾರೆ. ಅಂದರೆ ದ್ರಾವಿಡ ಭಾಷೆಯವರು ತಮಿಳು ಮತ್ತು ತೆಲುಗು ಮಾತನಾಡುತ್ತಿದ್ದರೆ ಅವರನ್ನು ಕೇವಲ ತಮಿಳು

ಮಾತನಾಡುವವರು ಎಂದು ದಾಖಲಿಸಿಕೊಳ್ಳಲಾಗಿದೆ. ಹೀಗೆ ಮತ್ತೊಂದು ಭಾಷೆಯವರ ಸಂಖ್ಯೆ ಕಡಿಮೆಯಾಗಿದೆ ಎಂದು ತಿಳಿಸುತ್ತಾರೆ.

ಲೇಖನದಲ್ಲಿ ಮುಖ್ಯವಾಗಿ ಭಾಷಿಕರ ಮನೋಭಾವದ ಕುರಿತು ವಿವೇಚಿಸಲಾಗಿದೆ. ಫಿಜಿಯಲ್ಲಿರುವ ತಮಿಳು ಭಾಷಿಕರು 'Do you speak Tamil?' ಪ್ರಶ್ನೆಗೆ ಸಂಬಂಧಿಸಿದಂತೆ ಸಂಗ್ರಹಿಸಿದ ಮಾಹಿತಿಯನ್ನು ಕೆಳಗಿನ ಕೋಷ್ಟಕದಲ್ಲಿ ತಿಳಿಸುತ್ತಾರೆ.

| 15-25 | 30-45 | +50 |
|---|---|---|
| 11.6 | 29.3 | 59.1 |

ಕೋಷ್ಟಕವು 'ನೀವು ತಮಿಳು ಮಾತನಾಡುವಿರ?' ಎಂಬ ಪ್ರಶ್ನೆಗೆ ಸಂಬಂಧಿಸಿದ ಮಾಹಿತಿಯನ್ನು ವಯೋಮಾನ ಆಧರಿಸಿ ಎಷ್ಟು ಜನರು ಬಳಸುತ್ತಾರೆ ಎಂಬುದನ್ನು ಶೇಕಡವಾರು ಮಾಹಿತಿಯಲ್ಲಿ ತಿಳಿಸಲಾಗಿದೆ. ಇಲ್ಲಿ ೧೫–೨೫ ವರ್ಷದವರೆಗಿನ ವಯೋಮಾನದವರು ಶೇ.೧೧.೬ರಷ್ಟು ಮತ್ತು +೫೦ ವರ್ಷದವರು ಶೇ. ೫೯.೧ರಷ್ಟು ಎಂಬ ಅಂಕಿ–ಅಂಶಗಳನ್ನು ಗಮನಿಸಬಹುದು. ೫೦ ವರ್ಷ ಅಥವಾ ೫೦ ವರ್ಷಕ್ಕಿಂತ ಮೇಲ್ಪಟ್ಟವರು ಶೇ.೫೯.೧ರಷ್ಟು ಜನರು ತಮಿಳು ಭಾಷೆಯಲ್ಲಿ ಮಾತನಾಡುತ್ತೇವೆ ಎನ್ನುತ್ತಾರೆ. ಆದರೆ ೧೫–೨೫ ವರ್ಷದ ಜನರು ಕೇವಲ ಶೇ.೧೧.೬ರಷ್ಟು ಜನರು ತಮಿಳಿನಲ್ಲಿ ಮಾತನಾಡುತ್ತಾರೆ ಎಂಬುದನ್ನು ಗಮನಿಸಬಹುದು. ಅಂದರೆ ಭಾಷಾಸಂಗೋಪನೆ ದೃಷ್ಟಿಯಿಂದ ೧೫–೨೫ ವರ್ಷದವರ ಬಳಕೆಯ ಶೇ. ಸಂಖ್ಯೆಯಲ್ಲಿ ಹೆಚ್ಚಬೇಕಿತ್ತು. ಆದರೆ ಇಲ್ಲಿ ಶೇ. ಸಂಖ್ಯೆ ಕಡಿಮೆಯಾಗಿರುವುದು ತಮಿಳು ಬಳಸುವವರ ಸಂಖ್ಯೆ ಕಡಿಮೆಯಾಗುತ್ತಿದೆ ಎಂದು ತಿಳಿಸುತ್ತಾರೆ. ಇದಕ್ಕೆ ಕಾರಣಗಳನ್ನು ತಿಳಿಸುವ ಲೇಖಕರು ತಮಿಳು ಮನೆಮಾತನ್ನು ಉಳ್ಳವರ ಸಂಖ್ಯೆ ಕಡಿಮೆಯಾಗುತ್ತಿದ್ದು, ಇದು ಮುಂದಿನ ತಲೆಮಾರುಗಳಲ್ಲಿಯೂ ಕಂಡುಬರುತ್ತಿದೆ ಎಂದು ತೀರ್ಮಾನಿಸುತ್ತಾರೆ.

ಇನ್ನು ತಮಿಳು, ಫಿಜಿ–ಹಿಂದಿ, ಇಂಗ್ಲಿಷ್ ಭಾಷೆಗಳನ್ನು ಬಳಕೆ ಮಾಡುವ ಬಗ್ಗೆ ಚರ್ಚಿಸುತ್ತಾರೆ. ಅಂದರೆ ತಮ್ಮ ಪರಿಸರ ಮತ್ತು ಸಾಮಾಜಿಕ ಪರಿಸರದಲ್ಲಿ ವಿವಿಧ ವಯೋಮಾನದವರು ಈ ಮೂರು ಭಾಷೆಗಳಲ್ಲಿ ಯಾವ ಭಾಷೆಯನ್ನು ಬಳಸುತ್ತಾರೆ ಎಂಬುದನ್ನು ಈ ಕೆಳಗಿನ ಕೋಷ್ಟಕವು ತಿಳಿಸುತ್ತದೆ.

| | ಪೋಷಕರು | ಸಂಗಾತಿ | ಒಡಹುಟ್ಟಿದವರು | ಸಂಬಂಧಿಕರು | ಸ್ನೇಹಿತರು | ಮಕ್ಕಳು |
|---|---|---|---|---|---|---|
| ತಮಿಳು | ೪೩.೬ | ೨೭.೭ | ೨೧.೧ | ೧೫.೪ | ೭.೭ | ೬.೧ |
| ಫಿಜಿ–ಹಿಂದಿ | ೫೬.೪ | ೭೨.೨ | ೭೭.೬ | ೮೪.೦ | ೯೧.೭ | ೯೧.೯ |
| ಇಂಗ್ಲಿಷ್ | ೦.೦ | ೦.೦ | ೧.೩ | ೦.೬ | ೦.೬ | ೨.೦ |

ಹೀಗೆ ವಿವಿಧ ವಯೋಮಾನವನ್ನು ಅನುಸರಿಸಿ ಯಾವ ಭಾಷೆಯನ್ನು ಬಳಸುತ್ತಾರೆ ಎಂದು ತಿಳಿಸಲಾಗಿದೆ. ಈ ಕೋಷ್ಟಕದ ಮಾಹಿತಿಯಂತೆ ಮಕ್ಕಳು ತಮಿಳನ್ನು ಶೇ. ೬.೧ರಷ್ಟು ಮಾತ್ರ ಬಳಕೆ

ಮಾಡುತ್ತಾರೆ ಮತ್ತು ಮಕ್ಕಳು ಫಿಜಿ-ಹಿಂದಿಯನ್ನು ಶೇ. ೬೧.೯ರಷ್ಟು ಬಳಕೆ ಮಾಡುತ್ತಾರೆ. ಈ ಅಂಕಿ-ಅಂಶಗಳನ್ನು ಗಮನಿಸಿದರೆ ಫಿಜಿಯಲ್ಲಿ ತಮಿಳು ಯಾವ ಪರಿಸರದಲ್ಲಿ ಮತ್ತು ಯಾವ ವಯೋಮಾನದವರಲ್ಲಿ ಬಳಕೆಯಲ್ಲಿರುವ ಭಾಷೆ ಎಂದು ತಿಳಿಯುತ್ತದೆ. ಕೋಷ್ಟಕದಲ್ಲಿ ತಮಿಳು ಬಳಕೆಯ ಪ್ರಮಾಣ ಇಳಿಕೆಯಾಗಿದ್ದು, ಫಿಜಿ ಹಿಂದಿಯ ಬಳಕೆಯ ಪ್ರಮಾಣ ಮಾತ್ರ ಏರಿಕೆಯಾಗಿರುವುದನ್ನು ಗುರುತಿಸಿದ್ದಾರೆ. ಇದರೊಂದಿಗೆ ತಮಿಳು ಭಾಷೆಯ ಬಳಕೆ ಎಲ್ಲಿಯೂ ಶೇ. ೫೦ರಷ್ಟು ದಾಟಿಲ್ಲವೆಂದು ನಿರ್ಧರಿಸುತ್ತಾರೆ. ಈ ಪ್ರದೇಶಗಳಲ್ಲಿ ತಮಿಳು ಭಾಷೆಯು ಪೋಷಕರು, ಸಂಗಾತಿ, ಒಡಹುಟ್ಟಿದವರು, ಸಂಬಂಧಿಕರು ಹೀಗೆ ಕ್ರಮಾನುಗತವಾಗಿ ಮಾತನಾಡಲು ಇಚ್ಛಿಸುತ್ತಾರೆ ಎಂದು ತಿಳಿಸುತ್ತಾರೆ. ಭಾರತೀಯರಾದ ತಮಿಳು ಭಾಷಿಕ ಹಿನ್ನೆಲೆ ಇಲ್ಲದ ಮಕ್ಕಳು ಫಿಜಿ-ಇಂಡಿಯನ್ಸ್‌ಗಳಾಗಿ ರೂಪಗೊಳ್ಳುತ್ತಾರೆ. ಈ ರೀತಿಯ ಫಿಜಿ-ಇಂಡಿಯನ್ಸ್‌ಗಳ ಫಿಜಿ-ಹಿಂದಿ ಭಾಷೆಯು ದ್ರಾವಿಡ ಭಾಷೆಗಳ ಮೇಲೆ ಹೆಚ್ಚು ಪ್ರಭಾವ ಬೀರುತ್ತಿದೆ. ಆ ಮೂಲಕ ದ್ರಾವಿಡ ಭಾಷೆಗಳ ಸ್ಥಾನವನ್ನು ಆಕ್ರಮಿಸುತ್ತಿದೆ ಎಂದು ಹೇಳುತ್ತಾರೆ. ಆದರೆ ತಮಿಳು ಭಾಷಿಕರ ಮನೋಭಾವದ ಕುರಿತು ಹೇಳುತ್ತಾ, ಫಿಜಿಯಲ್ಲಿನ ತಮಿಳು ಭಾಷಿಕರು ಮನೆಮಾತಾಗಿ ತಮಿಳನ್ನು ಮಾತ್ರ ಬಳಕೆ ಮಾಡುತ್ತೇವೆ. ಮಕ್ಕಳು ತಮಿಳು ಭಾಷೆಯನ್ನು ಬಳಸುವುದಿಲ್ಲ ಮತ್ತು ತಮಿಳು ಭಾಷೆಯಲ್ಲಿ ಮಾತನಾಡುವುದಿಲ್ಲ. ಏಕೆಂದರೆ ಫಿಜಿಯಲ್ಲಿ ತಮಿಳು ಭಾಷೆಯನ್ನು ಸ್ವೀಕರಿಸುವುದಿಲ್ಲ ಎಂದು ತಿಳಿಸುತ್ತಾರೆ.

ಭಾಷಾಸಂಗೋಪನೆ ಕುರಿತು ವಿವರಿಸುತ್ತಾ, ಶಿಕ್ಷಣ ಇಲಾಖೆಯ ನಿರ್ದೇಶಕರು ತಮ್ಮ ವಸಾಹತು ಸರ್ಕಾರದ ಕಾರ್ಯದರ್ಶಿಗಳಿಗೆ ಒಂದು ಪತ್ರವನ್ನು ಭಾರತೀಯ ಭಾಷೆಗಳ ಕಲಿಕೆಯ ಕುರಿತು ಬರೆಯುತ್ತಾರೆ. ಇದರಿಂದಾಗಿ ೧೯೨೦ರಲ್ಲಿ ಪ್ರಾರಂಭಗೊಂಡಿದ್ದ 'ದೆನ್ ಸನ್ಮಾರ್ಗ ಐಕ್ಯಂ'(ಟಿಐಎಸ್‌ಐ) ಸಂಘವು ೧೯೫೦ರಲ್ಲಿ ೨೦ ಪ್ರಾಥಮಿಕ ಶಾಲೆಗಳನ್ನು ಪ್ರಾರಂಭಿಸಿ ತಮಿಳು ಭಾಷಾ ಶಿಕ್ಷಣ ನೀಡಲು ಪ್ರಾರಂಭಿಸಿತ್ತು. ಅಲ್ಲಿಗಾಗಲೇ ೨೦೦೦ ಮಕ್ಕಳು ತಮ್ಮ ಭಾಷೆಯಲ್ಲಿ ಶಿಕ್ಷಣ ಪಡೆಯುತ್ತಿದ್ದರು. ಹೀಗೆ ಈ ಶಾಲೆಗಳಲ್ಲಿ ಪ್ರಮಾಣಬದ್ಧ ತಮಿಳು ಭಾಷೆಯ ಬಳಕೆ ಮತ್ತು ಕಲಿಕೆ ರೂಢಿಗೊಳ್ಳಲಿಲ್ಲ. ಏಕೆಂದರೆ ತಮಿಳು ಭಾಷಿಕ ವಾತಾವರಣ ಇರಲಿಲ್ಲ. ಅಲ್ಲದೇ ಭಾಷಾ ಶಿಕ್ಷಕರ ಕೊರತೆ ಹೀಗೆ ಬೇರೆ ರೀತಿಯ ಕಾರಣಗಳಿದ್ದವು. ಆದ್ದರಿಂದ ಮೂಲ ತಮಿಳು ಭಾಷೆಯನ್ನು ಇಲ್ಲಿ ರೂಢಿಸಲಾಗಲಿಲ್ಲ ಎಂದು ಅಭಿಪ್ರಾಯಿಸುತ್ತಾರೆ. ಹೀಗೆ ಫಿಜಿಯಲ್ಲಿ ಹಲವು ತೊಡಕುಗಳಿಂದಲೇ ತಮಿಳು ಭಾಷೆಯು ಸಂಗೋಪನೆಯಾಗಿರುವುದನ್ನು ಕಾಣಬಹುದು ಎಂದು ತಿಳಿಸುತ್ತಾರೆ.

**ತಮಿಳುಫಿಜಿ**

'ತಮಿಳುಫಿಜಿ' ಭಾಷೆಯು ಫಿಜಿ ದೇಶದಲ್ಲಿ ಫಿಜಿ-ಹಿಂದಿ, ಇಂಗ್ಲಿಷ್ ಭಾಷೆಗಳ ಮಿಶ್ರಣದಿಂದ ರೂಢಿಸಿಕೊಂಡಿರುವ ಭಾಷೆಯಾಗಿದೆ. ತಮಿಳುಫಿಜಿ ಭಾಷೆಯಲ್ಲಿ ಹಿಂದಿ, ಇಂಗ್ಲಿಷ್ ಭಾಷೆಯ ಪದಗಳನ್ನು

ಬಳಕೆ ಮಾಡುತ್ತಾರೆ. ಇದನ್ನು ತಮಿಳು ಉಪಭಾಷೆ ಎಂದು ಗುರುತಿಸುತ್ತಾರೆ. ಇದು ಸಾಮಾಜಿಕ ವಾತಾವರಣದಲ್ಲಿ ಸಂಪರ್ಕಕ್ಕಾಗಿ ಬಳಸುವ ಭಾಷೆಯಾಗಿದೆ. ಈ ಭಾಷೆಯನ್ನು ಫಿಜಿಯಲ್ಲಿ ಹೇಗೆ ತಮಿಳು ಭಾಷೆಯವರು ಬಳಕೆ ಮಾಡುತ್ತಾರೆ, ಮನೆ ಮತ್ತು ಶಾಲಾ-ಸಾಮಾಜಿಕ ವಾತಾವರಣದಲ್ಲಿ ಬಳಕೆಯ ಭಿನ್ನತೆಯನ್ನು ಕಂಡುಕೊಳ್ಳುವುದು ಇಲ್ಲಿನ ಉದ್ದೇಶವಾಗಿದೆ ಎಂದು ತಿಳಿಸುತ್ತಾರೆ. ತಮಿಳುಫಿಜಿ ಭಾಷೆಯ ರಚನೆಯನ್ನು ಈ ಕೆಳಗಿನ ಉದಾಹರಣೆಗಳಿಂದ ಗಮನಿಸಬಹುದು. ಲೇಖಕರು ತಮಿಳುಫಿಜಿ ಭಾಷೆಯಲ್ಲಿ ಪ್ರಾಥಮಿಕ ಸಂಖ್ಯಾವಾಚಕಗಳನ್ನು ಹಿಂದಿ ಅಥವಾ ಇಂಗ್ಲಿಷ್ ಸಂಖ್ಯಾವಾಚಕಗಳನ್ನು ಬಳಕೆ ಮಾಡುತ್ತಿರುವುದನ್ನು ಗುರುತಿಸಿದ್ದಾರೆ. ಹಾಗೆಯೇ ೫೦ರ ಮೇಲಿನ ಸಂಖ್ಯಾವಾಚಕಗಳನ್ನು ಇಂಗ್ಲಿಷ್‌ನಿಂದಲೇ ಸ್ವೀಕರಿಸಿಕೊಂಡು ಬಳಸುತ್ತಿದ್ದಾರೆ ಎಂದು ಹೇಳುತ್ತಾರೆ. ಈ ಸಂಖ್ಯಾವಾಚಕಗಳು ಮೂಲ ತಮಿಳಿನಲ್ಲಿದ್ದರೂ ಅವುಗಳನ್ನು ಇಂಗ್ಲಿಷ್‌ನಲ್ಲಿ ಬಳಸುತ್ತಿದ್ದಾರೆ.

ಉದಾಹರಣೆಗೆ:

1. ange one to five paḍiccen six-kku dilkusha pōnen
   There I studied (from class) 1 to 5. I go to class 6 at Dilkusha(school)

2. forty-five I am nahi jantha tamille.
   "Forty-five I don't know in tamil

3. dai baini nāl bayya, reṇḍu baini, nāl peru
   2 sister 4 brothers 2 sisters 4 persons
   (FH) (FH) (T) (FH) (T) (FH) (T) (T)
   2 siter, 4 brothers, 2 sisters, 4 people

ಉದಾಹರಣೆ ೧ರಲ್ಲಿ ೧ರಿಂದ ೫ ಎನ್ನುವ ಸಂಖ್ಯಾವಾಚಕಗಳನ್ನು ಇಂಗ್ಲಿಷ್‌ನಲ್ಲಿ ಬಳಸಿರುವುದನ್ನು ಗಮನಿಸಬಹುದು. ಉದಾಹರಣೆ ೨ರಲ್ಲಿ ಪ್ರಾಥಮಿಕ ಸಂಖ್ಯಾವಾಚಕಗಳನ್ನು ಬಿಟ್ಟು ಮುಂದಿನ ಸಂಖ್ಯಾವಾಚಕಗಳನ್ನು ತಮಿಳು ಭಾಷೆಯಲ್ಲಿ ಗೊತ್ತಿಲ್ಲ ಎಂದು ಹೇಳಿರುವ ಹೇಳಿಕೆಯಾಗಿದೆ. ಉದಾಹರಣೆ ೩ರಲ್ಲಿ ನುಡಿಮಿಶ್ರಣವನ್ನು ಕಾಣುತ್ತೇವೆ. ಇದರಲ್ಲಿ ಫಿಜಿಹಿಂದಿ, ಇಂಗ್ಲಿಷ್, ತಮಿಳು ಭಾಷೆಗೆ ಸೇರಿದ ಪದಗಳಿರುವುದನ್ನು ಕಾಣಬಹುದು. ಹೀಗೆ ಫಿಜಿಯಲ್ಲಿ ತಮಿಳು ಭಾಷಿಕ ಸ್ವರೂಪವನ್ನು ಕಾಣಬಹುದು ಎಂದು ಉದಾಹರಣೆಗಳೊಂದಿಗೆ ವಿವರಿಸಿದ್ದಾರೆ.

ತಮಿಳುಫಿಜಿ ಭಾಷೆಯಲ್ಲಿ ಬಳಕೆಯಾಗುವ ರೂಪಗಳನ್ನು ತಿಳಿಸುತ್ತಾ ಪ್ರತ್ಯಯಗಳ ಬಳಕೆಯಲ್ಲಾಗಿರುವ ಬದಲಾವಣೆಗಳನ್ನು ತಿಳಿಸಿದ್ದಾರೆ. ಕೆಳಗಿನ ಉದಾಹರಣೆಗಳಲ್ಲಿ 'KKU' ಪ್ರತ್ಯಯವನ್ನು ಬಿಟ್ಟಿರುವುದನ್ನು ತಿಳಿಯಬಹುದು.

ಉದಾಹರಣೆಗೆ:

| | |
|---|---|
| nā madras pōne | nā madrasukku pōne |
| dilli | dillikku |
| skūl | skūlukku |

ಇನ್ನು ತಮಿಳುಫಿಜಿಯ ಬರವಣಿಗೆ ಮತ್ತು ಆಡುಮಾತಿನ ವ್ಯತ್ಯಾಸವನ್ನು ಗುರುತಿಸಿರುವ ಇವರು ಕೆಲವು ಉದಾಹರಣೆಗಳನ್ನು ತಿಳಿಸಿದ್ದಾರೆ.

ಉದಾಹರಣೆಗೆ:

| **written** | **IT Spoken** | **Gloss** |
|---|---|---|
| vēlai | vēle | 'work'(N) |
| Paḍiccal | paḍiccā | 'learn-COND'= 'if we learn' |
| appāvin pēru | appā pēru | 'father's name' |

ಹೀಗೆ ಹಲವು ವ್ಯತ್ಯಾಸಗಳನ್ನು ತಮ್ಮ ಲೇಖನದಲ್ಲಿ ತಿಳಿಸಿರುವ ಲೇಖಕರು, ಲೇಖನದ ಅಂತಿಮ ತೀರ್ಮಾನಗಳಲ್ಲಿ ಈ ಕೆಲವು ನಿರ್ಣಯಗಳನ್ನು ತಿಳಿಸುತ್ತಾರೆ. ಫಿಜಿಯಲ್ಲಿರುವ ತಮಿಳು ಭಾಷೆಯು ಬಳಕೆಯಿಂದ ಜಾರುತ್ತಿದೆ(ಕಳೆದುಹೋಗುತ್ತಿದೆ). ಫಿಜಿಯಲ್ಲಿ ತಮಿಳು ಭಾಷೆ ತೊಡಕುಗಳಲ್ಲಿ ಸಿಲುಕಿದೆ. ಅಂದರೆ ತಮಿಳು ಬಳಕೆಯಲ್ಲಿ ಫಿಜಿ, ಇಂಗ್ಲಿಷ್ ಭಾಷೆಗಳ ಬಳಕೆಯಿಂದ ಕೆಲವು ಪದಸಂಪತ್ತು ಮತ್ತು ವ್ಯಾಕರಣಾಂಶಗಳು ಇಲ್ಲವಾಗುತ್ತಿವೆ ಎನ್ನುತ್ತಾರೆ. ತಮಿಳು ಮನೆಭಾಷೆಯಾಗಿ ಇದ್ದರೂ ಸಾಮಾಜಿಕ ಭಾಷೆಯಲ್ಲಿ ಕಡಿತಗೊಳ್ಳುತ್ತಿದೆ. ಇದರಿಂದ ಅಲ್ಪಸಂಖ್ಯಾತರ ಭಾಷೆಯಾಗಿದೆ. ಇದರಿಂದ ಪ್ರತಿ ತಲೆಮಾರು ಸಹ ತಮ್ಮ ಭಾಷೆಯನ್ನು ಕಳೆದುಕೊಳ್ಳುತ್ತಿದೆ. ಇನ್ನು ಕೆಲವರು ತಮಿಳನ್ನು ತಮ್ಮ ಮುಂದಿನ ತಲೆಮಾರಿಗೆ ಕಲಿಸುತ್ತಿಲ್ಲ. ಇದಕ್ಕೆ ತಮಿಳು ಭಾಷೆಯ ಬಳಕೆಯ ಮಿತಿ ಹೊಂದಿರುವ ಆವರಣಗಳೂ ಕಾರಣವಾಗಿರಬಹುದು ಎಂದು ಅಭಿಪ್ರಾಯಿಸುತ್ತಾರೆ. ತಮಿಳು ಬಳಕೆಯಿಂದ ಜಾರಿ ಫಿಜಿ, ಇಂಗ್ಲಿಷ್‌ನ ಭಾಷೆಯ ಮಿಶ್ರಣ, ಭಾಷಾಸ್ವೀಕರಣಗಳು ನಡೆಯುತ್ತಿವೆ. ಇದು ಮೂಲತಮಿಳಿನಿಂದ ಭಿನ್ನವಾಗಿರುವುದನ್ನು ಕಾಣಬಹುದು. ಈ ತಮಿಳಿನಲ್ಲಿ ಫಿಜಿಇಂಗ್ಲಿಷ್ ಭಾಷೆಗೆ ಹೊಂದಿಕೊಂಡಂತೆ ಸರಳೀಕರಣಗೊಂಡು ಬಳಕೆ ಮಾಡುತ್ತಿರುವುದು ಗುರುತಿಸುತ್ತಾರೆ.

೨. **Convergence and Language shift in a Linguistic Minority A Sociolinguistic Study of Tamils in Bangalore city.**

ಈ ಸಂಶೋಧನಾ ಪುಸ್ತಕವು ಮೈಸೂರಿನ ಭಾರತೀಯ ಭಾಷಾ ಸಂಸ್ಥಾನದಿಂದ ೧೯೮೬ರಲ್ಲಿ ಪ್ರಕಟಗೊಂಡಿದೆ. ಸ್ಯಾಮ್ ಮೋಹನ್ ಲಾಲ್ ಅವರು ರಚಿಸಿದ್ದಾರೆ.

ಸಂಶೋಧನಾ ಅಧ್ಯಯನವು ತಮಿಳು ಮಾತೃಭಾಷೆಯನ್ನು ಹೊಂದಿರುವ ಹಾಗೂ ತಮಿಳುನಾಡಿನಿಂದ ಬೆಂಗಳೂರಿಗೆ ವಲಸೆ ಬಂದಿರುವ ಐಯ್ಯಂಗಾರ್ ಮತ್ತು ಮೊದಲಿಯಾರ್ ಸಮುದಾಯಗಳಲ್ಲಿ ಭಾಷಾ ಸಂಗೋಪನೆ, ಭಾಷಾ ಬದಲಾವಣೆ ಪ್ರಕ್ರಿಯೆ ಸ್ವರೂಪವನ್ನು ತಿಳಿಸುತ್ತದೆ. ಅಂದರೆ ಕನ್ನಡ ಆಡಳಿತ ಭಾಷೆಯಾಗಿರುವ ಈ ಪ್ರದೇಶದಲ್ಲಿ ತಮಿಳು ಭಾಷೆಯನ್ನು ಹೇಗೆ ಸಂಗೋಪನೆ ಮಾಡಲಾಗುತ್ತಿದೆ? ಕನ್ನಡ ಭಾಷೆಯ ಒತ್ತಡದಿಂದ ಆಗಿರುವ ಧ್ವನಿಮಾ ಬದಲಾವಣೆ, ಆಕೃತಿಮಾ ಬದಲಾವಣೆ ಮತ್ತು ವಾಕ್ಯರಚನೆಯಲ್ಲಾಗಿರುವ ಬದಲಾವಣೆಗಳನ್ನು ಗುರುತಿಸುವುದು ಈ ಅಧ್ಯಯನದ ಪ್ರಯತ್ನವಾಗಿದೆ. ಮುಖ್ಯವಾಗಿ ಲೇಖಕರು ಮುನ್ನುಡಿಯಲ್ಲಿ ಹೇಳುವಂತೆ ಈ ಅಧ್ಯಯನವನ್ನು ಮೂರು ಭಾಗಗಳಾಗಿ ವಿಂಗಡಿಸಿ ವಿವರಿಸಬಹುದು. ೧. ಐಯ್ಯಂಗಾರ್ ಸಮುದಾಯದ ತಮಿಳು ಭಾಷಾ ಬಳಕೆಯ ವಿಶೇಷತೆಗಳು. ೨. ಮೊದಲಿಯಾರ್ ಸಮುದಾಯದ ತಮಿಳು ಭಾಷಾಬಳಕೆಯ ವಿಶೇಷತೆಗಳು. ೩. ಪ್ರಸ್ತುತ ಎರಡು ಸಮುದಾಯಗಳ ಭಾಷಾಬಳಕೆಯ ಹೋಲಿಕೆ ಮತ್ತು ಭಿನ್ನತೆಗಳನ್ನು ಗುರುತಿಸುವುದು. ಇದರೊಂದಿಗೆ ಭಾಷಾ ಬಳಕೆಯಲ್ಲಾಗಿರುವ ಬದಲಾವಣೆಯನ್ನು ಗುರುತಿಸುವುದು ಎಂದು ತಿಳಿಸುತ್ತಾರೆ.

ಈ ಅಧ್ಯಯನವು ಕ್ಷೇತ್ರ ಅಧ್ಯಯನ ಮಾದರಿಯದ್ದಾಗಿದೆ. ಕ್ಷೇತ್ರಕಾರ್ಯದ ಮೂಲಕ ತಮಿಳು ಭಾಷಾಬಳಕೆ ಕುರಿತಂತೆ ಪ್ರಶ್ನಾವಳಿಗಳ ಮೂಲಕ ಮಾಹಿತಿ ಸಂಗ್ರಹಿಸಿ, ಸಮಾಜೋಭಾಷಿಕ ಹಿನ್ನೆಲೆಯಲ್ಲಿ ಭಾಷೆಯ ರಚನಾತ್ಮಕ, ವಿಶ್ಲೇಷಣಾತ್ಮಕ ಮಾದರಿಯಲ್ಲಿ ವಿವರಿಸಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಈ ಸಂಶೋಧನಾ ಅಧ್ಯಯನವನ್ನು ಪೂರ್ವ ಅಧ್ಯಯನಗಳ ಸಮೀಕ್ಷೆಯಲ್ಲಿ ಬಳಸಿಕೊಳ್ಳಲು ಕಾರಣವೆಂದರೆ ಬೆಂಗಳೂರು ನಗರ ಮತ್ತು ಗ್ರಾಮೀಣ ಪರಿಸರದಲ್ಲಿ ತಮಿಳು ಭಾಷಿಕರು ತಮ್ಮ ಭಾಷೆಯನ್ನು ಹೇಗೆ ಸಂಗೋಪನೆ ಮಾಡುತ್ತಿದ್ದಾರೆ? ತಮ್ಮ ಭಾಷೆಯ ಬಳಕೆಯಲ್ಲಿ ಮಾಡಿಕೊಂಡಿರುವ ಬದಲಾವಣೆಗಳೇನು? ಸ್ಥಳೀಯ ಪರಿಸರದೊಂದಿಗೆ ಸಾಮಾಜಿಕವಾಗಿ ಹೊಂದಿಕೊಂಡಿರುವುದನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆದ ಕಾರಣ ಪ್ರಸ್ತುತ ಅಧ್ಯಯನಕ್ಕೆ ಮುಖ್ಯವೆನಿಸಿದೆ.

**ಅಧ್ಯಯನ ವಿಧಾನದ ಸ್ವರೂಪ**

ಈ ಸಂಶೋಧನಾ ಅಧ್ಯಯನವು ತಮಿಳು ಭಾಷಿಕರನ್ನು ಐಯ್ಯಂಗಾರ್ ಮತ್ತು ಮೊದಲಿಯಾರ್ ಎಂಬ ಎರಡು ಸಮುದಾಯಗಳನ್ನಾಧರಿಸಿ ವಿಭಾಗಿಸಿಕೊಂಡಿದೆ. ಇದರೊಂದಿಗೆ ಸಾಮಾಜಿಕವಾಗಿ ಈ ಎರಡು ಸಮುದಾಯಗಳು ತಮಿಳು ಭಾಷೆಯ ಬಳಕೆ ಮತ್ತು ಕನ್ನಡದ ಸಾಮಾಜಿಕ ಪರಿಸರದಲ್ಲಿ ಯಾವ ಭಾಷೆಯನ್ನು ಬಳಸುತ್ತಾರೆ ಎನ್ನುವುದನ್ನು ಚಿಕ್ಕ ಚಿಕ್ಕ ಘಟಕಗಳಾಗಿ ರೂಪಿಸಿಕೊಂಡು ಅಧ್ಯಯನ ಮಾಡಿದ್ದಾರೆ. ಅಂದರೆ ಧ್ವನಿಮಾ, ವಾಕ್ಯಪದ್ಧತಿ, ಪದಕೋಶ–ಸಂಖ್ಯಾವಾಚಕಗಳು ಹೀಗೆ ಉಪ ಘಟಕಗಳಾಗಿ ವಿಂಗಡಿಸಿಕೊಂಡು ಲೇಖನವನ್ನು ರಚಿಸಲಾಗಿದೆ.

**ಈ ಅಧ್ಯಯನದಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳು**

ಸಂಶೋಧಕರು ಬೆಂಗಳೂರಿನ ತಮಿಳು ಭಾಷಿಕರನ್ನು ಎರಡು ಸಮುದಾಯಗಳಾಗಿ ವರ್ಗೀಕರಿಸಿಕೊಂಡು ಅಧ್ಯಯನ ಮಾಡಿದ್ದಾರೆ. ಮೊದಲಿಗೆ ಐಯ್ಯಂಗಾರ್ ಸಮುದಾಯದ ಕುರಿತು ವಿವರಿಸುತ್ತಾ, ಈ ಸಮುದಾಯವು ಬೆಂಗಳೂರಿಗೆ ಬಹು ಹಿಂದೆಯೇ ಬಂದು ನೆಲೆಸಿದೆ. ೧೯೭೧ರ ಜನಗಣತಿಯಂತೆ ೫,೨೮,೨೮೪ ಜನರು ತಮಿಳು ಭಾಷೆಯನ್ನು ಮಾತನಾಡುವವರು ಇದ್ದರೆಂದು ತಿಳಿಸುತ್ತಾರೆ. ಅಂದರೆ ಶೇ. ೨೫.೩೭ರಷ್ಟು ತಮಿಳು ಭಾಷಿಕರು ನೆಲೆಸಿದ್ದರು. ಅಂದಿನ ಮಟ್ಟಿಗೆ ಅಲ್ಪಸಂಖ್ಯಾತರ ಭಾಷಿಕರಲ್ಲಿ ಹೆಚ್ಚಿನವರು ತಮಿಳು ಭಾಷಿಕರಾಗಿದ್ದರು ಎಂದು ತಿಳಿಸುತ್ತಾರೆ. ಈ ಭಾಷಿಕರು ಬೆಂಗಳೂರು ಪ್ರದೇಶಕ್ಕೆ ಬಂದು ನೆಲೆಸಲು ನಿರ್ದಿಷ್ಟ ಕಾರಣಗಳನ್ನು ತಿಳಿಸಲು ಸಾಧ್ಯವಾಗಿಲ್ಲ ಎಂದು ತಿಳಿಸುತ್ತಾರೆ. ಆದರೆ ತಮಿಳುನಾಡಿನ ಉತ್ತರ ಆರ್ಕಾಟ್ ಮತ್ತು ತಿರುವಣ್ಣಾಮಲೈ ಜಿಲ್ಲೆಗಳಿಂದ ಉತ್ತರ–ತಮಿಳುನಾಡಿನಿಂದ ಬಂದು ನೆಲೆಸಿದ್ದಾರೆ. ಮದ್ರಾಸ್ ಪ್ರೆಸಿಡನ್ಸಿ ಆಡಳಿತದ ಸಮಯದಲ್ಲಿ ಬೆಂಗಳೂರು ಮತ್ತು ಮೈಸೂರು ಭಾಗಗಳಲ್ಲಿ ಐಯ್ಯಂಗಾರ್ ಸಮುದಾಯವು ಹೆಚ್ಚು ವಲಸೆ ಬಂದು ನೆಲೆಸಿದ್ದಾರೆ. ಆದರೆ ಒಂದು ಊಹಾತ್ಮಕ ಚಿಂತನೆಯಿಂದ ತಮಿಳು ಭಾಷಿಕರು ವಿಜಯನಗರ ಆಳ್ವಿಕೆಯ ಕಾಲದಲ್ಲಿ ಹೆಚ್ಚಿನ ಜನರು ವಲಸೆ ಬಂದಿದ್ದಾರೆ ಎಂದು ತಿಳಿಸುತ್ತಾರೆ (....to the conclusion that they must have migrated from different parts of Tamilnadu during the period of Vijayanagara empire(Page no.12)) ಸಂಶೋಧಕರು ಬೆಂಗಳೂರಿನಲ್ಲಿ ಯಾವ ಯಾವ ಭಾಷೆಗಳನ್ನು ಮಾತನಾಡುತ್ತಾರೆ ಎನ್ನುವುದನ್ನು 'ಬೆಂಗಳೂರಿನ ಭಾಷಿಕ ಸಂದರ್ಭಗಳು' ಎನ್ನುವ ಭಾಗದಲ್ಲಿ ಹೇಳಿದ್ದಾರೆ. ಬೆಂಗಳೂರಿನಲ್ಲಿ ಕನ್ನಡ ಆಡಳಿತ ಭಾಷೆಯಾಗಿದೆ. ಆದರೆ ಇಲ್ಲಿ ತಮಿಳು, ಮಲಯಾಳಿ, ಹಿಂದಿ, ಉರ್ದು, ಇಂಗ್ಲಿಷ್ ಮುಂತಾದ ಭಾಷೆಗಳು ಬಳಕೆಯಲ್ಲಿವೆ. ಈ ಭಾಷೆಗಳು ಬಳಕೆಯ ಆವರಣವನ್ನು ಆಧರಿಸಿ ಬಳಕೆಯಾಗುವುದನ್ನು ಗುರುತಿಸುತ್ತಾರೆ. ಈ ರೀತಿಯ ಭಾಷಾಬಳಕೆಯ ಪರಿಸರಗಳನ್ನು 'ಭಾಷಾ ಗುಂಪುಗಳು'(Langustic group(Page no.12)) ಎನ್ನುತ್ತಾರೆ. ಇಂಥ ಗುಂಪುಗಳಲ್ಲಿ ಭಾಷಾಬಳಕೆಯ ಆಯ್ಕೆ ಭಾಷಿಕರದ್ದಾಗಿರುತ್ತದೆ. ಬೆಂಗಳೂರಿನ

ಪರಿಸರದಲ್ಲಿ ಕನ್ನಡ ಅಥವಾ ಇಂಗ್ಲಿಷ್ ಭಾಷೆಯು ಆಡಳಿತಾತ್ಮಕ ಸಂಪರ್ಕ ಭಾಷೆಯಾಗಿದೆ. ಆದರೂ ಬೆಂಗಳೂರಿನ ಕೆಲವು ಸ್ಥಳಗಳಲ್ಲಿ ತಮಿಳನ್ನು ಹೆಚ್ಚಾಗಿ ಬಳಕೆ ಮಾಡುವುದನ್ನು ತಿಳಿಸಿದ್ದಾರೆ. ಬೆಂಗಳೂರಿನ ಕಂಟೋನ್ಮೆಂಟ್ ಪ್ರದೇಶಗಳಲ್ಲಿ ಈ ರೀತಿಯ ಭಾಷಾ ಬಳಕೆಯನ್ನು ಗುರುತಿಸಿದ್ದಾರೆ. ಈ ಪ್ರದೇಶಗಳಲ್ಲಿ ಕನ್ನಡದಂತೆಯೇ ತಮಿಳನ್ನು ಬಳಕೆ ಮಾಡುತ್ತಾರೆ. ಇದಕ್ಕೆ ಕಾರಣ ತಮಿಳು ಭಾಷೆಯನ್ನು ಮಾತನಾಡುವವರ ಸಂಖ್ಯೆ ಹೆಚ್ಚಿದ್ದರಿಂದ ಇದು ಸಾಧ್ಯವಾಗಿದೆ ಎನ್ನುತ್ತಾರೆ. ಇನ್ನೊಂದು ಗಮನಿಸಬೇಕಾದ ಅಂಶವೆಂದರೆ ಈ ಪ್ರದೇಶಗಳಲ್ಲಿ ಅಂಗಡಿಗಳ ನಾಮಫಲಕಗಳು ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಇರುತ್ತವೆ. ಆದರೆ ಕೆಲವು ಕಡೆಗಳಲ್ಲಿ ಕನ್ನಡ, ಇಂಗ್ಲಿಷ್ ಮತ್ತು ತಮಿಳು ಭಾಷೆಯಲ್ಲಿಯೂ ಇರುತ್ತವೆ ಎನ್ನುತ್ತಾರೆ.

ತಮಿಳು ಭಾಷಿಕರು ಮೊದಲು ಬೆಂಗಳೂರಿನ ಕೊನೆಭಾಗಗಳಾದ ಮಲ್ಲೇಶ್ವರಂ ಇತರೆಡೆಗಳಲ್ಲಿ ನೆಲೆಸಿದ್ದರು. ನಂತರ ಹೊಸ ಬಡಾವಣೆಗಳು ನಿರ್ಮಾಣಗೊಂಡ ಮೇಲೆ ಅವುಗಳಲ್ಲಿ ನೆಲೆಗಳನ್ನು ಕಂಡುಕೊಂಡಿದ್ದಾರೆ ಎಂದು ತಿಳಿಸುತ್ತಾರೆ. ಈ ರೀತಿಯ ಐಯ್ಯಂಗಾರ್ ಸಮುದಾಯವು ನೆಲೆಸಿದ ಪ್ರದೇಶಗಳಲ್ಲಿ ಮನೆಮಾತು ತಮಿಳು ಭಾಷೆಯಾಗಿ ಮತ್ತು ಸಾಮಾಜಿಕ, ಆಡಳಿತಾತ್ಮಕ ಭಾಷೆಯಾಗಿ ಕನ್ನಡವನ್ನು ಬಳಕೆ ಮಾಡುವುದನ್ನು ಕಾಣಬಹುದು ಎನ್ನುತ್ತಾರೆ. ಇದರೊಂದಿಗೆ ಕನ್ನಡ ಮತ್ತು ತಮಿಳು ಭಾಷೆಗಳು ಮಕ್ಕಳ ಕಲಿಕಾ ಮಾಧ್ಯಮವಾಗಿವೆ. ಒಟ್ಟಾರೆಯಾಗಿ ಸಾಮಾಜಿಕವಾಗಿ, ಆಡಳಿತಾತ್ಮಕವಾಗಿ ಕನ್ನಡ ಭಾಷೆಯನ್ನು ಕಲಿಯಲು ಮತ್ತು ಬಳಸಲು ಬಾಹ್ಯ ಒತ್ತಡಗಳೇ ಕಾರಣವಾಗಿವೆ ಎಂದು ತಿಳಿಸುತ್ತಾರೆ.

(Though Tamil as a mother tongue is maintained by the Iyengars, due to socio-political reasons which are constantly pressing the minorities as well as the constant linguistic contact (Kannada) situation casued a remarkable change over the Tamil spoken by the group under study when compared to the Tamil spoken in Tamilnadu. In Short, owing to the social heterogeneity and exposure to outside linguistic influence, linguistic overlap also, the reflections of many Kannada features are predominantly noticed in their Tamil speech. The extent of socio-lingustic codes used by the Tamil Iyengars in different sociolinguistic situations led to the extent of convergent features in Tamil spoken by them casuing a 'partail shift')

ಧ್ವನಿಮಾ ಹಂತದಲ್ಲಿ ರಚನೆಗಳನ್ನು ಈ ರೀತಿಯಾಗಿ ತಿಳಿಸುತ್ತಾರೆ. ಯ್ಯಂಗಾರ್ ಸಮುದಾಯವು ತಮಿಳು ಮಾತನಾಡುವಾಗ ಕೆಲವು ಧ್ವನಿಮಾಗಳನ್ನು ಕನ್ನಡದಲ್ಲಿ ಬಳಸುವಂತೆ ಬಳಸುತ್ತಾರೆ. ಇದಕ್ಕೆ ಕೆಲವು ಉದಾಹರಣೆಗಳು:

| Tamil | Kannada | BIT | Gloss |
|---|---|---|---|
| ka-d-e | ka-t-e | ka-t-e | 'story' |
| a:-h-ale | a:-k-ale | a:-k-ale | 'not possible' |
| pa:-ḍ-ō | pa:-ṭ-a | pa:-ṭ-a | 'lesson' |

(BIT- Bangalore Iyengar Tamil)

ಈ ರೀತಿಯಾಗಿ ತಮಿಳು ಭಾಷೆಯಲ್ಲಿ ಬಳಕೆಯಾಗುವ ಕೆಲವು ಧ್ವನಿಮಾಗಳ ಬದಲಿಗೆ ಕನ್ನಡದಲ್ಲಿ ಬಳಸುವಂತೆಯೇ ಬಳಸುತ್ತಾರೆ ಎಂದು ಗುರುತಿಸುತ್ತಾರೆ. ಇನ್ನು ಪದಾದಿಯಲ್ಲಿ ಬರುವ 'ಕ'>'ಗ'ವಾಗಿ ಬದಲಾಗಿ ಬಳಕೆಯಾಗುವುದಕ್ಕೆ ಉದಾಹರಣೆ

| Tamil | Kannada | BIT | Gloss |
|---|---|---|---|
| ka:yam | ga:ya | ga:ya | 'Wound' |
| ku:ḍu | gu:ḍu | gu:ḍu | 'nest' |
| kiḷi | giḷḷi | giḷi/giṇi | 'Parrot' |

ಹೀಗೆ ಹಲವು ಬೇರೆ ಬೇರೆ ವಿಧಗಳಲ್ಲಿ ಧ್ವನಿಮಾಗಳ ಬಳಕೆಯಲ್ಲಾಗಿರುವ ಬದಲಾವಣೆಗಳನ್ನು ತಿಳಿಸುತ್ತಾರೆ. ಇದರೊಂದಿಗೆ ಆಕೃತಿಮಾಗಳ ಕುರಿತು ತಿಳಿಸುತ್ತಾರೆ. ಬೆಂಗಳೂರು ಐಯ್ಯಂಗಾರ್ ಸಮುದಾಯವು ಕೆಲವು ತಮಿಳು ಭಾಷೆಯ ಆಕೃತಿಮಾಗಳನ್ನು ಹೇಗೆ ಬಳಸುತ್ತಾರೆ ಎಂದು ತಿಳಿಸುತ್ತಾರೆ. ಉದಾಹರಣೆಗೆ:

| BIT | Tamil | Gloss |
|---|---|---|
| beṭṭa | malai, | 'hill'(N) |
| giṇi | kiḷi | 'parrot'(N) |

| | | |
|---|---|---|
| kiriḍu | ceviḍu | 'deaf'(N) |
| koḷakku | aḷukku | 'dirt'(N) |
| saṇṇa | cinna | 'small'(N) |
| va:pas | tirumba | 'give back(adj) |
| ha:ru | paRa | 'fly(v) |

ಈ ರೀತಿಯಾಗಿ ಕೆಲವು ನಾಮಪದಗಳನ್ನು ಮತ್ತು ಕ್ರಿಯಾಪದಗಳನ್ನು ಕನ್ನಡದಲ್ಲಿ ಬಳಸುವಂತೆ ಬಳಸುತ್ತಾರೆಂದು ಗುರುತಿಸುತ್ತಾರೆ. ಇನ್ನು ಕೆಲವು ಸಂದರ್ಭಗಳಲ್ಲಿ ತಮಿಳು ಭಾಷೆಯ ವಾಕ್ಯಗಳಲ್ಲಿ ಕನ್ನಡದ ಪದಗಳು ಬಳಕೆ ಮಾಡುವುದನ್ನು ಗುರುತಿಸುತ್ತಾರೆ. ಉದಾಹರಣೆಗೆ

1. paṭṣi en tale me:l ha:riddu

   'bird flew over my head'

2. na: enakkosarõ pudiya shirtage vańgine

   'I have bought new shirts for me'

3. duṭṭu va:pas kuḍu

   'return the money'

4. koḷak kayyi

   'dirty hand'

ಹೀಗೆ ಮೇಲಿನ ತಮಿಳು ವಾಕ್ಯಗಳಲ್ಲಿ ಗೆರೆ ಎಳೆದಿರುವ ಪದಗಳು ಕನ್ನಡದಿಂದ ಪ್ರಭಾವಗೊಂಡು ಬಳಕೆಯಾಗಿವೆ ಎಂದು ತಿಳಿಸುತ್ತಾರೆ. ಈ ಪದಗಳು ತಮಿಳಿನಲ್ಲಿ ಬಳಕೆಯಲ್ಲಿಲ್ಲ ಎಂದು ತಿಳಿಸುತ್ತಾರೆ. ಹೀಗೆ ಸಂಶೋಧಕರು ಪ್ರತ್ಯಯಗಳು, ಕಾಲಸೂಚಕಗಳು, ಸಂಖ್ಯಾವಾಚಕಗಳು ಬೇರೆ ಬೇರೆ ವ್ಯಾಕರಣಾಂಶಗಳನ್ನು ಆಧರಿಸಿ ವರ್ಗೀಕರಿಸಿ ವಿವರಿಸಿದ್ದಾರೆ. ಅಂತಿಮವಾಗಿ ಐಯ್ಯಂಗಾರ್ ಸಮುದಾಯದಲ್ಲಿ ಆರ್ಥಿಕವಾಗಿ ಉತ್ತಮ ಸ್ಥಾನದಲ್ಲಿರುವವರು ತಮ್ಮ ಮಾತೃಭಾಷೆಯನ್ನು ಕಳೆದುಕೊಂಡಿದ್ದಾರೆ. ಇನ್ನು ಮಧ್ಯಮ ಮತ್ತು ಅಂತಿಮ ಹಂತದಲ್ಲಿರುವ ಐಯ್ಯಂಗಾರ್ ಸಮುದಾಯಗಳು

ತಮಿಳು ಭಾಷೆಯನ್ನು ಉಳಿಸಿಕೊಂಡಿವೆ. ಇದರೊಂದಿಗೆ ತಮ್ಮ ಮಕ್ಕಳು ಕನಿಷ್ಟ ಮಟ್ಟದಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ ಎಂದು ತಿಳಿಸುತ್ತಾರೆ(We can observe that those in the higher socio-economic strata have almost lost their linguistic identity and the language. The middle and the lower socio-economic groups have retained their language extent. Also, in these groups, age is playing a considerable role in contributing to the lose of their language). ಈ ರೀತಿಯಾಗಿ ತಮಿಳು ತನ್ನ ಭಾಷಿಕರನ್ನು ಕಳೆದುಕೊಳ್ಳಲು ಇವರು ಕೊಡುವ ಕಾರಣ ತಮಿಳು ಭಾಷಾ ಬಳಕೆಯ ಆವರಣಗಳು ಕಡಿಮೆಯಾಗಿದ್ದು, ಕೇವಲ ಮನೆ ಆವರಣದಲ್ಲಿ ಮಾತ್ರ ಬಳಕೆ ಮಾಡುತ್ತಾರೆ. ಅಲ್ಲದೇ ಶಾಲೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಮಾಡುವುದರಿಂದ ಮತ್ತು ಇತರೆ ವಲಯಗಳಲ್ಲಿ ಇಂಗ್ಲಿಷ್ ಬಳಕೆ ಮಾಡುವುದರಿಂದ ತಮಿಳನ್ನು ಎಲ್ಲಾ ವಲಯಗಳಲ್ಲಿ ಬಳಕೆ ಮಾಡಲಾಗುತ್ತಿಲ್ಲ. ಆದ್ದರಿಂದ ತಮಿಳು ಬಳಕೆಯು ಐಯ್ಯಂಗಾರ್ ಸಮುದಾಯದಲ್ಲಿ ದಿನದಿಂದ ದಿನಕ್ಕೆ ತಮಿಳು ಭಾಷಾಬಳಕೆಯ ಪ್ರಮಾಣ ಕಡಿಮೆಯಾಗುತ್ತಿದೆ ಎಂದು ತಿಳಿಸುತ್ತಾರೆ.

ಸಂಶೋಧಕರು ಎರಡನೇ ಭಾಗದಲ್ಲಿ ಬೆಂಗಳೂರಿನ ಮೊದಲಿಯಾರ್ ಸಮುದಾಯವು ತಮಿಳು ಭಾಷಾಬಳಕೆಯ ಕುರಿತು ವಿವರಿಸುತ್ತಾರೆ. ವಸಾಹತು ಕಾಲಾವಧಿಯಲ್ಲಿ ಬ್ರಿಟಿಷ್ ಅಧಿಕಾರಿಗಳ ಜೊತೆಯಲ್ಲಿ ಅಧಿಕಾರದ ಪ್ರಮುಖ ಹುದ್ದೆಗಳಿಗೆ ಅಧಿಕಾರಿಗಳಾಗಿ ಬಂದು ನೆಲೆಸಿದ ಬ್ರಾಹ್ಮಣ ಸಮುದಾಯದವರು ತಮ್ಮೊಂದಿಗೆ ಮೊದಲಿಯಾರ್ ಸಮುದಾಯವನ್ನು ಕರೆತಂದರು. ಈ ಸಮುದಾಯದವರು ಬ್ರಿಟಿಷ್ ಮತ್ತು ಬ್ರಾಹ್ಮಣ ಅಧಿಕಾರಿಗಳಿಗೆ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಪ್ರಸ್ತುತ ಇವರು ಬೆಂಗಳೂರಿನ ಬಹುಭಾಗಗಳಲ್ಲಿ ಕಂಡುಬರುತ್ತಾರೆ. ವ್ಯಾಪಾರ ವೃತ್ತಿಯಲ್ಲಿ ಹೆಚ್ಚು ತೊಡಗಿಕೊಂಡಿದ್ದಾರೆಂದು ತಿಳಿಸುತ್ತಾರೆ.

ಮೊದಲಿಯಾರ್ ಸಮುದಾಯವು ಬಳಸುವ ಭಾಷೆ ಕುರಿತು ಈ ರೀತಿಯಾಗಿ ತಿಳಿಸುತ್ತಾರೆ. ಇವರು ದ್ವಿಭಾಷಿಕರಾಗಿದ್ದಾರೆ. ಇವರಿಗೆ ತಮಿಳು ಮತ್ತು ಕನ್ನಡ ಬಳಕೆಯ ಭಾಷೆಯಾಗಿವೆ. ತಮ್ಮ ಕುಟುಂಬ ಆವರಣದಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಸಾಮಾಜಿಕ ಆವರಣದಲ್ಲಿ ತಮಿಳನ್ನು ಹೆಚ್ಚು ಬಳಕೆ ಮಾಡುವುದಿಲ್ಲ. ಈ ಸಮುದಾಯದವರು ಮನೆ ಆವರಣದಲ್ಲಿ ತಮಿಳು ಭಾಷೆಯ ಪತ್ರಿಕೆಗಳನ್ನು ಬಳಕೆ ಮಾಡುವುದರಿಂದ, ತಮ್ಮ ಮಕ್ಕಳಿಗೆ ತಮಿಳು ಭಾಷೆಯನ್ನು ಕಲಿಸುವುದರಿಂದ ಹಾಗೂ ತಮಿಳು ಸಂಘಗಳಲ್ಲಿ ಭಾಗವಹಿಸುವ ಮೂಲಕ ತಮ್ಮ ಭಾಷಾ ಸಂಗೋಪನೆ ಮಾಡುತ್ತಾರೆ ಎಂದು ತಿಳಿಸುತ್ತಾರೆ.

ಮೊದಲಿಯಾರ್ ಸಮುದಾಯದವರು ಧ್ವನಿಮಾ ಹಂತದವರೆಗೆ ಬದಲಾವಣೆಯಾಗಿರುವುದು ಕಡಿಮೆ ಎಂದು ಹೇಳುತ್ತಾರೆ. ಆದರೆ ಕೆಲವೇ ಕೆಲವು ಸಂದರ್ಭಗಳಲ್ಲಿ ಕೆಲವು ಬದಲಾವಣೆಯಾಗಿರುವುದದನ್ನು

ಕಾಣಬಹುದು. ಈ ಬದಲಾವಣೆಗಳು ಕನ್ನಡದಿಂದ ಪ್ರಭಾವಗೊಂಡು ಬಳಕೆಯಲ್ಲಿವೆ ಎಂದು ತಿಳಿಸುತ್ತಾರೆ. ಉದಾಹರಣೆಗೆ:

| Tamil | Mudaliar Tamil(MT) | Kannada | Gloss |
|---|---|---|---|
| ku-ḍ-umbam | ku-ṭ-umpa | ku-ṭ-umb | 'family' |
| ka-d-e | ka-t-e | ka-t-e | 'story' |

ಹೀಗೆ ಪದಾದಿಯ ಸಂದರ್ಭದಲ್ಲಿ ಧ್ವನಿಮಾಗಳ ಬದಲಾವಣೆ ಮಾಡಿಕೊಂಡು ಕನ್ನಡದಲ್ಲಿ ಬಳಸುವಂತೆ ಬಳಕೆ ಮಾಡುವ ಕೆಲವು ಉದಾಹರಣೆಗಳನ್ನು ತಿಳಿಸುತ್ತಾರೆ. 'ಮ್'(-m) ಅನುನಾಸಿಕವು ಬಳಕೆಯಿಂದ ಕಳೆದುಕೊಳ್ಳುತ್ತಿರುವುದನ್ನು ಗುರುತಿಸಿದ್ದಾರೆ. ಅಂದರೆ ಮೂಲತಮಿಳಿನ ಪದಾಂತ್ಯದಲ್ಲಿ ಬಳಕೆಯಲ್ಲಿದ್ದ 'ಮ್' ಅನ್ನು ಬೆಂಗಳೂರಿನ ಮೊದಲಿಯಾರ್ ಮತ್ತು ಐಯ್ಯಂಗಾರ್ ಸಮುದಾಯಗಳಲ್ಲಿ ಬಳಕೆಯಲ್ಲಿಲ್ಲ ಎನ್ನುತ್ತಾರೆ. ಉದಾಹರಣೆಗೆ:

| Tamil | Kannada | MT | Gloss |
|---|---|---|---|
| marõ | mara | mara | 'tree' |
| pustakõ | pustaka | pustaka | 'book' |
| paḷõ | haṇṇu | paḷa | 'fruit' |
| ni:lõ | ni:li | ni:la | 'blue' |

ಇದರೊಂದಿಗೆ ತಮಿಳು ಭಾಷೆಯ ಪದಾಂತ್ಯ ಪರಿಸರದಲ್ಲಿ ಬಳಕೆಯಾಗುವ 'ಐ' ಕಾರದ ಕುರಿತು ಚರ್ಚಿಸಿದ್ದಾರೆ. ಅಲ್ಲದೆ ಕ್ರಿಯಾಪದಗಳು, ಸಂಖ್ಯಾವಾಚಕಗಳು, ತಮಿಳು ವಾಕ್ಯಗಳಲ್ಲಿ ಕನ್ನಡದ ಪದಗಳ ಬಳಕೆಯ ಸ್ವರೂಪ ಹೀಗೆ ಹಲವು ಅಂಶಗಳನ್ನು ಚರ್ಚಿಸಿದ್ದಾರೆ.

ಸಂಶೋಧನಾ ಅಧ್ಯಯನದ ಅಂತಿಮ ಘಟ್ಟದಲ್ಲಿ ಈ ರೀತಿಯ ತೀರ್ಮಾನಗಳನ್ನು ಹೇಳುತ್ತಾರೆ. ಈ ಸಮುದಾಯಗಳು ಬೆಂಗಳೂರು ನಗರದಾದ್ಯಂತ ವಾಸವಾಗಿದ್ದು, ಮೊದಲಿಯಾರ್ ಸಮುದಾಯವು ತಮಿಳು ಮಾತನಾಡುವ, ಗ್ರಹಿಸುವ, ಓದುವ, ಬರೆಯುವ ಕೌಶಲವನ್ನು ಉಳಿಸಿಕೊಂಡಿದ್ದಾರೆ. ಐಯ್ಯಂಗಾರ್ ಸಮುದಾಯವು ತಮಿಳು ಭಾಷೆಯನ್ನು ಓದುವ ಮತ್ತು ಬರೆಯುವ ಕೌಶಲವನ್ನು ಉಳಿಸಿಕೊಂಡಿಲ್ಲ ಎಂದು ತಿಳಿಸುತ್ತಾರೆ. ಇವರು ಒಂದು ಗುಂಪಿನಲ್ಲಿ ವಾಸಿಸುವುದರಿಂದಾಗಿ ತಮಿಳು

ಭಾಷೆಯು ಇವರ ಬಳಕೆಯಲ್ಲಿದೆ ಎಂದು ತಿಳಿಸುತ್ತಾರೆ. ಒಟ್ಟಾರೆಯಾಗಿ ಭಾಷಾಬದಲಾವಣೆ ಕುರಿತು ಹೇಳುತ್ತಾ, ಈ ಎರಡು ಸಮುದಾಯಗಳ ಭಾಷೆಗಳಲ್ಲಿ ಬಹುದೊಡ್ಡ ಬದಲಾವಣೆಗಳೇನೂ ಆಗಿಲ್ಲ ಎನ್ನುತ್ತಾರೆ(Page no.75).

ಐಯ್ಯಂಗಾರ್ ಸಮುದಾಯದ ಉನ್ನತ ವರ್ಗದವರು ಕನ್ನಡಿಗರಾಗಿ ಬದಲಾಗಿದ್ದಾರೆ. ಆದರೆ ಮಧ್ಯಮ ಮತ್ತು ಕೆಳವರ್ಗದ ಐಯ್ಯಂಗಾರ್ ಸಮುದಾಯದವರು ತಮಿಳು ಭಾಷೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಈ ಸಮುದಾಯದ ಮಕ್ಕಳು ಕನ್ನಡ ಅಥವಾ ಇಂಗ್ಲಿಷ್ ಮಾಧ್ಯಮಗಳಲ್ಲಿ ಅಧ್ಯಯನ ಮಾಡುತ್ತಿದ್ದಾರೆ. ಇವರಿಗೆ ಮನೆಯಲ್ಲಿಯೇ ತಮಿಳು ಭಾಷೆಯ ಅಭ್ಯಾಸ ಮಾಡಿಸಬೇಕಿದೆ ಎನ್ನುತ್ತಾರೆ. ತಮಿಳು ಭಾಷಿಕರ ವೃತ್ತಿ, ವ್ಯವಹಾರ ಇತರೆ ಕಾರಣಗಳಿಂದ ಬೇರೆ ಭಾಷೆಗಳಿಗೆ ಪಲ್ಲಟವಾಗುತ್ತಿರುವುದರಿಂದ ತಮಿಳು ಭಾಷಾಬಳಕೆಯ ಆವರಣವು ಕಡಿತಗೊಳ್ಳುತ್ತಾ ಸಾಗಿದೆ ಎನ್ನುತ್ತಾರೆ(Therefore, the use of tamil is highly restricted to limited sittings only).

ಐಯ್ಯಂಗಾರ್ ಸಮುದಾಯವು ಆಡಳಿತದ ಪ್ರಮುಖ ಹುದ್ದೆಗಳಲ್ಲಿ ಭಾಗಿಯಾಗಿರುವ ಕಾರಣ ಆಡಳಿತಾತ್ಮಕ ಮತ್ತು ರಾಜಕೀಯ ಒತ್ತಡಗಳಿಗೆ ಒಳಗಾಗಿ ಕನ್ನಡ ಭಾಷೆ ಬಳಕೆಯನ್ನು ಮಾಡುತ್ತಿದ್ದಾರೆ. ಇವರು ಕನ್ನಡಿಗರಾಗಿ ಬದಲಾಗಿದ್ದಾರೆ. ಆದರೆ ಮೊದಲಿಯಾರ್ ಸಮುದಾಯವು ಮೊದಲಿನಿಂದಲೂ ವ್ಯಾಪಾರ ವಹಿವಾಟಿನಲ್ಲಿ ಇರುವುದರಿಂದ ಅವರಿಗೆ ಭಾಷಾಬಳಕೆಯ ಸ್ವಾತಂತ್ರ್ಯ ಹೆಚ್ಚಿದೆ. ಆದ್ದರಿಂದ ಸಾಮಾಜಿಕವಾಗಿ ಕನ್ನಡ/ಇಂಗ್ಲಿಷ್/ತಮಿಳು ಭಾಷೆಯನ್ನು ಬಳಕೆಯ ಪರಿಸರಕ್ಕೆ ಹೊಂದಿಕೊಂಡು ಬಳಸುತ್ತಾರೆ. ಅಲ್ಲದೇ ಇವರು ತಮ್ಮ ಮೂಲ ನೆಲೆಯಾದ ತಮಿಳುನಾಡಿಗೆ ವ್ಯವಹಾರ ಕಾರಣಕ್ಕಾಗಿ ಮತ್ತೆ ಮತ್ತೆ ಭೇಟಿ ನೀಡುವುದರಿಂದ ಇವರು ಮೂಲಭಾಷೆಯ ನಂಟು ಹೊಂದಿದ್ದಾರೆ. ಇದರೊಂದಿಗೆ ಬೆಂಗಳೂರಿನಲ್ಲಿ ತಮಿಳು ಸಂಘದ ಕಾರ್ಯಚಟುವಟಿಕೆಗಳಿಂದ ಭಾಷೆಯನ್ನು ಕಲಿಯುವುದು ಮತ್ತು ಕಲಿಸುವ ಪ್ರಕ್ರಿಯೆಗೆ ಮುಂದಾಗಿ ತಮ್ಮಲ್ಲಿ ತಮಿಳು ಭಾಷಾಸಂಗೋಪನೆ ರೂಢಿಸಿಕೊಂಡಿದ್ದಾರೆ ಎಂದು ತಿಳಿಸುತ್ತಾರೆ. ಹೀಗೆ ಈ ಎರಡು ಸಮುದಾಯಗಳು ತಮ್ಮ ಮಾತೃಭಾಷೆಯನ್ನು ಸಾಮಾಜಿಕ ಪರಿಸರ ಮತ್ತು ಬಾಹ್ಯ ಒತ್ತಡಗಳಿಗೆ ಅನುಗುಣವಾಗಿ ಬದಲಾಯಿಸಿಕೊಂಡು ಮತ್ತು ಬಳಕೆ ಮಾಡುವುದನ್ನು ಕಾಣಬಹುದು ಎನ್ನುತ್ತಾರೆ.

**೪. Dynamics of language maintenance among linguistic minorities A Sociolinguistic investigation of the Tamil communities in Bangalore.**

ಈ ಸಂಶೋಧನಾ ಪುಸ್ತಕವು ಮೈಸೂರಿನ ಭಾರತೀಯ ಭಾಷಾ ಸಂಸ್ಥಾನದಿಂದ ೧೯೮೬ರಲ್ಲಿ ಪ್ರಕಟಗೊಂಡಿದೆ. ಜನ್ನಿಫರ್ ಮರಿಯಾ ಬಾಯೆರ್ ಇವರು ರಚಿಸಿದ್ದಾರೆ.

ಈ ಸಂಶೋಧನಾ ಅಧ್ಯಯನವು ತಮಿಳು ಮಾತೃಭಾಷೆಯನ್ನು ಹೊಂದಿರುವ ಮತ್ತು ತಮಿಳುನಾಡಿನಿಂದ ಬೆಂಗಳೂರಿಗೆ ವಲಸೆ ಬಂದಿರುವ ಸಮುದಾಯಗಳ ಭಾಷಾಬಳಕೆಯನ್ನು ತಿಳಿಸುತ್ತದೆ. ಕನ್ನಡ ಆಡಳಿತ ಭಾಷೆಯಾಗಿರುವ ಈ ಪ್ರದೇಶಗಳಲ್ಲಿ ತಮಿಳು ಭಾಷಾಸಂಗೋಪನೆಯ ಕುರಿತು ವಿವರಿಸುತ್ತದೆ. ಸಮಾಜೋಭಾಷಿಕ ಹಿನ್ನೆಲೆಯಲ್ಲಿ ಮನೆ ಆವರಣ, ವ್ಯಾವಹಾರಿಕ ಕ್ಷೇತ್ರ, ಬೇರೆ ಭಾಷಿಕ ಪರಿಸರದಲ್ಲಿ ಹೇಗೆ ತಮ್ಮ ಭಾಷೆಯನ್ನು ಬಳಸುತ್ತಾರೆ ಎಂಬುದನ್ನು ಇಲ್ಲಿ ಮಂಡಿಸಿದ್ದಾರೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಈ ಸಂಶೋಧನಾ ಅಧ್ಯಯನವನ್ನು ಪೂರ್ವ ಅಧ್ಯಯನಗಳ ಸಮೀಕ್ಷೆಯಲ್ಲಿ ಬಳಸಿಕೊಳ್ಳಲು ಕಾರಣವೆಂದರೆ ಬೆಂಗಳೂರು ನಗರ ಮತ್ತು ಗ್ರಾಮೀಣ ಪರಿಸರದಲ್ಲಿ ತಮಿಳು ಭಾಷಿಕರು ತಮ್ಮ ಭಾಷೆಯನ್ನು ಹೇಗೆ ಸಂಗೋಪನೆ ಮಾಡುತ್ತಿದ್ದಾರೆ? ಅಲ್ಪಸಂಖ್ಯಾತ ಭಾಷಿಕರಾದ ಇವರು ಸಾಮಾಜಿಕವಾಗಿ, ವ್ಯಾವಹಾರಿಕವಾಗಿ ಹೇಗೆ ತಮ್ಮ ಭಾಷೆ ಬಳಕೆ ಮಾಡುತ್ತಾರೆ ಇವರ ಭಾಷಾಸಂಗೋಪನೆಯ ಮುಖ್ಯ ನೆಲೆಗಳಾವುವು? ಭಾಷೆಯೊಂದಿಗೆ ಗುರುತಿಸಿಕೊಂಡಿರುವ ಇತರೆ ಅಂಶಗಳನ್ನು ಇಲ್ಲಿ ಮುಖ್ಯವಾಗಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಈ ಎಲ್ಲಾ ಅಂಶಗಳು ಪ್ರಸ್ತುತ ಅಧ್ಯಯನಕ್ಕೆ ಅಗತ್ಯವಾದ ಕಾರಣಕ್ಕೆ ಈ ಅಧ್ಯಯನ ಮುಖ್ಯವೆನಿಸಿದೆ.

ಅಧ್ಯಯನದ ಮುಖ್ಯ ಉದ್ದೇಶ ಸಂಶೋಧಕರು ತಿಳಿಸುವಂತೆ ಭಾಷಾಸಂಗೋಪನೆ ಮತ್ತು ಭಾಷಾ ಬದಲಾವಣೆಯು ಬೆಂಗಳೂರು ಮಹಾನಗರದಲ್ಲಿ ವಾಸಿಸುವ ಭಾಷಾ ಅಲ್ಪಸಂಖ್ಯಾತ ಗುಂಪುಗಳಲ್ಲಿ ಹೇಗೆ ನಡೆಯುತ್ತದೆ ಎಂದು ತಿಳಿಯುವುದು. ಬೆಂಗಳೂರು ಪರಿಸರದಲ್ಲಿ ಹೆಚ್ಚು ಪ್ರಾಬಲ್ಯ ಹೊಂದಿರು ಕನ್ನಡ ಭಾಷೆ ತಮಿಳು ಭಾಷಿಕರ ಮೇಲೆ ಹೇಗೆ ಪ್ರಭಾವ ಬೀರಿದೆ ಎಂದು ಗುರುತಿಸುವುದು ಎಂದು ತಿಳಿಸುತ್ತಾರೆ(The Present study brings out both these factors and throws light on how, historical, economic and political factors are inter-woven with linguistic factors in the dynamics of language maintenance by a minority community in a urban multilingual setting(Page-13)).

**ಅಧ್ಯಯನ ವಿಧಾನದ ಸ್ವರೂಪ**

ಈ ಸಂಶೋಧನಾ ಅಧ್ಯಯನವು ತಮಿಳು ಭಾಷಿಕರನ್ನು ಮುಖ್ಯವಾಗಿರಿಸಿಕೊಂಡು ರೂಪುಗೊಂಡಿದೆ. ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ಅವುಗಳನ್ನು ಸಮಾಜೋಭಾಷಿಕ ಹಿನ್ನೆಲೆಯಲ್ಲಿ ರೂಪಿಸಿದೆ. ಅಧ್ಯಯನವು ವಲಸೆಯ ವಿಧಗಳು, ಭಾಷಾಬಳಕೆ, ಮನೆ ಆವರಣದಲ್ಲಿ ಭಾಷಾಬಳಕೆ, ಭಾಷಿಕ ವರ್ತನೆಗಳು, ಭಾಷಿಕರ ಮನೋಭಾವ ಎಂಬ ಉಪಘಟಕಗಳಿಂದ ಅಧ್ಯಯನ ಕೈಗೊಳ್ಳಲಾಗಿದೆ.

ಅಧ್ಯಯನದಲ್ಲಿ ಮುಖ್ಯವಾಗಿ ತಮಿಳು ಭಾಷಿಕ ಸಮುದಾಯಗಳನ್ನು ಬ್ರಾಹ್ಮಣ, ಬ್ರಾಹ್ಮಣೇತರರು ಮತ್ತು ಇತರರು ಎಂದು ಮೂರು ಭಾಗಗಳಾಗಿ ವಿಂಗಡಿಸಿಕೊಂಡು ಅಧ್ಯಯನ ನಡೆಸಲಾಗಿದೆ.

**ಈ ಅಧ್ಯಯನದಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳು**

ಈ ಅಧ್ಯಯನದಲ್ಲಿ ಮೊದಲಿಗೆ ತಮಿಳು ಭಾಷಿಕರ ವಲಸೆ ಕುರಿತು ವಿವರಣೆ ನೀಡಿದ್ದಾರೆ. ಇದರೊಂದಿಗೆ ಅಧ್ಯಯನದ ಕಿರು ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಕರ್ನಾಟಕದಲ್ಲಿ ಗೆಜೆಟಿಯರ್ ಆಧರಿಸಿ ಪಟ್ಟಿಯೊಂದನ್ನು ನೀಡಿ ತಮಿಳು ಭಾಷಿಕರ ಮಾಹಿತಿಯನ್ನು ನೀಡುತ್ತಾರೆ.

| ಭಾಷೆ | ಕರ್ನಾಟಕ | |
|---|---|---|
| | ಭಾಷಿಕರ ಸಂಖ್ಯೆ | ಜನಸಂಖ್ಯೆಯ ಒಟ್ಟು ಶೇಕಡ |
| ತಮಿಳು | ೯,೯೦,೪೦೯ | ೩.೩೮ |
| ತೆಲುಗು | ೨,೩೯೭,೫೫೭ | ೮.೧೮ |
| ಉರ್ದು | ೨,೬೩೬,೬೮೮ | ೯.೦೦ |
| ಕನ್ನಡ | ೧೯,೩೨೮,೨೭೦ | ೬೫.೯೭ |

(ಗೆಜೆಟಿಯರ್ ಭಾಗ-೧, ೧೯೮೩)

| ಮಾತೃಭಾಷೆ | ಜಿಲ್ಲೆ | ಒಟ್ಟು ಜನಸಂಖ್ಯೆ ಶೇಕಡವಾರು |
|---|---|---|
| ತಮಿಳು | ಬೆಂಗಳೂರು | ೫೦ |
| ತೆಲುಗು | ಬೆಂಗಳೂರು, ಕೋಲಾರ | ೫೭ |
| ಉರ್ದು | ಬೆಂಗಳೂರು, ಗುಲಬರ್ಗಾ, ಧಾರವಾಡ, ಬಿಜಾಪುರ | ೪೪ |

ಮೊದಲ ಕೋಷ್ಟಕವು ಒಟ್ಟು ಕರ್ನಾಟಕದಲ್ಲಿ ಅಲ್ಪಸಂಖ್ಯಾತ ಭಾಷಿಕರು ಶೇಕಡವಾರು ಎಷ್ಟಿದ್ದಾರೆ ಎಂಬುದನ್ನು ಸೂಚಿಸುತ್ತದೆ. ಎರಡನೇ ಕೋಷ್ಟಕವು ಅಲ್ಪಸಂಖ್ಯಾತ ಭಾಷಿಕರು ಕರ್ನಾಟಕದ ಯಾವ ಯಾವ ಜಿಲ್ಲೆಗಳಲ್ಲಿ ಎಷ್ಟಿದ್ದಾರೆಂಬುದನ್ನು ಸೂಚಿಸುತ್ತದೆ. ಕೋಷ್ಟಕದ ಮಾಹಿತಿಯಂತೆ ಬೆಂಗಳೂರಿನಲ್ಲಿ ಶೇ. ೫೦ರಷ್ಟು ಜನಸಂಖ್ಯೆಯು ತಮಿಳು ಭಾಷಿಕರು ಇದ್ದಾರೆಂದು, ಇದು ಬೆಂಗಳೂರು ಮಹಾನಗರದಲ್ಲಿ ಅಲ್ಪಸಂಖ್ಯಾತ ಭಾಷಿಕರ ಗುಂಪುಗಳಲ್ಲಿ ಮುಖ್ಯವಾದದ್ದು ಎಂದು ಗೆಜೆಟಿಯರ್ ಮಾಹಿತಿಯನ್ನು ವಿವರಿಸುತ್ತಾರೆ.

ಹೀಗೆ ಬೆಂಗಳೂರು ಪರಿಸರದಲ್ಲಿ ಇರುವ ಬೇರೆ ಬೇರೆ ಭಾಷಿಕರ ಪರಿಸರದ ಕುರಿತು ತಿಳಿಸುತ್ತಾ, ಬಹುಭಾಷಿಕತೆಯನ್ನು ತಿಳಿಸುತ್ತಾರೆ. ಅಂತಿಮವಾಗಿ ಈ ನಗರದಲ್ಲಿ ತಮಿಳು ಭಾಷಿಕರು ಪ್ರಮುಖ ಅಲ್ಪಸಂಖ್ಯಾತ ಭಾಷಿಕರು ಎಂದು ಹೇಳುತ್ತಾರೆ.

ಉಪಘಟಕ ಎರಡು: ಬೆಂಗಳೂರು ಮಹಾನಗರದಲ್ಲಿರುವ ತಮಿಳು ಭಾಷಿಕರ ಸಮುದಾಯಗಳನ್ನು ಗುರುತಿಸಿ, ಸಂಗ್ರಹಿಸಿದ ಮಾಹಿತಿಗಳನ್ನು ಕೆಲವು ಸಾಮಾಜಿಕ ಅಂಶಗಳಾದ ವಯಸ್ಸು, ಕುಟುಂಬ, ವೃತ್ತಿಗಳನ್ನು ಆಧರಿಸಿ ವರ್ಗೀಕರಿಸಿದ್ದಾರೆ. ಉಪಘಟಕ ಮೂರರಲ್ಲಿ ವಲಸೆ ವಿಧಗಳು ಎಂದು ಹೆಸರಿಸಿ ವಲಸೆಯ ಕುರಿತು ವಿವೇಚಿಸಿದ್ದಾರೆ.

ಉಪಘಟಕ ನಾಲ್ಕರಲ್ಲಿ ಭಾಷಾ ಪ್ರಾಧಾನ್ಯತೆ, ಭಾಷಾ ಸಂಗೋಪನೆ, ಭಾಷಾ ಬದಲಾವಣೆ ಬಗ್ಗೆ ಹಲವು ವಿದ್ವಾಂಸರ ಅಭಿಪ್ರಾಯಗಳನ್ನು ಉಲ್ಲೇಖಿಸಿ ವಿವರಿಸಲಾಗಿದೆ. ಎರಡನೇ ಭಾಗದಲ್ಲಿ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ವರ್ಗೀಕರಿಸಿ ತಿಳಿಸಲಾಗಿದೆ. ಭಾಷಾ ಪ್ರಾಧಾನ್ಯತೆ ಕುರಿತು ಭಾಷಿಕರು ನೀಡುವ ಮಾಹಿತಿ ಈ ರೀತಿಯಾಗಿದೆ.

ಐಯ್ಯಂಗಾರ್ ಸಮುದಾಯ

(ಕೋಷ್ಟಕದಲ್ಲಿರುವ ೧, ೨, ೩, ೪, ೫. ಇವುಗಳು ಭಾಷಿಕರು ಭಾಷೆಗಳ ಬಳಕೆಗೆ ಎಷ್ಟನೇ ಆದ್ಯತೆ ನೀಡುತ್ತಾರೆ ಎನ್ನುವುದನ್ನು ಸೂಚಿಸುತ್ತದೆ.)

| | ೧ | ೨ | ೩ | ೪ | ೫ |
|---|---|---|---|---|---|
| ತಮಿಳು | ೩೩.೬ | ೨೫.೦ | ೨೫.೦ | ೯.೭ | ೬.೬೦ |
| ಕನ್ನಡ | ೧೯.೭ | ೪೩.೪೦ | ೨೩.೬೦ | ೧೦.೫೦ | ೨.೬೦ |
| ಇಂಗ್ಲಿಷ್ | ೬೩.೫೦ | ೨೧.೫೦ | ೧೦.೮೦ | ೧.೪೦ | ೨.೮೦ |

ಮೊದಲಿಯಾರ್ ಸಮುದಾಯ

| | ೧ | ೨ | ೩ | ೪ | ೫ |
|---|---|---|---|---|---|
| ತಮಿಳು | ೫೨.೨೦ | ೨೯.೪೧ | ೫.೮೮ | ೩.೬೭ | ೨.೯೪ |
| ಕನ್ನಡ | ೧೨.೮೯ | ೧೨.೮೯ | ೩೯.೪೫ | ೧೧.೭೨ | ೦.೭೮ |
| ಇಂಗ್ಲಿಷ್ | ೪೦.೬೮ | ೩೯.೮೩ | ೧೧.೮೬ | ೫.೦೮ | ೧.೬೯ |

ಕ್ರಿಶ್ಚಿಯನ್ ಸಮುದಾಯ

| | ೧ | ೨ | ೩ | ೪ | ೫ |
|---|---|---|---|---|---|
| ತಮಿಳು | ೬೬.೬೬ | ೧೯.೪೪ | ೫.೫೫ | ೬.೨೫ | ೨.೦೮ |
| ಕನ್ನಡ | ೨.೦೮ | ೭.೬೩ | ೫೫.೫೫ | ೧೨.೫೦ | ೧.೩೮ |
| ಇಂಗ್ಲಿಷ್ | ೩೦.೫೫ | ೫೬.೯೪ | ೫.೫೫ | ೦.೬೯ | ೦.೬೯ |

ಈ ಕೋಷ್ಟಕಗಳನ್ನು ಗಮನಿಸಿದಾಗ ಐಯ್ಯಂಗಾರ್ ಸಮುದಾಯವು ತಮಿಳು ಭಾಷೆಗೆ ಮೊದಲ ಆದ್ಯತೆಯ ನೀಡಿಲ್ಲ. ಇಂಗ್ಲಿಷ್‌ಗೆ ಮೊದಲ ಆದ್ಯತೆ ನೀಡಿರುವುದನ್ನು ಕಾಣಬಹುದು. ಮೊದಲಿಯಾರ್ ಸಮುದಾಯವು ತಮಿಳು ಭಾಷೆಗೆ ಮೊದಲ ಆದ್ಯತೆ ನೀಡಿರುವುದು ಕಾಣಬಹುದನ್ನು ಕ್ರಿಶ್ಚಿಯನ್ ಸಮುದಾಯವು ತಮಿಳು ಭಾಷೆಗೆ ಮೊದಲ ಆದ್ಯತೆ ನೀಡಿರುವುದನ್ನು ಕಾಣಬಹುದು. ಇದು ಬೆಂಗಳೂರಿನಲ್ಲಿರುವ ಐಯ್ಯಂಗಾರ್ ಸಮುದಾಯವು ಇಂಗ್ಲಿಷ್ ಮತ್ತು ಕನ್ನಡ ಕಲಿಕೆ/ಬಳಕೆಗೆ ಹೆಚ್ಚು ಒತ್ತು ನೀಡುತ್ತದೆ. ಅದೇ ರೀತಿಯಲ್ಲಿ ಮೊದಲಿಯಾರ್ ಮತ್ತು ಕ್ರಿಶ್ಚಿಯನ್ ಸಮುದಾಯಗಳು ತಮಿಳು ಭಾಷೆಯನ್ನು ಕಲಿಯಲು ಮತ್ತು ಬಳಸಲು ಮೊದಲ ಆದ್ಯತೆ ನೀಡುತ್ತದೆ ಎನ್ನುವುದನ್ನು ತಿಳಿಸುತ್ತಾರೆ.

ಭಾಷಾಕೌಶಲಗಳನ್ನು ಕುರಿತು ಸಂಗ್ರಹಿಸಿದ ಮಾಹಿತಿಗಳನ್ನು ಸಮುದಾಯಗಳನ್ನು ಆಧರಿಸಿ ವರ್ಗೀಕರಿಸಿ ಕೋಷ್ಟಕದಲ್ಲಿ ನೀಡಿ ವಿವರಿಸಲಾಗಿದೆ.

ಐಯ್ಯಂಗಾರ್ ಸಮುದಾಯ

| | ಅಧ್ಯೈಸಿಕೊಳ್ಳಲು | ಮಾತನಾಡಲು | ಓದಲು | ಬರೆಯಲು |
|---|---|---|---|---|
| ತಮಿಳು | ೯೫.೦೦ | ೯೫.೦೦ | ೩೭.೫೦ | ೨೮.೭೫ |
| ಕನ್ನಡ | ೯೫.೦೦ | ೯೩.೭೫ | ೮೨.೫೦ | ೭೭.೫೦ |
| ಇಂಗ್ಲಿಷ್ | ೯೨.೫೦ | ೯೦.೦೦ | ೮೭.೫೦ | ೮೭.೫೦ |
| ಹಿಂದಿ | ೫೮.೭೫ | ೪೫.೨೫ | ೫೭.೫೦ | ೪೭.೫೦ |

ಮೊದಲಿಯಾರ್ ಸಮುದಾಯ

| | ಅಧ್ಯೈಸಿಕೊಳ್ಳಲು | ಮಾತನಾಡಲು | ಓದಲು | ಬರೆಯಲು |
|---|---|---|---|---|
| ತಮಿಳು | ೧೦೦ | ೧೦೦ | ೮೮.೨೩ | ೮೮.೨೩ |
| ಕನ್ನಡ | ೧೦೦ | ೯೨.೧೯ | ೫೯.೩೭ | ೫೯.೩೭ |
| ಇಂಗ್ಲಿಷ್ | ೧೦೦ | ೧೦೦ | ೯೮.೨೯ | ೯೮.೨೯ |
| ಹಿಂದಿ | ೯೯.೯೯ | ೭೯.೪೯ | ೬೯.೨೩ | ೭೧.೭೯ |

ಕ್ರಿಶ್ಚಿಯನ್ ಸಮುದಾಯ

| | ಅರ್ಥೈಸಿಕೊಳ್ಳಲು | ಮಾತನಾಡಲು | ಓದಲು | ಬರೆಯಲು |
|---|---|---|---|---|
| ತಮಿಳು | ೧೦೦ | ೧೦೦ | ೮೮.೧೯ | ೮೩.೩೩ |
| ಕನ್ನಡ | ೭೮.೪೪ | ೭೨.೯೧ | ೩೯.೫೮ | ೩೫.೪೧ |
| ಇಂಗ್ಲಿಷ್ | ೯೪.೪೪ | ೯೧.೬೬ | ೯೦.೨೭ | ೮೮.೧೯ |
| ಹಿಂದಿ | ೪೩.೭೫ | ೩೪.೭೨ | ೨೭.೭೭ | ೨೮.೪೭ |

ಈ ಕೋಷ್ಟಕದಿಂದ ತಿಳಿದುಬರುವ ಅಂಶಗಳೆಂದರೆ ಐಯ್ಯಂಗಾರ್ ಸಮುದಾಯದಲ್ಲಿ ತಮಿಳು ಭಾಷೆಯನ್ನು ಗ್ರಹಿಸುವ ಮತ್ತು ಮಾತನಾಡುವ ಕೌಶಲ ಹೆಚ್ಚಿದ್ದು, ಬರವಣಿಗೆ ಮತ್ತು ಓದು ಕೌಶಲ ಕಡಿಮೆ ಪ್ರಮಾಣವನ್ನು ಹೊಂದಿರುವುದನ್ನು ಸೂಚಿಸುತ್ತದೆ. ಐಯ್ಯಾಂಗಾರ್ ಸಮುದಾಯದಲ್ಲಿ ಕನ್ನಡ ಭಾಷಾಕೌಶಲಗಳು ಹೆಚ್ಚಿನ ಪ್ರಮಾಣದಲ್ಲಿ ಇರುವುದನ್ನು ಕಾಣಬಹುದು. ಆದರೆ ಇದಕ್ಕೆ ವಿರುದ್ಧವಾಗಿ ಮೊದಲಿಯಾರ್ ಸಮುದಾಯದವರು ತಮಿಳು ಭಾಷೆಯ ಎಲ್ಲಾ ಭಾಷಾಕೌಶಲಗಳನ್ನು ಹೊಂದಿರುವುದು ಕಾಣಬಹುದು. ಶೇ. ೧೦೦ರಷ್ಟು ಗ್ರಹಿಕೆ ಮತ್ತು ಮಾತನಾಡುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಕ್ರಿಶ್ಚಿಯನ್ ಸಮುದಾಯವು ಸಹ ತಮಿಳು ಭಾಷೆಯ ಗ್ರಹಿಕೆ ಮತ್ತು ಮಾತನಾಡುವ ಕೌಶಲವನ್ನು ಶೇ. ೧೦೦ರಷ್ಟು ಹೊಂದಿರುವುದು ಕಾಣಬಹುದು. ಒಟ್ಟಾರೆಯಾಗಿ ಈ ಮೇಲಿನ ಎಲ್ಲಾ ಕೋಷ್ಟಕಗಳಿಂದ ತಿಳಿದುಬರುವ ಅಂಶಗಳೇನೆಂದರೆ, ತಮಿಳು ಭಾಷೆಯನ್ನು ಸಮುದಾಯಗಳನ್ನಾಧರಿಸಿ ಭಾಷಾ ಪ್ರಾಧಾನ್ಯತೆಯನ್ನು ಕಂಡುಕೊಳ್ಳಬಹುದು. ಅವುಗಳ ಮೂಲಕ ಸಮಾಜೋಭಾಷಿಕ ಅಧ್ಯಯನ ಮಾಡಬಹುದು ಎಂದು ತಿಳಿಸುತ್ತಾರೆ.

ಈ ಉಪಘಟಕದಲ್ಲಿ ಶಿಕ್ಷಣ ಮಾಧ್ಯಮ ಮತ್ತು ಭಾಷಾಸಂಗೋಪನೆ ಮತ್ತು ಬದಲಾವಣೆ ಕುರಿತು ವಿವರಿಸಲಾಗಿದೆ. ಮೇಲೆ ತಿಳಿಸಿದ ಸಮುದಾಯದ ಮಕ್ಕಳು ಯಾವ ಶಾಲೆಗೆ, ಯಾವ ಮಾಧ್ಯಮದ ಶಾಲೆಗೆ ಹೋಗುತ್ತಾರೆ? ಯಾವ ಯಾವ ಭಾಷೆಗಳನ್ನು ಕಲಿಯುತ್ತಾರೆ ಎಂಬ ಮಾಹಿತಿಗಳನ್ನು ಸಂಗ್ರಹಿಸಿ ವರ್ಗೀಕರಿಸಿ ತಿಳಿಸಿದ್ದಾರೆ. ಆ ಮೂಲಕ ಶಾಲೆಗಳಲ್ಲಿ ಭಾಷಾಸಂಗೋಪನೆ ಮತ್ತು ಭಾಷಾ ಬದಲಾವಣೆಗಳನ್ನು ತಿಳಿಸುತ್ತಾರೆ.

ಉಪಘಟಕದ ಐದರಲ್ಲಿ ಭಾಷಾಬಳಕೆಯ ವಲಯಗಳನ್ನು ಕುರಿತು ಚರ್ಚಿಸಲಾಗಿದೆ. ಇದರಲ್ಲಿ ಮುಖ್ಯವಾಗಿ ಮನೆ ಆವರಣದಲ್ಲಿ ಬಳಸುವ ಭಾಷೆಗಳನ್ನು ಕುರಿತು ಚರ್ಚಿಸಿದೆ. ಕುಟುಂಬ ಸದಸ್ಯರಾದ ತಂದೆ-ತಾಯಿ, ಅಜ್ಜ-ಅಜ್ಜಿ, ಅಕ್ಕ, ಅಣ್ಣ ಹೀಗೆ ಕುಟುಂಬದವರೊಂದಿಗೆ ಮಾತನಾಡಲು ಯಾವ ಭಾಷೆಯನ್ನು ಬಳಸುತ್ತೀರಾ ಎಂಬ ಪ್ರಶ್ನೆಯ ಆಧಾರದಲ್ಲಿ ಮಾಹಿತಿಯನ್ನು ಸಂಗ್ರಹಿಸಿ ವಿವರಿಸಲಾಗಿದೆ. ಇನ್ನು ಆತ್ಮೀಯ ಸಂಪರ್ಕ ವಲಯಗಳಲ್ಲಿ ಯಾವ ಭಾಷೆಗಳನ್ನು ಉಪಯೋಗಿಸುತ್ತೀರಾ ಎಂಬ

ಮಾಹಿತಿಯನ್ನು ಸಂಗ್ರಹಿಸಿ ವಿವರಿಸಿದ್ದಾರೆ. ಇವುಗಳಲ್ಲಿ ಮಾರುಕಟ್ಟೆ, ಆಸ್ಪತ್ರೆಯ ಆವರಣ, ಸಾರಿಗೆ ವಲಯದಲ್ಲಿ, ದೇವಾಲಯಗಳಲ್ಲಿ ಹೀಗೆ ವರ್ಗೀಕರಿಸಿ, ಮಾಹಿತಿ ಸಂಗ್ರಹಿಸಿ ವಿವರಿಸಿದ್ದಾರೆ. ಇದರೊಂದಿಗೆ ಸ್ನೇಹಿತರೊಂದಿಗೆ, ಕಛೇರಿಗಳಲ್ಲಿ, ಸಮೂಹ ಮಾಧ್ಯಮಗಳಲ್ಲಿ ಯಾವ ಭಾಷೆಯ ಮಾಧ್ಯಮಗಳನ್ನು ಹೆಚ್ಚು ಬಳಸುತ್ತಾರೆ ಎಂಬ ಮಾಹಿತಿಗಳನ್ನು ಸಂಗ್ರಹಿಸಿ ವಿವರಿಸಿದ್ದಾರೆ.

ಒಟ್ಟಾರೆಯಾಗಿ ಸಂಶೋಧಕರು ಸಾಮಾಜಿಕ ಅಂಶಗಳು ಭಾಷೆಯ ಸಂಗೋಪನೆ ಮತ್ತು ಬದಲಾವಣೆಯಲ್ಲಿ ಮುಖ್ಯ ಪಾತ್ರ ವಹಿಸುತ್ತವೆ ಎಂದು ತಿಳಿಸುತ್ತಾರೆ. ಭಾಷಾಬಳಕೆಯಲ್ಲಿ ಸಮುದಾಯಗಳ ಪಾತ್ರವು ಹೆಚ್ಚಿರುತ್ತದೆ. ಸಮುದಾಯದ ಪಾತ್ರ ಅನುಸರಿಸಿ ಭಾಷಾಬದಲಾವಣೆ ರೂಪುಗೊಳ್ಳುತ್ತದೆ ಎನ್ನುತ್ತಾರೆ. ಕೊನೆಯದಾಗಿ ಅಧ್ಯಯನದ ಕೆಲವು ಮಿತಿಗಳನ್ನು ಈ ರೀತಿಯಾಗಿ ತಿಳಿಸುತ್ತಾರೆ. ಪ್ರಸ್ತುತ ಅಧ್ಯಯನವು ಕೇವಲ ಮೂರು ಗುಂಪುಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಿದೆ. ಮುಂದಿನ ಅಧ್ಯಯನಕಾರರು ವಿಸ್ತಾರವಾದ ಅಧ್ಯಯನವನ್ನು ಕೈಗೊಳ್ಳಲು ಅವಕಾಶವಿದೆ ಎಂದು ತಿಳಿಸುತ್ತಾರೆ.

**೫. ತಮಿಳುನಾಡಿನ ಕನ್ನಡ(ಲೇಖನ)**

ಈ ಲೇಖನವನ್ನು ಧಾರವಾಡ ವಿಶ್ವವಿದ್ಯಾಲಯವು ಪ್ರಕಟಿಸುವ ಕರ್ನಾಟಕ ಭಾರತಿ ತ್ರೈಮಾಸಿಕ ಪತ್ರಿಕೆ ಸಂಪುಟ-೯ ಸಂಚಿಕೆ-೧, ೨ರಲ್ಲಿ ಪ್ರಕಟಿಸಿದೆ. ಸಿ. ರಾಮಸ್ವಾಮಿಯವರು ಈ ಲೇಖನವನ್ನು ರಚಿಸಿದ್ದಾರೆ.

ಈ ಲೇಖನವು ತಮಿಳುನಾಡಿನಲ್ಲಿರುವ ಕನ್ನಡಿಗರನ್ನು ಮುಖ್ಯವಾಗಿರಿಸಿಕೊಂಡು ರಚಿಸಿರುವುದಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಪರಾಮರ್ಶನಕ್ಕೆ ಬಳಸಿಕೊಳ್ಳಲು ಕಾರಣವೆಂದರೆ ತಮಿಳು ನಾಡಿನಲ್ಲಿರುವ ಕನ್ನಡಿಗರನ್ನು ಅಧ್ಯಯನಕ್ಕೆ ಒಳಪಡಿಸಿ ವಿವರಿಸಲಾಗಿದೆ. ಅಂದರೆ ತಮಿಳುನಾಡಿನ ಮದುರೈ ಪ್ರದೇಶದಲ್ಲಿ ವಾಸವಾಗಿರುವ ಕನ್ನಡಿಗರ ಬಳಕೆ ಕನ್ನಡ ಮತ್ತು ತಮಿಳು ಭಾಷಾಬಳಕೆಯನ್ನು ವಿವರಣಾತ್ಮಕವಾಗಿ ತಿಳಿಸಲಾಗಿದೆ. ಇಡೀ ಲೇಖನವು ಭಾಷಾಂಶಗಳಾದ ಧ್ವನಿಮಾ, ಆಕೃತಿಮಾ, ವಾಕ್ಯರೂಪಗಳು, ಪ್ರತ್ಯಯ, ಕಾಲವಾಚಕ, ಸಂಖ್ಯಾವಾಚಕಗಳು ಹೀಗೆ ಹಲವುಗಳನ್ನು ಆಧರಿಸಿ ರಚಿತವಾಗಿದೆ.

ಲೇಖನದಲ್ಲಿ ತಿಳಿಸುವಂತೆ ಸಾಮಾಜಿಕ ಅಂಶಗಳು ಭಾಷಾಬಳಕೆಯಲ್ಲಿ ವ್ಯತ್ಯಾಸವನ್ನು ರೂಪಿಸಿರುವುದು ತಿಳಿಸಿದ್ದಾರೆ. ಉದಾಹರಣೆಗೆ ಮದುರೈ ಜಿಲ್ಲೆಯಲ್ಲಿ ವಾಸಿಸುವ ಗೌಂಡರುಗಳು(ಗೌಡ) ಮಾತನಾಡುವ ಕನ್ನಡ ಅದೇ ಜಿಲ್ಲೆಯ ದೇವಾಂಗದವರು ಮಾತನಾಡುವ ಕನ್ನಡಕ್ಕೆ ಭಿನ್ನತೆ ಇದೆ ಎಂದು ತಿಳಿಸುತ್ತಾರೆ. ತಮಿಳುನಾಡಿನಲ್ಲಿಯೂ ಪ್ರದೇಶಗಳಿಗೆ ತಕ್ಕಂತೆ ಕನ್ನಡವು ಪ್ರಾದೇಶಿಕವಾಗಿ ಬದಲಾವಣೆಯನ್ನು ಹೊಂದಿದೆ ಎಂದು ತಿಳಿಸುತ್ತಾರೆ. ಕರ್ನಾಟಕದಿಂದ ತಮಿಳುನಾಡಿಗೆ ವಲಸೆ ಬಂದಿರುವ ಬ್ರಾಹ್ಮಣ ಸಮುದಾಯವು ತಮಿಳು ಕಲಿತ ಮೇಲೆ ಅವರ ಬಳಕೆಯಲ್ಲಿ ಅನಾವಶ್ಯಕ

ಮಹಾಪ್ರಾಣಗಳನ್ನು ಕಾಣಬಹುದು ಹಾಗೂ ಸಂಸ್ಕೃತ ಶಬ್ದಗಳು ಬಳಕೆಯಲ್ಲಿರುವುದನ್ನು ಕಾಣಬಹುದು ಎಂದು ತಿಳಿಸುತ್ತಾರೆ. ತಂಜಾವೂರು, ಕುಂಭಕೋಣಂ ಪ್ರದೇಶಗಳಲ್ಲಿ ವಾಸಿಸುವ ಬ್ರಾಹ್ಮಣ ಕನ್ನಡಿಗರಲ್ಲಿ ಮಹಾಪ್ರಾಣಗಳು ಉಳಿದಿವೆ ಎಂದು ಹೇಳುತ್ತಾರೆ. ಈ ಲೇಖನದ ಮಿತಿಯನ್ನು ಹೇಳುವ ಲೇಖಕರು 'ಲೇಖನವು ಮದುರೈ ಜಿಲ್ಲೆಯ ದೇವಾಂಗ ಸಮುದಾಯಕ್ಕೆ' ಸೀಮಿತಗೊಳಿಸಿ ರಚಿಸಲಾಗಿದೆ ಮತ್ತು ಇದು ಪರಿಚಯಾತ್ಮಕ ಲೇಖನವಾಗಿದೆ ಎನ್ನುತ್ತಾರೆ.

ಮದುರೈ ಕನ್ನಡಿಗರ ಭಾಷೆಯಲ್ಲಿ ಶೇ. ೨೦ರಷ್ಟು ತಮಿಳು ಭಾಷೆಯ ಪದಗಳು ಬೆರೆತುಹೋಗಿವೆ ಎಂದು ತಿಳಿಸುತ್ತಾರೆ. ಇಲ್ಲಿಯ ಕನ್ನಡಿಗರಿಗೆ ಓದಲು ಬರೆಯಲು ಬರುವುದಿಲ್ಲ. ಮದುರೈ ಕನ್ನಡದ ಮಟ್ಟಿಗೆ ಹೇಳುವುದಾದರೆ ಇದೊಂದು ಶ್ರವಣ ಭಾಷೆಯಾಗಿ ಉಳಿದುಕೊಂಡಿದೆ ಎನ್ನುತ್ತಾರೆ.

ಲೇಖನದ ಮೊದಲ ಭಾಗದಲ್ಲಿ ಮದುರೈ ಕನ್ನಡದಲ್ಲಿರುವ ಧ್ವನಿಮಾಗಳನ್ನು ಕುರಿತು ತಿಳಿಸಲಾಗಿದೆ.

ಶಿಷ್ಟಕನ್ನಡದಲ್ಲಿ ದೀರ್ಘಸ್ವರಾನಂತರ ಸಾಧಾರಣವಾಗಿ ವ್ಯಂಜನದ್ವಿತ್ವ ಬರುವುದಿಲ್ಲ. ಆದರೆ ಮದುರೈ ಕನ್ನಡದಲ್ಲಿ ಸಹಜವಾಗಿ ವ್ಯಂಜನದ್ವಿತ್ವ ಬರುತ್ತದೆ ಎಂದು ಉದಾಹರಣೆಗಳನ್ನು ತಿಳಿಸುತ್ತಾರೆ.

ಉದಾಹರಣೆಗೆ ಬೊಕ್ಕೆ ಮಡಕೆ

ಕೂಟ್ಟ ಕೂಟ

ಪದಾದಿ 'ವ'ಕಾರ 'ಬ'ಕಾರವಾಗುವುದನ್ನು ತಿಳಿಸಿದ್ದಾರೆ.

ಉದಾಹರಣೆಗೆ ವಿಸಿರಿ>ಬಿಸಿರಿ(ಬೀಸಣಿಗೆ)

ವೆಂಗಾಯಿ>ಬೆಂಗಾಯಿ(ಈರುಳ್ಳಿ)

ವಿರಿಚ್ಚಿ>ಬಿರಿಚ್ಚಿ(ತೆರೆದು)

ಹೀಗೆ ಹಲವು ರೀತಿಯ ಧ್ವನಿಮಾಗಳ ಬದಲಾವಣೆಗಳನ್ನು ಉದಾಹರಣೆಗಳೊಂದಿಗೆ ವಿವರಿಸಿದ್ದಾರೆ.

ಶಿಷ್ಟಕನ್ನಡದ ಕೆಲವು ಅನುನಾಸಿಕರಹಿತ ಪದಗಳಲ್ಲಿ ಮದುರೈ ಕನ್ನಡದಲ್ಲಿ ಅನುನಾಸಿಕವನ್ನು ಹೊಂದಿ ಬರುತ್ತವೆ. ಉದಾಹರಣೆಗೆ ಬೀಂಜ>ಜೀಜ, ಕೂಂಗು>ಕೂಗು, ಮೂಂಗು>ಮೂಗು ಇತ್ಯಾದಿಗಳು

ಣ>ನ ಆಗಿಯೂ ಮತ್ತು ಳ>ಲ ಆಗಿಯೂ ಬದಲಾಗುವುದಕ್ಕೆ ಉದಾಹರಣೆಗೆ ಎನ್ನು–ಹೆಣ್ಣು, ಅನ>ಹಣ, ಉಲುವು>ಹುಳು, ಬೆಲಕು>ಬೆಳಕು, ಬೆಲ್ಲಿ>ಬೆಳ್ಳಿ ಇತ್ಯಾದಿ.

ಹೀಗೆ ವ್ಯಾಕರಣಾಂಶಗಳಾದ ಸಂಧಿ, ನಾಮಪದಗಳು, ವಿಭಕ್ತಿಗಳು, ಲಿಂಗಸೂಚಕಗಳನ್ನು ಹಲವು ಉದಾಹರಣೆಗಳನ್ನು ತಿಳಿಸುವ ಮೂಲಕ ವಿವರಿಸಿದ್ದಾರೆ.

ಈ ಲೇಖನವು ನೇರವಾಗಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸದಿದ್ದರೂ, ಕನ್ನಡ ಪರಿಸರದಲ್ಲಿ ತಮಿಳು ಭಾಷಿಕರನ್ನು ಅಧ್ಯಯನ ಮಾಡಿದ ಹಾಗೆಯೇ ತಮಿಳು ಪರಿಸರದಲ್ಲಿ ಕನ್ನಡಿಗರನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆದ್ದರಿಂದ ಈ ಲೇಖನವನ್ನು ಆಯ್ದು ಪರಾಮರ್ಶಿಸಿ ಬಳಸಿಕೊಂಡಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದು ಕನ್ನಡಿಗರು ತಮಿಳು ಭಾಷೆಯ ಯಾವ ಪದಗಳನ್ನು ಹೆಚ್ಚು ಬಳಕೆ ಮಾಡುತ್ತಿದ್ದಾರೆ? ಅವುಗಳ ಸ್ವರೂಪವೇನು? ಎಂಬ ಅಂಶಗಳನ್ನು ಕಂಡುಕೊಳ್ಳಲು ಬಳಸಿಕೊಳ್ಳಲಾಗಿದೆ. ಇದರಿಂದ ಭಾಷಾದ್ವೀಪಗಳ ಸಮಾಜೋಭಾಷಿಕ ಅಧ್ಯಯನದಲ್ಲಿ ಕನ್ನಡಿಗರು ತಮಿಳು ಭಾಷೆಯನ್ನು ಸ್ವೀಕರಿಸಿರುವುದನ್ನು ಕಂಡುಕೊಳ್ಳಲು ಸಹಕಾರಿಯಾಗಿದೆ.

ಇನ್ನು ಕರ್ನಾಟಕದಲ್ಲಿರುವ ತಮಿಳು ಭಾಷಿಕರ ಕುರಿತು ಎಸ್. ಮಾದಸ್ವಾಮಿಯವರು ಆರ್. ಪನ್ನೀರ್ ಸೆಲ್ವಂ ಅವರ ಮಾರ್ಗದರ್ಶನಲ್ಲಿ 'Tamils in Karnataka A Socio-Cultural Study with Special reference to Bellary District' ಎನ್ನುವ ಪಿಎಚ್.ಡಿ. ಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ತಮಿಳು ಭಾಷಿಕರು ಬಳ್ಳಾರಿ ಜಿಲ್ಲೆಗೆ ವಲಸೆ ಬಂದಿರುವ ಮತ್ತು ಅವರ ಸಾಮಾಜಿಕ-ಸಾಂಸ್ಕೃತಿಕ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ವಾಸವಾಗಿರುವ ತಮಿಳು ಭಾಷಿಕರ ಸಮೀಕ್ಷೆ, ಜಾತಿವಾರು ವಿವರ, ತಮಿಳರು ವಾಸವಾಗಿರುವ ಸ್ಥಳಗಳನ್ನು ಗುರುತಿಸಿರುವುದು, ಸಾಂಸ್ಕೃತಿಕ ಆಚರಣೆ ಹೀಗೆ ಕೆಲವು ಮಾಹಿತಿಗಳನ್ನು ಸಂಗ್ರಹಿಸಿ ವಿವರಿಸಿದ್ದಾರೆ. ಈ ಮಹಾಪ್ರಬಂಧವು ತಮಿಳು ಭಾಷಿಕರ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನವಾಗಿದೆ.

ಹೀಗೆ ಅಧ್ಯಯನಕ್ಕೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ಅಧ್ಯಯನಗಳನ್ನು ಕಾಣಬಹುದು. ಈ ಎಲ್ಲಾ ಅಧ್ಯಯನಗಳು ತಮಿಳು ಭಾಷಿಕರ ಭಾಷಾರಚನೆ, ಭಾಷಾವಿಶ್ಲೇಷಣೆ ಕುರಿತ ವಿವರಣೆಯನ್ನು ಹೊಂದಿವೆ. ಈ ಅಧ್ಯಯನಗಳಲ್ಲಿ ಕೆಲವು ಸಮಾಜೊಭಾಷಿಕ ಅಧ್ಯಯನಗಳಾದರೂ, ಸಮುದಾಯ, ವ್ಯವಹಾರ, ವರ್ಗಗಳನ್ನು ಆಧರಿಸಿ ಮಂಡಿತವಾಗಿವೆ. ಪ್ರಸ್ತುತ ಅಧ್ಯಯನವು ಮೇಲೆ ತಿಳಿಸಿದ ಅಂಶಗಳನ್ನು ಸೇರಿದಂತೆ ಭಾಷಾದ್ವೀಪಗಳಲ್ಲಿ ಸಂಸ್ಕೃತಿ-ಸಮುದಾಯ-ಭಾಷೆಗೆ ಇರುವ ಸಂಬಂಧಗಳ ಕುರಿತು ಅಧ್ಯಾಯ ನಾಲ್ಕು ಮತ್ತು ಐದರಲ್ಲಿ ಚರ್ಚಿಸಲಾಗಿದೆ. ಭಾಷಾದ್ವೀಪಗಳಲ್ಲಿ ವಾಸವಾಗಿರುವ ಮಕ್ಕಳ ಶೈಕ್ಷಣಿಕ ಸ್ಥಿತಿ ಮತ್ತು ಮಾತೃಭಾಷೆ-ಸಾಮಾಜಿಕ ಭಾಷೆಯ ಕಲಿಕೆ ಕುರಿತು ಅಧ್ಯಾಯ ಆರರಲ್ಲಿ ಚರ್ಚಿಸಲಾಗಿದೆ. ಇವುಗಳೊಂದಿಗೆ ಭಾಷಾದ್ವೀಪದ ಹಿನ್ನೆಲೆಯಲ್ಲಿ ಕನ್ನಡ ಮತ್ತು ತಮಿಳು ಭಾಷಿಕರ ಮೇಲಾಗಿರುವ ಪರಸ್ಪರ ಭಾಷಿಕ, ಸಾಂಸ್ಕೃತಿಕ ಪರಿಣಾಮಗಳನ್ನು ಕಂಡುಕೊಳ್ಳುವುದು ಸೇರಿವೆ.

# ಅಧ್ಯಾಯ: ಮೂರು

# ಭಾಷಾದ್ವೀಪದ ಪರಿಕಲ್ಪನೆ

**ಭಾಷಾದ್ವೀಪದ ಪರಿಕಲ್ಪನೆ.**

೩.೧. ಭಾಷಾದ್ವೀಪದ ಕಲ್ಪನೆ

೩.೨. ಭಾಷಾದ್ವೀಪದ ಸ್ವರೂಪ

೩.೨.೧. ಭಾಷಾದ್ವೀಪ: ರೂಪುಗೊಳ್ಳುವ ಬಗೆ

೩.೨.೧.೧. ವಲಸೆ

೩.೨.೧.೧.೧. ವಲಸೆಯ ಸ್ವರೂಪ

೩.೨.೧.೧.೧.ಅ. ವ್ಯಕ್ತಿಯಾಗಿ ವಲಸೆ ಹೋಗುವುದು

೩.೨.೧.೧.೧.ಆ ಕುಟುಂಬ/ಸಮುದಾಯ/ಗ್ರಾಮಗಳ ರೂಪದಲ್ಲಿ ವಲಸೆ ಹೋಗುವುದು

೩.೨.೧.೧.೨ ವಲಸೆಯ ಕಾರಣಗಳು

೩.೨.೨. ಭಾಷಾದ್ವೀಪಗಳು ರೂಪುಗೊಳ್ಳಲು ಕಾರಣಗಳು

೩.೨.೨.೧. ಸಾಮಾಜಿಕ ಕಾರಣ

ಮಾನವರ ವಲಸೆಗೆ ಇರುವ ಸಾಮಾಜಿಕ ಕಾರಣ

೩.೨.೨.೨. ಆರ್ಥಿಕ ಕಾರಣ

ಮಾನವರ ವಲಸೆಗೆ ಇರುವ ಆರ್ಥಿಕ ಕಾರಣ

೩.೨.೨.೩. ರಾಜಕೀಯ ಕಾರಣ

ಮಾನವರ ವಲಸೆಗೆ ಇರುವ ರಾಜಕೀಯ ಕಾರಣಗಳ

೩.೨.೩. ಭಾಷಾದ್ವೀಪದ ಸ್ವರೂಪ

೩.೨.೩.ಅ. ಭಾಷಾ ಬಳಕೆಯ ನೆಲೆ

೩.೨.೩.ಅ.೧. ಏಕಭಾಷೆ

೩.೨.೩.ಅ.೨. ದ್ವಿಭಾಷೆ

೩.೨.೩.ಅ.೩. ಬಹುಭಾಷೆ

೩.೨.೩.ಆ. ಭೌಗೋಳಿಕ ಸನ್ನಿವೇಶಗಳ ನೆಲೆ

೩.೨.೩.ಆ.೧. ಗುಂಪಾಗಿರುವುದು

೩.೨.೩.ಇ ವರ್ಗಗಳನ್ನಾಧರಿಸಿ

೩.೨.೩.ಇ.೧. ಸಾಮಾಜಿಕ ಮತ್ತು ಆರ್ಥಿಕ ಸ್ಥಾನವನ್ನು ಅನುಸರಿಸಿ ಗುಂಪುಗಳಾಗಿ ವಾಸವಾಗಿರುವುದು

ಅಧ್ಯಾಯ: ಮೂರು

# ಭಾಷಾದ್ವೀಪದ ಪರಿಕಲ್ಪನೆ

## ಪ್ರಸ್ತಾವನೆ

ಭಾಷೆಯು ಚಲನಾತ್ಮಕ ಗುಣವನ್ನು ಹೊಂದಿದೆ. ಅಂದರೆ ಪರಿಸರ, ಸಮಾಜ, ಸಂಸ್ಕೃತಿಗಳ ಪ್ರಭಾವದಿಂದ ಭಾಷೆಯ ಸ್ವರೂಪ, ಬಳಕೆಯ ಸ್ವರೂಪವು ಬದಲಾಗುವುದನ್ನು ಕಾಣಬಹುದು. ಈ ಮೂರು ಅಂಶಗಳಿಗೆ ತಕ್ಕಂತೆ ಭಾಷೆಯು ಚಲನಾತ್ಮಕ ಗುಣವನ್ನು ಹೊಂದಿದೆ. ಈ ಹಿನ್ನೆಲೆಯಲ್ಲಿ ಭಾರತದ ಅನೇಕ ಭಾಷಿಕ ಸಮುದಾಯಗಳು ವಲಸೆಯ ಮೂಲಕ ತಮ್ಮ ಭಾಷೆ, ಸಂಸ್ಕೃತಿ, ಸಮುದಾಯವನ್ನು ಕಟ್ಟಿಕೊಳ್ಳುವ ಗುಂಪುಗಳನ್ನು ಅಧ್ಯಯನ ಮಾಡುವ, ಆ ಮೂಲಕ ಸಮುದಾಯವು ಹೊಸದಾಗಿ ನೆಲೆಸಿದ ಸ್ಥಳದಲ್ಲಿ ತನ್ನ ಭಾಷೆಯನ್ನು ಕಾಯ್ದುಕೊಳ್ಳುವ, ಹೊಸ ಸ್ಥಳದಲ್ಲಿ ತನ್ನ ಭಾಷಿಕ ಸಮುದಾಯವನ್ನು ರೂಪಿಸುವ ಪ್ರಕ್ರಿಯೆಯನ್ನು ಕಂಡುಕೊಳ್ಳುವ ಅವಶ್ಯಕತೆ ಇದೆ.

ಈವರೆಗೂ ಭಾರತದಲ್ಲಿ ಎಷ್ಟೋ ಭಾಷಿಕ ಸಮುದಾಯಗಳು ವಲಸೆ ಪ್ರಕ್ರಿಯೆಯಿಂದ ತಮ್ಮ ಮೂಲಸ್ಥಳವನ್ನು ಬಿಟ್ಟು ಬೇರೊಂದು ಸ್ಥಳದಲ್ಲಿ ನೆಲೆಸಿವೆ. ಈ ಸಮುದಾಯಗಳಲ್ಲಿ ಕೆಲವು ತಮ್ಮ ಭಾಷೆ, ಸಂಸ್ಕೃತಿ, ಸಮಾಜವನ್ನು ಕಳೆದುಕೊಂಡು ಸ್ಥಳೀಯ ಪರಿಸರದಲ್ಲಿ ಸಂಯೋಗಗೊಂಡಿವೆ. ಇನ್ನು ಕೆಲವು ವಿಶೇಷ ಎನ್ನುವಂತಹ ಸಂದರ್ಭದಲ್ಲಿ ಕೆಲವು ಭಾಷಿಕ ಸಮುದಾಯಗಳು ಬೇರೊಂದು ಪ್ರದೇಶದಲ್ಲಿ ನೆಲೆಸಿದರೂ ತಮ್ಮ ಭಾಷೆ, ಸಂಸ್ಕೃತಿ, ಸಮಾಜವನ್ನು ಸಂಗೋಪನೆ ಮಾಡಿಕೊಂಡು ತಮ್ಮ ಅನನ್ಯತೆಯನ್ನು ಉಳಿಸಿಕೊಂಡಿರುವುದು ಕಾಣಬಹುದು.

ಹೀಗೆ ಕೆಲವು ಭಾಷಿಕ ಸಮುದಾಯಗಳು ತಮ್ಮೊಂದಿಗೆ ಭಾಷೆ, ಸಂಸ್ಕೃತಿ, ಸಮಾಜವನ್ನು ಸಂಗೋಪನೆ ಮಾಡಿಕೊಂಡು ಭಾಷಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಅಸ್ಮಿತೆಗಳ ಗುಂಪುಗಳಾಗಿ ಉಳಿದುಕೊಳ್ಳುತ್ತವೆ. ಈ ರೀತಿಯ ಭಾಷಿಕ ಗುಂಪುಗಳು ವಲಸಿಗ ಪರಿಸರದಲ್ಲಿ ಭಿನ್ನವಾಗಿ, ವಿಶೇಷವಾಗಿ ಗುರುತಿಸಲ್ಪಡುತ್ತವೆ. ಇಂತಹ ಗುಂಪುಗಳನ್ನು ಸಮಾಜೋಭಾಷಿಕ ಅಧ್ಯಯನದ ಹಿನ್ನೆಲೆಯಲ್ಲಿ ಸಮುದಾಯ ಭಾಷೆಯ, ಸಂಸ್ಕೃತಿಯ ಸಂಬಂಧಗಳನ್ನು, ಭಾಷೆಯ ಸಂಗೋಪನೆಯನ್ನು ಅಧ್ಯಯನ ಮಾಡಬೇಕಿದೆ.

## ೩.೧. ಭಾಷಾದ್ವೀಪದ ಕಲ್ಪನೆ

ಈವರೆಗೂ ಕನ್ನಡ ಭಾಷಾಧ್ಯಯನದಲ್ಲಿ ಏಕಭಾಷಿಕ, ದ್ವಿಭಾಷಿಕ, ಹಾಗೂ ಬಹುಭಾಷಿಕ ನೆಲೆಗಳಿಗೆ ಸಂಬಂಧಿಸಿದಂತೆ ಹಲವು ಅಧ್ಯಯನಗಳು ನಡೆದಿವೆ. ಏಕಭಾಷಿಕರಿಗೆ ಸಂಬಂಧಿಸಿದಂತೆ ಬಳಕೆಯ ಭಾಷೆಯಲ್ಲಿನ ಪದಕೋಶಗಳ ಸಂಗ್ರಹ, ವಾಕ್ಯರಚನೆ ಪದ್ಧತಿ, ಆಕೃತಿಮಾಗಳ ಅಧ್ಯಯನ ನಡೆದಿವೆ. ಉದಾಹರಣೆಗೆ ಕರ್ನಾಟಕದಲ್ಲಿ ಬ್ರಾಹ್ಮಣರ ಕನ್ನಡ, ಪಾಂಚಾಳರ ಭಾಷೆ ಹೀಗೆ ಹಲವು. ದ್ವಿಭಾಷಿಕರ ಭಾಷೆಗೆ ಸಂಬಂಧಿಸಿದಂತೆ ದ್ವಿಭಾಷಿಕರು ಎರಡು ಭಾಷೆಗಳ ಬಳಕೆಯ ಸನ್ನಿವೇಶ, ಬಳಕೆಯ ಭಾಷೆಯ ಸ್ವರೂಪ, ಎರವಲು ಪದಕೋಶ ಹಾಗೂ ಪರಸ್ಪರ ಭಾಷೆಗಳ ಮೇಲಾಗಿರುವ ಪ್ರಭಾವ ಮತ್ತು ಪ್ರೇರಣೆಗಳು ಕುರಿತು ಅಧ್ಯಯನಗಳಾಗಿವೆ. ಉದಾಹರಣೆಗೆ ಕೆ. ಪಿ. ಭಟ್ ಅವರ 'ಕನ್ನಡ ತೆಲುಗು ದ್ವಿಭಾಷಿಕತೆಯ ಅಧ್ಯಯನ' ಮತ್ತು ಎಂ. ಭಾಗ್ಯಲಕ್ಷ್ಮಿ ಅವರ 'ದ್ವಿಭಾಷಿಕರು'. ಅದರಂತೆ ಬಹುಭಾಷಿಕ ಪರಿಸರಕ್ಕೆ ಸಂಬಂಧಿಸಿದಂತೆ ಬಹುಭಾಷೆಗಳು ರೂಪುಗೊಳ್ಳಲು ಇರುವ ಕಾರಣ, ಅವುಗಳ ಬಳಕೆಯಲ್ಲಿರುವ ವ್ಯತ್ಯಾಸಗಳು, ಬಹುಭಾಷಿಕರ ಭಾಷೆಬಳಕೆಯ ಹಿನ್ನೆಲೆಯಲ್ಲಿರುವ ಸಾಮಾಜಿಕ ಒತ್ತಡಗಳ ಕುರಿತು ಹಲವು ಅಧ್ಯಯನಗಳು ನಡೆದಿವೆ.

ಬಹುಭಾಷಿಕ ಮತ್ತು ಏಕಭಾಷಿಕ ಪರಿಸರದಲ್ಲಿ ವಿಶೇಷವಾಗಿ ಕಂಡುಬರುವ ಏಕಭಾಷಿಕ ಗುಂಪುಗಳೇ ಈ ಅಧ್ಯಯನದ ಕೇಂದ್ರ ಬಿಂದುಗಳು. ಅಂದರೆ ಬೇರೆ ಬೇರೆ ಭಾಷಿಕರ ನಡುವೆ ಬದುಕುವ ಒಂದು ಭಾಷಿಕ ಸಮುದಾಯವು ತನ್ನ ಸುತ್ತಲಿನ ಭಾಷೆಯನ್ನು ಕಲಿಯದೆ ತಮ್ಮದೇ ಭಾಷೆಯಲ್ಲಿ ಜೀವನ ನಡೆಸುವುದು ಇವುಗಳ ವಿಶೇಷ. ಹಾಗಾದರೆ ಈ ಭಾಷಿಕರು ಬೇರೆ ಭಾಷೆಯನ್ನು ಕಲಿಯುವುದಿಲ್ಲವೇ? ಎಂದರೆ ಕಲಿಯುತ್ತಾರೆ. ಅದು ಕೆಲವೇ ಕೆಲವರು ಮಾತ್ರ. ಅದು ಸಾಮಾಜಿಕ ಸಂಪರ್ಕಕ್ಕಾಗಿ ಕಲಿತು ಬಳಸುತ್ತಾರೆ. ಇಂತಹ ಭಾಷಿಕ ಗುಂಪುಗಳೇ ಭಾಷಾದ್ವೀಪಗಳು. ಕನ್ನಡ ಭಾಷಾಧ್ಯಯನ ಕ್ಷೇತ್ರದಲ್ಲಿ ಇದುವರೆಗೂ ಅಷ್ಟಾಗಿ ಪರಿಚಯವಿಲ್ಲದ ಈ ಪರಿಕಲ್ಪನೆ ಕುರಿತು ಕೆಲವೇ ಕೆಲವು ವಿದ್ವಾಂಸರು ಆಗಾಗ ಸಾಂದರ್ಭಿಕವಾಗಿ ಪ್ರಸ್ತಾಪಿಸಿದ್ದಾರೆ. ಸಾಹಿತ್ಯದ ವಿವರಣೆಯಲ್ಲಿಯೂ ಸಮುದಾಯದ ಭಾಷಿಕ ವಿವರಣೆ ನೀಡುವಾಗ ಭಾಷಾದ್ವೀಪದ ಪ್ರಸ್ತಾವನೆ ಮಾಡಿರುವುದನ್ನು ಕಾಣಬಹುದು.

ಅಂತಾರಾಷ್ಟ್ರೀಯ ಮಟ್ಟದಲ್ಲಿ ಅನೇಕ ವಿದ್ವಾಂಸರು ಭಾಷಾದ್ವೀಪ ಎಂಬುದನ್ನು ಇಂಗ್ಲಿಷ್‌ನ **'Lanugage island'** ಎಂಬ ಪರಿಕಲ್ಪನೆಯಲ್ಲಿ ಅಧ್ಯಯನ ನಡೆಸಿದ್ದಾರೆ. ವಿಶೇಷವಾಗಿ ದ್ವೀಪಗಳ ಭಾಷೆಗಳ ಅಧ್ಯಯನವನ್ನು ಈ ಕಲ್ಪನೆಯಲ್ಲಿ ಹೇಳಿದ್ದಾರೆ. ಆದರೂ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಕೆಲವು ದ್ವೀಪಗಳ ಭಾಷೆಗಳನ್ನು ಅಧ್ಯಯನ ಮಾಡಿರುವ ವಿದ್ವಾಂಸರು ದ್ವೀಪಗಳಲ್ಲಿ ಬಳಕೆಯಲ್ಲಿರುವ ಬೇರೆ ಬೇರೆ ಭಾಷಿಕರ ಮಾಹಿತಿಯನ್ನು ಸಂಗ್ರಹಿಸಿ, ಬಳಕೆಯ ಭಾಷೆಯ ಸ್ವರೂಪ, ಸಾಮಾಜಿಕ ಹೊಂದಾಣಿಕೆ ಕುರಿತು ವಿವರಿಸಿದ್ದಾರೆ. ಅದರೊಂದಿಗೆ ಈ ರೀತಿ ಬೇರೆ ಬೇರೆ ಭಾಷಿಕರು ಸಣ್ಣ ಸಣ್ಣ ಪ್ರದೇಶಗಳಲ್ಲಿ ನೆಲೆ ನಿಂತು ವಾಸಿಸುತ್ತಿರುವ ಬಗ್ಗೆ ತಿಳಿಸುತ್ತಾರೆ. ಈ ಎಲ್ಲಾ ಅಧ್ಯಯನಗಳಲ್ಲೂ ವಿವಿಧ ಭಾಷಿಕರು ಈ

ದ್ವೀಪಗಳಲ್ಲಿ ವಾಸಿಸಲು ಕಾರಣ ವಲಸೆ ಎಂದು ಗುರುತಿಸುತ್ತಾರೆ. ಅದರಲ್ಲೂ ವಿಶೇಷವಾಗಿ ಬ್ರಿಟಿಷ್ ಮತ್ತು ಯುರೋಪ್ ರಾಷ್ಟ್ರಗಳ ವಸಾಹತು ಕಾರ್ಯಗಳಿಂದಾಗಿ ಒಂದು ಪ್ರದೇಶದ ಜನರು ವಲಸೆ ಮೂಲಕ ಕೆಲಸಕ್ಕಾಗಿ, ತಮ್ಮ ಸುರಕ್ಷತೆಗಾಗಿ ಮತ್ತೊಂದು ಪ್ರದೇಶದಲ್ಲಿ ನೆಲಸಿ ವಾಸಿಸುವುದನ್ನು ಗುರುತಿಸಿರುತ್ತಾರೆ. ಈ ಕುರಿತ ಮಾಹಿತಿಯನ್ನು ಮುಂದಿನ ಭಾಗದಲ್ಲಿ ವಿವರಿಸಿದೆ.

ಹಾಗೆಯೇ ಭಾರತದಲ್ಲಿ ಭಾಷಾದ್ವೀಪಗಳ ಕುರಿತು ಅಧ್ಯಯನಗಳು ನಡೆದಿವೆ. ಆದರೆ ಅವುಗಳು ನೇರವಾಗಿ ಭಾಷಾದ್ವೀಪಗಳು ಎಂಬ ಶೀರ್ಷಿಕೆಯಲ್ಲಿ ನಡೆದಿಲ್ಲ. ಪರೋಕ್ಷವಾಗಿ ಸಮುದಾಯ ಮತ್ತು ಪ್ರದೇಶಗಳ ಹೆಸರಿನಲ್ಲಿ ಅಧ್ಯಯನಗಳು ನಡೆದಿವೆ. ಭಾರತೀಯ ಭಾಷಾ ಸಂಸ್ಥಾನ, ಮೈಸೂರು ಕೇಂದ್ರದಲ್ಲಿ ಈ ಕುರಿತು ಅಧ್ಯಯನಗಳು ನಡೆದಿವೆ.

**ಇಂಗ್ಲಿಷ್‌ನ ವಿಕಿಪೀಡಿಯದಲ್ಲಿ ಭಾಷಾದ್ವೀಪ(Lanugage island) ಕುರಿತಂತೆ ಇವರು ವ್ಯಾಖ್ಯಾನಗಳು ಈ ಕೆಳಗಿನಂತಿವೆ.**

ದ್ವೀಪದ ಕುರಿತಾಗಿ ಇರುವ ವ್ಯಾಖ್ಯಾನ

"An enclave is territory, or part of a territory. That is entirely sourrounded by the territory of one other state"

ಭಾಷಾದ್ವೀಪದ ಕುರಿತಾಗಿ ಇರುವ ವ್ಯಾಖ್ಯಾನ

"A language island is an exclave of a language that is surrounded by one or more different language"

ಮೇಲಿನ ವ್ಯಾಖ್ಯಾನದಲ್ಲಿ ಭಾಷಾದ್ವೀಪವು ಒಂದು ಪ್ರದೇಶದ ಉಪಪ್ರದೇಶವಾಗಿದ್ದು, ಈ ಪ್ರದೇಶವು ಒಂದು ಅಥವಾ ಒಂದಕ್ಕಿಂತ ಹೆಚ್ಚಿನ ಬೇರೆ ಭಾಷೆಗಳಿಂದ ಸುತ್ತುವರೆವಯಲ್ಪಟ್ಟಿರುತ್ತದೆ ಎಂದು ತಿಳಿಸುತ್ತಾರೆ.

ಅಂತಾರಾಷ್ಟ್ರೀಯ ಮಟ್ಟದಲ್ಲಿ ಜರ್ಮವನಿ ಸೇರಿದಂತೆ ಹಲವು ರಾಷ್ಟ್ರಗಳಲ್ಲಿ ಈ ಭಾಷಾದ್ವೀಪದ ಕುರಿತು ಅಧ್ಯಯನಗಳು ನಡೆದಿವೆ. ಅವುಗಳಲ್ಲಿ ಕೆಲವು ಸಮುದ್ರದ ಮಧ್ಯದಲ್ಲಿರುವ ದ್ವೀಪಗಳ ಕುರಿತು, ಇನ್ನೂ ಕೆಲವು ಬೇರೆ ಬೇರೆ ಭಾಷಿಕರ ನಡುವೆ ಇರುವ ಏಕಭಾಷಿಕರ ಅಧ್ಯಯನಗಳಾಗಿವೆ. Sprachinsel ಹೆಸರಿನಲ್ಲಿ ಜರ್ಮನಲ್ಲಿರುವ ಹಲವು ಭಾಷಾದ್ವೀಪಗಳ ಕುರಿತು ಅಧ್ಯಯನ ನಡೆದಿದೆ. ಮುಖ್ಯವಾಗಿ

1. Language Islands in the German-speaking area
2. outside the closed German-speaking area
3. other languages

ಎಂದು ಭಾಷಾಬಳಕೆಯ ಹಿನ್ನೆಲೆಯಲ್ಲಿ ವಿಭಾಗಿಸಿಕೊಂಡು ಅಧ್ಯಯನ ನಡೆಸಿದ್ದಾರೆ. ಮುಖ್ಯವಾಗಿ ಈ ಭಾಷಾದ್ವೀಪಗಳು ವಲಸೆ ಮತ್ತು ಮರುವಲಸೆ ಪ್ರಕ್ರಿಯೆಯಿಂದ ರೂಪುಗೊಂಡು ನಂತರ ತನ್ನದೇ ಭಾಷಿಕ ನೆಲೆಯಾಗಿ ರೂಪುಗೊಂಡಿರುವ ಬಗ್ಗೆ ವಿಷಯ ಪ್ರಸ್ತಾಪಿಸುತ್ತಾರೆ.

**Michael T. Putnam-Studies on German-Language Islands**

ಈ ಪುಸ್ತಕವನ್ನು **Michael T. Putnam** ಅವರು ಸಂಪಾದಿಸಿದ್ದಾರೆ. ಇದರಲ್ಲಿ ಭಾಷೆಯ ರಚನಾತ್ಮಕ ಮತ್ತು ಸಿದ್ಧಾಂತಗಳ ಮೂಲಕ ಜರ್ಮನ್ ಭಾಷಾದ್ವೀಪಗಳನ್ನು ಅಧ್ಯಯನ ಮಾಡಲಾಗಿದೆ. ಇಲ್ಲಿ ಭಾಷಾದ್ವೀಪ ಪದಕ್ಕೆ Sprachinsel ಎಂದು ಬಳಸಿದ್ದಾರೆ. ಜರ್ಮನ್ ಭಾಷಾದ್ವೀಪಗಳ ಭಾಷೆಗಳಲ್ಲಿನ ಧ್ವನಿ, ಆಕೃತಿಮಾ, ವಾಕ್ಯಪದ್ಧತಿ ಇತರೆ ಭಾಷಾಶಾಸ್ತ್ರದ ಅಂಶಗಳೊಂದಿಗೆ ಅಧ್ಯಯನ ನಡೆಸಿದ್ದಾರೆ.

**ಕನ್ನಡ ಭಾಷಾಧ್ಯಯನ ಮತ್ತು ಸಾಹಿತ್ಯದಲ್ಲಿ ಈವರೆಗೂ 'ಭಾಷಾದ್ವೀಪ' ಕುರಿತ ವಿವರಣೆಗಳು**

**ಸಾರಾ ಅಬೂಬಕ್ಕರ್ ಬರೆದಿರುವ 'ಮುಸ್ಲಿಂ ಸಂವೇದನೆ ಮತ್ತು ನಾನು'(ಲೇಖನ)**

ರಹಮತ್ ತರೀಕೆರೆ(ಸಂ) ಅವರ 'ಮಾತು ತಲೆಯೆತ್ತುವ ಬಗೆ' ಪುಸ್ತಕದಲ್ಲಿ ಸಾರಾ ಅಬೂಬಕ್ಕರ್ ಬರೆದಿರುವ 'ಮುಸ್ಲಿಂ ಸಂವೇದನೆ ಮತ್ತು ನಾನು' ಎಂಬ ಲೇಖನದಲ್ಲಿ ಮುಸ್ಲಿಮರು ಕನ್ನಡ ಭಾಷೆ ಕಲಿಯದವರ ಕುರಿತು ಮಾತನಾಡುತ್ತಾ 'ಮುಸ್ಲಿಮರು ಕನ್ನಡ ಭಾಷೆಯನ್ನು ತಮ್ಮ ಮಕ್ಕಳಿಗೆ ಕಲಿಸದೆ 'ದ್ವೀಪ'ವಾಗಿಸಿದ್ದಾರೆ(ಪುಟ-೨೬೨) ಎಂದು ಪ್ರಯೋಗಿಸಿದ್ದಾರೆ.

ಈ ಹೇಳಿಕೆಯು ಕನ್ನಡ ಭಾಷಿಕರ ಪರಿಸರದಲ್ಲಿ ಮುಸಿಮರು ಕನ್ನಡ ಭಾಷೆಯನ್ನು ಬಳಸದೇ ತಮ್ಮದೇ ಭಾಷೆಯಲ್ಲಿ ಬದುಕುತ್ತಿರುವ ಭಾಷಿಕ ಸ್ಥಿತಿಯನ್ನು ಇಲ್ಲಿ ದ್ವೀಪ ಎಂದು ಪ್ರಯೋಗಿಸಿ ಹೇಳಿದ್ದಾರೆ. ಅಂದರೆ ಮತ್ತೊಂದು ಭಾಷೆಯನ್ನು ಕಲಿಯದೆ ತಮ್ಮ ಭಾಷೆಯಲ್ಲಿಯೇ ಬದುಕು ಕಟ್ಟಿಕೊಂಡಿರುವುದು ಎಂದಾಗಿದೆ.

**ಚಿದಾನಂದಮೂರ್ತಿ ಎಂ. ಅವರ 'ಭಾಷಾವಿಜ್ಞಾನದ ಮೂಲತತ್ವಗಳು'**

ಈ ಪುಸ್ತಕದ ಭಾಷಾಸ್ವೀಕರಣ ಎಂಬ ಭಾಗದಲ್ಲಿ ಲಂಬಾಣಿ ಭಾಷೆಯಲ್ಲಿ ಕನ್ನಡ ಸ್ವೀಕರಣಗಳನ್ನು ಕುರಿತು ವಿಶ್ಲೇಷಣೆ ಮಾಡುವಾಗ ಈ ರೀತಿ ಉಲ್ಲೇಖ ಮಾಡಿದ್ದಾರೆ.

> "ಲಂಬಾಣಿಗಳು ಕನ್ನಡಿಗರ ಮಧ್ಯೆ ಅಲ್ಲಲ್ಲಿ ಗುಂಪು ಗುಂಪಾಗಿ ವಾಸಿಸುತ್ತಿರುವ ಜನ. ಮುಸಲ್ಮಾನರು ಉತ್ತರದಿಂದ ದಕ್ಷಿಣಕ್ಕೆ ದಾಳಿಯಿಟ್ಟು ಬಂದಾಗ ಅವರ ಸೇನೆಯ ಜೊತೆಯಲ್ಲಿ ದಕ್ಷಿಣಕ್ಕೆ ಬಂದು ಇಲ್ಲೇ ನೆಲೆಸಿಬಿಟ್ಟರು. ಇವರ ಮೂಲಸ್ಥಾನ ಬಹುಶಃ ರಾಜಸ್ಥಾನ್; ಇವರ ಭಾಷೆ ಇಂಡೋ-ಆರ್ಯನ್ ವರ್ಗಕ್ಕೆ ಸೇರಿದ ಭಾಷೆ ಎಂಬುದರಲ್ಲಿ ಸಂದೇಹವಿಲ್ಲ. ಇವರದು ಈಗೀಗ ಒಂದೆಡೆ ನೆಲೆನಿಂತ ಜೀವನವಾಗುತ್ತಿದೆ. ಇವರು ಹಿಂದೆ ಬಹುಸಂಚಾರ ಪ್ರಿಯರಾಗಿದ್ದರು.
>
> ಲಂಬಾಣಿಗಳು ಸಾಮಾಜಿಕವಾಗಿ ಬಹು ಹಿಂದುಳಿದಿರುವ ಜನ. ಅವರ ಭಾಷೆ ಕನ್ನಡದ ಮಧ್ಯೆ ಭಾಷಾದ್ವೀಪದಂತಿದೆ(Speech Island)......."

ಈ ವಿವರಗಳು ಲಂಬಾಣಿ ಭಾಷೆ ಕನ್ನಡಿಗರ ಮಧ್ಯೆ ಬಂದು ಸೇರಿ ಹೇಗೆ ವಾಸಿಸುತ್ತಿದ್ದಾರೆ? ಅವರ ಭಾಷಾಸ್ವೀಕರಣಗಳು ಹೇಗಿವೆ ಎಂಬುದನ್ನು ಕುರಿತು ಹೇಳುವಲ್ಲಿ ವಿವರಿಸಿದ್ದಾರೆ. ಇಲ್ಲಿ ಪ್ರಮುಖವಾಗಿ ಅಧ್ಯಯನಕ್ಕೆ ಪೂರಕವಾಗಿ ಗಮನಿಸಬೇಕಾದದ್ದು, 'ಭಾಷಾದ್ವೀಪ' ಕುರಿತು. ಒಂದು ಭಾಷಾದ್ವೀಪ ಸಾಮಾನ್ಯವಾಗಿ ವಲಸೆಯಿಂದ ಬೇರೊಂದು ಭಾಷಿಕ ಸಮುದಾಯಗಳ ಮಧ್ಯೆ ನೆಲೆಸಿ, ತಮ್ಮ ಜೀವನವನ್ನು ಕಟ್ಟಿಕೊಳ್ಳುತ್ತದೆ ಎಂದು ತಿಳಿಯುತ್ತದೆ. ಈ ಒಟ್ಟು ಪ್ರಕ್ರಿಯೆಯಲ್ಲಿ ಕನ್ನಡ ಭಾಷಿಕರ ಮಧ್ಯೆ ಇದ್ದು, ತಮ್ಮ ದಿನನಿತ್ಯದ ಭಾಷಾಬಳಕೆಯ ವಲಯದಲ್ಲಿ ಕನ್ನಡವನ್ನು ಬಳಸದೆ ತಮ್ಮದೇ ಲಂಬಾಣಿ ಭಾಷೆಯನ್ನು ಬಳಸಿಕೊಂಡು ತಮ್ಮ ಮುಂದಿನ ತಲೆಮಾರುಗಳಿಗೆ ಭಾಷೆ ಮತ್ತು ಸಂಸ್ಕೃತಿಯನ್ನು ಸಂಗೋಪನೆ ಮಾಡುತ್ತಿರುವ ಈ ಸಮುದಾಯವು ಕನ್ನಡಿಗರ ಮಧ್ಯೆ ಭಾಷಾದ್ವೀಪವಾಗಿದೆ ಎಂದು ಚಿದಾನಂದಮೂರ್ತಿ ಅವರು ಗುರುತಿಸುತ್ತಾರೆ. ಹಾಗೆಯೇ ಈ ಭಾಷಾದ್ವೀಪ ಪದವನ್ನು ಇಂಗ್ಲಿಷ್‌ನ Speech Island ಪದಕ್ಕೆ ಸಮಾನವಾಗಿ ಬಳಸಿರುವುದನ್ನು ಕಾಣಬಹುದಾಗಿದೆ.

**ಮಹಾದೇವಿಬಾಯಿ ಅವರ ಚಾಮರಾಜನಗರ ಸುತ್ತಿನ ಲಂಬಾಣಿ ಸಂಸ್ಕೃತಿ**

ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿ ಪ್ರಕಟಗೊಂಡಿರುವ ಪ್ರಂಬಂಧವಿದು. ಚಾಮರಾಜನಗರದ ಸುತ್ತಲಿನ ಲಂಬಾಣಿ ಸಮುದಾಯದ ಸಂಸ್ಕೃತಿ ಅಂಶಗಳನ್ನು ಅಧ್ಯಯನ ಮಾಡುವುದಾಗಿದೆ. ಪ್ರಬಂಧದ ಮೊದಲ ಭಾಗದಲ್ಲಿ ಚಾಮರಾಜನಗರದ ಸಾಂಸ್ಕೃತಿಕ ಕಿರುನೋಟವನ್ನು ಪರಿಚಯಿಸಿದ್ದಾರೆ. ಭೌಗೋಳಿಕ ವಿಸ್ತಾರ, ಚಾಮರಾಜನಗರದ ಐತಿಹಾಸಿಕ ಹಿನ್ನೆಲೆಯನ್ನು ವಿವರಿಸಿದ್ದಾರೆ. ಅಧ್ಯಾಯ ಎರಡರಲ್ಲಿ ಲಂಬಾಣಿಗರನ್ನು ಕುರಿತ ಈವರೆಗಿನ ಅಧ್ಯಯನವನ್ನು ತಿಳಿಸಿದ್ದಾರೆ. ಜಾಗತಿಕ ನೆಲೆಯಲ್ಲಿನ ಅಧ್ಯಯನಗಳನ್ನು ವಿವರಿಸುತ್ತಾ ಬಲ್ಗೇರಿಯಾ, ರುಮೇನಿಯಾ, ಹಂಗೇರಿ, ಸ್ವಿಡ್ಜರ್‌ಲ್ಯಾಂಡ್, ಫ್ರಾನ್ಸ್, ಇಂಗ್ಲೆಂಡ್, ಜರ್ಮನಿ, ಸ್ಪೇನ್ ಮುಂತಾದ ಕೆಲವು ದೇಶಗಳಲ್ಲಿ ಇವರು ವಾಸವಾಗಿದ್ದಾರೆ. ಈ ಜನಕ್ಕೆ ಇನ್ನೂ ಆಯಾ ದೇಶಗಳ 'ನಾಗರಿಕತ್ವ' ದೊರಕಿಲ್ಲ. ಈ ಸಮುದಾಯವನ್ನು 'ಕ್ರಿಮಿನಲ್ ಟ್ರೈಬ್ಸ್' ಎಂದು ಹೆಸರಿಸಿ, ಇವರ ಮೇಲೆ ವಿಶೇಷ ನಿಗಾ ಇಡಲಾಗಿದೆ ಎಂದು ತಿಳಿಸುತ್ತಾರೆ.

ಪ್ರಬಂಧದ ಮುಂದಿನ ಭಾಗದಲ್ಲಿ ಬೇರೆ ರಾಷ್ಟ್ರಗಳಲ್ಲಿ ವಾಸವಾಗಿರುವ ಈ ಸಮುದಾಯಗಳನ್ನು ಕುರಿತು ಹೇಳುತ್ತಾ

> "ಭಾರತವನ್ನು ಬಿಟ್ಟರೆ ಉಳಿದೆಲ್ಲ ದೇಶಗಳಿಗಿಂತಲೂ ಹೆಚ್ಚಾಗಿ ಯುಗೋಸ್ಲವಾಕಿಯಾದಲ್ಲಿ ಲಂಬಾಣಿ ಜನಗಳಿದ್ದಾರೆ. ಅಲ್ಲಿಯ ಜಿಪ್ಸಿಗಳಿಗೆ ಓಟು ಕೊಡುವ ಹಕ್ಕಿದೆ. ಆದರೆ ಚುನಾವಣೆಗೆ ನಿಲ್ಲುವ ಹಕ್ಕಿಲ್ಲ. ಆ ಜಿಪ್ಸಿಗಳು ಟ್ರಾಮ್, ಟ್ರಕ್ ಮುಂತಾದುವನ್ನು ನಡೆಸುತ್ತಾರೆ. ಸ್ಟೇಷನರಿ, ಶೃಂಗಾರ ಸಾಧನಗಳನ್ನು ಮಾರುವುದು, ಭವಿಷ್ಯ ಹೇಳುವುದು ಇತ್ಯಾದಿ ಕಸುಬುಗಳನ್ನು ಅವಲಂಬಿಸಿ ಹೊಟ್ಟೆಹೊರೆಯುತ್ತಾರೆ. ಅವರು ವಾಸಿಸುವ ತಾಂಡದ ಪ್ರದೇಶಗಳಿಗೆ 'ಕ್ಯಾಂಪ್', 'ಕ್ಯಾರ್‌ವಾನ್'ಗಳೆಂದು ಕರೆಯುತ್ತಾರೆ."

ಇಲ್ಲಿ ಲಂಬಾಣಿಗರು ವಾಸಿಸುವ ಪ್ರದೇಶಗಳಿಗೆ ಕ್ಯಾಂಪ್ ಅಥವಾ ಕ್ಯಾರ್‌ವಾನ್ ಎಂದು ಕರೆದಿರುವುದನ್ನು ಗುರುತಿದ್ದಾರೆ. 'kar van, kar?'van/ historical: a group of people, especially traders or pilgrims, travelling together across a desert in Asia or North Africa (https://www.google.co.in/search?q=caravan+meaning&ie=utf-8&oe=utf-8&client=firefox-b&gfe_rd=cr&dcr=0&ei=eXtfWqjFGpTfoAPn3rTgBA) A group of people with vehicles or animals who travel together for safety through a dangerous area, especially across a desert on camels(https://dictionary.cambridge.org/dictionary/english/caravan)ಎಂದು ಬ್ರಿಟಿಷ್ ಡಿಕ್ಷನರಿಯಲ್ಲಿ ನಮೂದಾಗಿದೆ. ಇದು ಒಂದರ್ಥದಲ್ಲಿ ಬೇರೆ ಬೇರೆ ಭಾಷಿಕ ಸಮುದಾಯದ ಮಧ್ಯೆ ಲಂಬಾಣಿ ಭಾಷಿಕ ಸಮುದಾಯವು ವಾಸವಿರುವುದನ್ನು ಕುರಿತು ತಿಳಿಸುತ್ತದೆ. ಇದು ಭಾಷಾದ್ವೀಪದ ಕುರಿತು ತಿಳಿಸುತ್ತದೆ.

**ಭಾಗ್ಯಲಕ್ಷ್ಮಿ ಎಂ. ಅವರ 'ಬಳ್ಳಾರಿ ಪರಿಸರದ ಕನ್ನಡ ತೆಲುಗು ದ್ವಿಭಾಷಿಕತೆ: ಸಮಾಜೋಭಾಷಿಕ ಅಧ್ಯಯನ'(ಪಿಎಚ್.ಡಿ ಪ್ರಬಂಧ)**

ಕನ್ನಡ ವಿಶ್ವವಿದ್ಯಾಲಯ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿರುವ ಪ್ರಬಂಧವಾಗಿರುವ ಈ ಅಧ್ಯಯನವು ಒಟ್ಟು ಒಂಬತ್ತು ಘಟಕಗಳನ್ನು ಹೊಂದಿದೆ. ಈ ಅಧ್ಯಯನದ ಭೌಗೋಳಿಕ ವ್ಯಾಪ್ತಿ ಬಳ್ಳಾರಿ ಜಿಲ್ಲೆ. ಅಧ್ಯಯನದಲ್ಲಿ ಸಮಾಜೋಭಾಷಿಕ ಮತ್ತು ದ್ವಿಭಾಷಿಕತೆಯ ಕುರಿತು ಅಧ್ಯಯನ ಮಾಡಲಾಗಿದೆ. ಇಡೀ ಪ್ರಬಂಧದಲ್ಲಿ ಭಾಷಾದ್ವೀಪದ ಕುರಿತು ಹಲವು ಸಂದರ್ಭಗಳಲ್ಲಿ ಅಧ್ಯಯನಕಾರರು ಪ್ರಸ್ತಾಪಿಸಿದ್ದಾರೆ. ಅವುಗಳಲ್ಲಿ ಕೆಲವು ಈ ಕೆಳಗಿನಂತಿವೆ.

೧. ಒಕ್ಕಲಿಗರ ಜಾತಿಗೆ ಸಂಬಂಧಿಸಿದಂತೆ ದ್ವಿಭಾಷಿಕತೆ ಕುರಿತು ಹೇಳುವಾಗ ಹೆಚ್ಚಾಗಿ ತೆಲುಗು ಭಾಷಿಕರೆಲ್ಲಾ ಒಂದೇ ಕಡೆಗಳಲ್ಲಿ ವಾಸಿಸುವ ಸ್ಥಳಗಳನ್ನು ಭಾಷಾದ್ವೀಪ ಎಂದು ತಿಳಿಸಿದ್ದಾರೆ(ಭಾಗ್ಯಲಕ್ಷ್ಮಿ ಎಂ., ಬಳ್ಳಾರಿ ಪರಿಸರದ ಕನ್ನಡ–ತೆಲುಗು ದ್ವಿಭಾಷಿಕತೆ: ಸಮಾಜೋಭಾಷಿಕ ಅಧ್ಯಯನ, ಪುಟ.೧೨೩).

೨. ವೈವಾಹಿಕ ಸಂಬಂಧದಿಂದ ಬಂದ ಮಹಿಳೆಯರಲ್ಲಿನ ಹೆಚ್ಚಿನವರು ತೆಲುಗು ಏಕಭಾಷಿಕರಾಗಿರುವುದನ್ನು ಕಾಣಲಾಗಿದೆ. ಇವರು ತೆಲುಗಿನಲ್ಲಿ ಹೆಚ್ಚಾಗಿ ಮಾತನಾಡುತ್ತಾರೆ. ಕನ್ನಡದ ಸಾಮಾಜಿಕ ಪರಿಸರಕ್ಕೆ ಒಳಗಾಗುವುದಿಲ್ಲ. ಟಿ.ವಿ., ರೇಡಿಯೋ, ಸಿನಿಮಾ ಮುಂತಾದ ಸಂದರ್ಭಗಳಲ್ಲಿ ಕೇಳುವಾಗ, ನೋಡುವಾಗ, ಮಾತನಾಡುವಾಗ ಸಾಮಾನ್ಯವಾಗಿ ತೆಲುಗೇ ಆಗಿರುತ್ತದೆ.

೩. ಭಾಷಿಕರು ಅನಕ್ಷರಸ್ಥರಾಗಿದ್ದು, ಆರ್ಥಿಕ, ಸಾಮಾಜಿಕ ಸ್ಥಿತಿಗತಿ ಕಡಿಮೆ ಇರುವವರಲ್ಲಿ ಘೋರವಾದ ಜಾತಿಪದ್ಧತಿಯಿಂದಾಗಿ ಕಲಿಯುವ ಸಾಮರ್ಥ್ಯ ಮಾಸಿದ ವೃದ್ಧರು, ವಯಸ್ಕರು ಭಾಷಾಕಲಿಕೆಯ ಹಂತವನ್ನು ದಾಟಿರುವ ವಿವಾಹಿತ ಮಹಿಳೆಯರು ಏಕಭಾಷಿಕರಾಗಿರುತ್ತಾರೆ.

೪. ಭಾಷಾದ್ವೀಪಗಳಲ್ಲಿ ಕೃಷಿಯನ್ನು ಅವಲಂಬಿಸಿರುವ ಕುಟುಂಬಗಳನ್ನು ಕಾಣಬಹುದಾಗಿದ್ದು, ಹೆಚ್ಚಾಗಿ ಮೊದಲ ತಲೆಮಾರುಗಳಲ್ಲಿ ತೆಲುಗು ಮಾತನಾಡುವವರು ಕಾಣುತ್ತಾರೆ.

೫. ತೆಲುಗು ಕ್ಯಾಂಪ್‌ಗಳೆಂದು ಆಂಧ್ರದಿಂದ ಕೂಲಿಗಾಗಿ ವಲಸೆ ಬಂದಿರುವವರ ಗುಂಪುಗಳನ್ನು ಬಳ್ಳಾರಿ, ಕೊಪ್ಪಳ ಪರಿಸರದಲ್ಲಿ ಗುರುತಿಸುತ್ತಾರೆ. ಇವರು ಹೊಸಪೇಟೆ, ಕಂಪ್ಲಿ, ಸಿರುಗುಪ್ಪ, ತೋರಣಗಲ್ಲು ಸುತ್ತಮುತ್ತಲಿನ ಪ್ರದೇಶಗಳಲ್ಲಿ ವಾಸವಾಗಿದ್ದಾರೆ.

ಈ ಪ್ರಬಂಧದಲ್ಲಿ ಭಾಷಾ ಸಂಗೋಪನೆಯ ಬಗ್ಗೆ ಈ ವಿವರಣೆ ನೀಡಿದ್ದಾರೆ.

೧. ಲಿಂಗಾಧಾರಿತ ಭಾಷಾ ಸಂಗೋಪನೆಯ ಕುರಿತು ಸಂಶೋಧಕರು ತಮ್ಮ ಅಧ್ಯಯನದಲ್ಲಿ ಸೂಕ್ಷ್ಮವಾಗಿ ಗಮನಿಸಿದ್ದು, ಹೆಣ್ಣುಮಕ್ಕಳೇ ಭಾಷಾ ಸಂಗೋಪನೆಯಲ್ಲಿ ಹೆಚ್ಚು ಪಾತ್ರ ವಹಿಸುತ್ತಾರೆ ಎಂದು ತಿಳಿಸಿದ್ದಾರೆ. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಉನ್ನತ ಸ್ಥಾನ ಹೊಂದಿರುವ ಕುಟುಂಬದ ಮಹಿಳೆಯರು ಸಾಮಾಜಿಕವಾಗಿ ಬೇರೆ ಭಾಷೆಯ ಸಂಪರ್ಕಕ್ಕೆ ಬರುವುದು ಬಹಳ ಕಡಿಮೆ. ವೈವಾಹಿಕ ಸಂಬಂಧದಿಂದ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಬರುವ ಸ್ತ್ರೀಯರು ತಮ್ಮ ಮನೆಯ ಆವರಣದಲ್ಲಿ ಅವರದ್ದೇ ಭಾಷೆಯನ್ನು ಬಳಸುತ್ತಿದ್ದಾರೆ. ಅವರಿಗೆ ತಮ್ಮ ಭಾಷೆಯನ್ನೇ ಮುಂದುವರಿಸುವುದು ಸುಲಭ. ಈ ರೀತಿಯಾಗಿ ಸಂಗೋಪನೆ ನಡೆಯುತ್ತದೆ ಎಂದು ತಿಳಿಸುತ್ತಾರೆ.

೨. ಕೆಳವರ್ಗದ ಮಹಿಳೆಯರು ವಲಸೆ ಬಂದು, ಸುತ್ತಲೂ ತಮ್ಮದೇ ಭಾಷೆಯನ್ನಾಡುವ ಜನರಿದ್ದಾಗ, ಸಾಮಾಜಿಕ ಸಂಪರ್ಕ ಸನ್ನಿವೇಶಗಳು ಸಿಗದಿದ್ದಾಗ, ತಮ್ಮ ಭಾಷೆಯನ್ನು ಮಕ್ಕಳು ಮನೆಯ ವಾತಾವರಣದಲ್ಲಿ ಹೆಚ್ಚು ಬಳಸುತ್ತಾರೆ ಮತ್ತು ಮಕ್ಕಳಿಗೆ ಕಲಿಸುತ್ತಾರೆ ಎಂದು ತಿಳಿಸುತ್ತಾರೆ.

೩. ವಯಸ್ಸು ಕಳೆದಿರುವ ಮಹಿಳೆಯರು ಅನಕ್ಷರಸ್ಥ ಮಹಿಳೆಯರು, ತಮ್ಮದೇ ಭಾಷೆಯಲ್ಲಿ ವ್ಯವಹರಿಸುವುದು ಹೆಚ್ಚು ಎಂದು ಕಂಡುಕೊಂಡಿದ್ದಾರೆ.

೪. ಭಾರತದಂತಹ ಪುರುಷಪ್ರಧಾನ ಸಮಾಜದಲ್ಲಿ ಪುರುಷ ಕುಟುಂಬದ ಜವಾಬ್ದಾರಿಯನ್ನು ಹೊತ್ತು ಸಾಮಾಜಿಕ ವ್ಯಾವಹಾರಿಕ ಸಂಬಂಧ ಹೊಂದುವುದರಿಂದ ಮನೆಯಲ್ಲಿ ಮಹಿಳೆಯರು ಅನ್ಯಭಾಷೆಯ ಸಂಪರ್ಕ ಹೊಂದುವುದು ಬಹಳ ಕಡಿಮೆ. ಇದು ಮಹಿಳೆಯರಲ್ಲಿ ಭಾಷಾಸಂಗೋಪನೆ ನಡೆಯುವುದಕ್ಕೆ ಸಹಕಾರಿಯಾಗಿದೆ ಎಂದು ತಿಳಿಸುತ್ತಾರೆ.

ಒಟ್ಟಾರೆ ಈ ಪ್ರಬಂಧವು ಭಾಷಾದ್ವೀಪದ ಕುರಿತು ಹಲವು ವಿವರಣೆಗಳನ್ನು ನೀಡುತ್ತದೆ. ಇಲ್ಲಿ ತೆಲುಗು ಭಾಷಿಕರು ವಾಸವಾಗಿರುವ ಕ್ಯಾಂಪ್‌ಗಳನ್ನು ಭಾಷಾದ್ವೀಪ ಎನ್ನುವರು. ಅಲ್ಲದೇ ಅವರು ಏಕಭಾಷಿಕರಾಗಿರುವುದಕ್ಕೆ ಕಾರಣಗಳನ್ನು ನೀಡುತ್ತಾರೆ. ತೆಲುಗರು ಸಾಮಾಜಿಕವಾಗಿ, ವ್ಯಾವಹಾರಿಕವಾಗಿ ಬೇರೆ ಭಾಷಿಕರ ಸಂಪರ್ಕಕ್ಕೆ ಒಳಗಾಗದೇ ಇರುವುದರಿಂದ ಇವರು ಏಕಭಾಷಿಕರಾಗಿ ಉಳಿದಿದ್ದಾರೆ ಎಂದು ತಿಳಿಸುತ್ತಾರೆ. ಭಾಷಾ ಸಂಗೋಪನೆ ಕುರಿತು ತಿಳಿಸುತ್ತಾ, ಭಾಷೆಯು ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಹೇಗೆ ಸಂಗೋಪನೆಯಾಗುತ್ತದೆ ಎಂಬುದನ್ನು ಕ್ಷೇತ್ರಕಾರ್ಯದ ಮಾಹಿತಿಯನ್ನು ಆಧರಿಸಿ ತಿಳಿಸಿದ್ದಾರೆ. ತೆಲುಗು ಭಾಷೆಯುಳ್ಳ ಮಹಿಳೆಯರು ವೈವಾಹಿಕ ಸಂಬಂಧದಿಂದ ಕರ್ನಾಟಕದ ತೆಲುಗು ಕ್ಯಾಂಪ್‌ಗಳಲ್ಲಿ ವಾಸಿಸಲು ಪ್ರಾರಂಭಿಸಿದಾಗ, ಅವರಿಗೆ ಯಾವುದೇ ಬೇರೆ ಭಾಷಿಕರ ಸಂಪರ್ಕ ಸಿಗುವುದಿಲ್ಲ.

ಆದ್ದರಿಂದ ಅವರು ಏಕಭಾಷಿಕರಾಗಿ ಉಳಿಯುತ್ತಾರೆ. ಇದರೊಂದಿಗೆ ಈ ಮಹಿಳೆಯರು ಮಕ್ಕಳಿಗೆ ತಮ್ಮ ಭಾಷೆಯನ್ನು ಕಲಿಸುತ್ತಾರೆ. ಹೀಗೆ ಭಾಷೆಯು ಒಂದು ತಲೆಮಾರಿನಿಂದ ತಲೆಮಾರಿಗೆ ಭಾಷಾದ್ವೀಪಗಳಲ್ಲಿ ಹರಿದುಬರುತ್ತದೆ.

**ಡಾ. ಅಶೋಕ ಕುಮಾರ ರಂಜೇರೆ ಅವರ 'ಭಾಷಾದ್ವೀಪಗಳು' ಎಂಬ ಲೇಖನ**

ಡಾ. ಅಶೋಕ ಕುಮಾರ ರಂಜೇರೆ ಮತ್ತು ಇತರರು ಸಂಪಾದಿಸಿರುವ ಆಡಳಿತ ಕನ್ನಡ ಪುಸ್ತಕವು ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ೨೦೧೦ರಲ್ಲಿ ಪ್ರಕಟಗೊಂಡಿದೆ. ಈ ಭಾಷಾದ್ವೀಪಗಳು ಎಂಬ ಲೇಖನದಲ್ಲಿ ಕನ್ನಡ ಭಾಷಿಕರನ್ನು ಮುಖ್ಯವಾಗಿಟ್ಟುಕೊಂಡು ಭಾಷಾದ್ವೀಪದ ವಿವರಣೆಯನ್ನು ಪುಸ್ತಕದಲ್ಲಿ ವಿಸ್ತರಿಸಿದ್ದಾರೆ. ಮುಖ್ಯವಾಗಿ ಭಾಷಾದ್ವೀಪಗಳು ಹೇಗೆ ರೂಪುಗೊಳ್ಳುತ್ತವೆ? ಅವುಗಳ ಸ್ವರೂಪವೇನು? ಇವುಗಳ ಹಿನ್ನೆಲೆಯಲ್ಲಿ ಭಾಷಾದ್ವೀಪದ ವ್ಯಾಖ್ಯಾನವನ್ನು ತಿಳಿಸಿದ್ದಾರೆ.

ಭಾಷಿಕರು ತಮ್ಮ ಬದುಕಿನ ಅವಶ್ಯಕತೆಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುವ ಕ್ರಿಯೆಯನ್ನು ಎರಡು ರೀತಿಯಲ್ಲಿ ಗುರುತಿಸಿದ್ದಾರೆ. ಇದರಲ್ಲಿ ಒಬ್ಬ ವ್ಯಕ್ತಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋದಾಗ ಆ ವ್ಯಕ್ತಿ ಬಳಸುವ ಭಾಷೆಯ ಕುರಿತು ವಿವರಣೆ ನೀಡುತ್ತಾ, "...ಕ್ರಮೇಣ ತಮ್ಮ ಭಾಷೆಯನ್ನು ಬಳಸುವ ಸಂದರ್ಭವೇ ಕಳೆದುಕೊಳ್ಳುವ ಸಾಧ್ಯತೆ ಇದೆ. ತಮ್ಮ ಕುಟುಂಬದ ಎಲ್ಲರೂ ಜೊತೆಯಲ್ಲಿದ್ದಾಗ ತಮ್ಮ ಕುಟುಂಬದ ಚೌಕಟ್ಟಿನೊಳಗೆ ತಮ್ಮ ಮಾತೃಭಾಷೆ ಬಳಸಬೇಕಾದ ಸಾಧ್ಯತೆ ಬರಬಹುದು. ಇದೇ ಕುಟುಂಬದ ಮುಂದಿನ ಜನಾಂಗ ತಮ್ಮ ತಂದೆ ತಾಯಿಯ ಮಾತೃಭಾಷೆಯನ್ನು ಬಳಸುವ ಅನಿವಾರ್ಯತೆಗಳು ಕಡಿಮೆಯಾಗಿ ಹೋಗುತ್ತವೆ. ಇದರ ನಂತರದ ಜನಾಂಗಕ್ಕೆ ತಮ್ಮ ತಾತನ ಮಾತೃಭಾಷೆ ಬಹುತೇಕ ಮಾಯವಾಗಿ ಅವರ ಪಾಲಿಗೆ ಭಾಷೆ ನಾಶವಾಗುತ್ತದೆ."(ಪು-೧೩೪) ಎಂದು ಹೇಳುತ್ತಾರೆ.

ಮತ್ತೊಂದು "ಉದ್ಯೋಗ ನಿಮಿತ್ತ, ವ್ಯಾಪಾರ ನಿಮಿತ್ತ, ರಾಜಕೀಯ ನಿಮಿತ್ತ ಒಂದು ಪ್ರದೇಶದಿಂದ ಮತ್ತೊಂದು ದೂರದ ಪ್ರದೇಶಕ್ಕೆ ಒಬ್ಬನೇ ಹೋಗದೆ ಅನೇಕರು ಹೋಗುವ ಸಾಧ್ಯತೆಗಳಿವೆ. ಹೀಗೆ ಒಂದು ಭಾಷೆಯನ್ನು ಆಡುವ ಭಾಷಿಕರು ತಮ್ಮ ಮಾತೃಭಾಷೆ ಆಡುವ ಪ್ರದೇಶದಿಂದ ತುಂಬ ದೂರ ಬಂದು ಒಟ್ಟಿಗೆ ಇದ್ದಾಗ ತಮ್ಮ ಮಾತೃಭಾಷೆ ಕನಿಷ್ಠ ಹಂತದವರೆಗೆ ಉಳಿಸಿಕೊಳ್ಳುತ್ತಾರೆ."(ಪು-೧೩೫) ಎಂದು ತಿಳಿಸುತ್ತಾರೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು, ಭಾಷಿಕರು ಏಕವ್ಯಕ್ತಿಯಾಗಿ ಪ್ರದೇಶದಿಂದ ಪ್ರದೇಶಕ್ಕೆ ಹೋಗುವುದರಿಂದ ಮತ್ತು ಅನೇಕರು ಹೋಗುವುದರಿಂದ ಬಳಕೆಯ ಭಾಷೆಯ ಮೇಲಾಗುವ ಪರಿಣಾಮ. ಆ ಮೂಲಕ ಭಾಷಿಕರ ಸಾಮಾಜಿಕ ಜೀವನವನ್ನು ಭಾಷೆಯ ಮೂಲಕ ನಿರ್ಮಾಣ ಮಾಡಿಕೊಳ್ಳುವುದನ್ನು ಇಲ್ಲಿ ಏಕವ್ಯಕ್ತಿಯು ಬೇರೆ ಭಾಷಿಕರ ಪರಿಸರದಲ್ಲಿ ನೆಲೆಸಿದಾಗ ತಮ್ಮ ಭಾಷೆಯನ್ನು ಅನಾಯಸವಾಗಿ ಕಳೆದುಕೊಳ್ಳುತ್ತಾರೆ. ಅನೇಕರು ಬೇರೆ ಭಾಷಿಕರ ಪರಿಸರದಲ್ಲಿ ನೆಲೆಸಿದಾಗ ತಮ್ಮ ಭಾಷೆಯನ್ನು ಕನಿಷ್ಠ ಮಟ್ಟದಲ್ಲಾದರೂ ಉಳಿಸಿಕೊಳ್ಳುತ್ತಾರೆ ಎಂಬುದು. ಭಾಷಾದ್ವೀಪದ ಪರಿಕಲ್ಪನೆಗೆ ಸಂಬಂಧಿಸಿದ ಈ ಹೇಳಿಕೆ

ಒಪ್ಪಿಕೊಳ್ಳಬಹುದಾಗಿದೆ. ಹಾಗೆಯೇ ಮುಂದುವರಿದು "ತಮ್ಮ ಭಾಷಿಕರಿಂದ ಮತ್ತು ಪ್ರಾದೇಶಿಕರಿಂದ ಸಂಬಂಧ ಪಡೆಯದೇ ಇದ್ದರೂ ಆ ಭಾಷೆ ಜೀವಂತವಾಗಿರುತ್ತದೆ. ಈ ರೀತಿ ಭೌತಿಕವಾಗಿ ದೂರವಾಗಿ ತಮ್ಮದೇ ಭಾಷೆಯನ್ನು ಉಳಿಸಿಕೊಂಡು ಈ ಜನರ ಭಾಷೆಯನ್ನು ಭಾಷಾದ್ವೀಪ"(ಪು-೧೩೫) ಎಂದು ಕರೆಯುತ್ತಾರೆ. ಇಲ್ಲಿಯೂ ಭಾಷಿಕರ ಪರಿಸರದಿಂದ ದೂರವಾದ ಜನರು ತಮ್ಮ ಭಾಷೆಯನ್ನು ಉಳಿಸಿಕೊಳ್ಳುವ ಕುರಿತು ಹೇಳಿದ್ದಾರೆ.

ಇಡೀ ಲೇಖನದಲ್ಲಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಗುರುತಿಸುವುದಾದರೆ ಭಾಷಾದ್ವೀಪದ ಕುರಿತ ವ್ಯಾಖ್ಯಾನ;

> "ನಿಗದಿತ ಒಂದು ಪ್ರದೇಶದಲ್ಲಿ ಒಂದೇ ಭಾಷೆಯನ್ನು ಬಳಸುವವರಲ್ಲಿ, ಹಲವರು ಬೇರೆಯಾಗಿ ಇನ್ನೊಂದು ಭಾಷಿಕ ಸಮುದಾಯದ ನಡುವೆ ಜೀವಿಸಬೇಕಾದ ಸಂದರ್ಭದಲ್ಲೂ ತಮ್ಮ ಭಾಷೆ ಉಳಿಸಿಕೊಂಡಿರುವ ಸನ್ನಿವೇಶವನ್ನು ಭಾಷಾದ್ವೀಪ ಎಂದು ಕರೆಯಬಹುದು"(ಪು-೧೩೫)

ಭಾಷಾದ್ವೀಪದ ಕುರಿತು ಇಲ್ಲಿಯವರೆಗೂ ಕನ್ನಡ ಭಾಷಾಶಾಸ್ತ್ರದಲ್ಲಿ ದೊರಕಿರುವ ವ್ಯಾಖ್ಯಾನವಿದು. ಈ ಹಿಂದೆ ಭಾಷಾದ್ವೀಪದ ಕುರಿತು ಹೇಳಿಕೆಗಳನ್ನು ಅಥವಾ ವಿವರಣೆಗಳನ್ನು ಹೇಳಿದ್ದರು. ಆದರೆ ಈ ವ್ಯಾಖ್ಯಾನವು ಭಾಷಾದ್ವೀಪದ ಪೂರ್ಣರೂಪವನ್ನು ತಿಳಿಸುತ್ತದೆ. ಈ ವ್ಯಾಖ್ಯಾನವನ್ನು ಗಮನಿಸಿದಾಗ ಮೂಡುವ ಪ್ರಶ್ನೆ ಎಂದರೆ, ಬೇರೊಂದು ಪರಿಸರದಲ್ಲಿ ನೆಲೆಸಿದವರು ಮತ್ತೊಂದು ಭಾಷೆಯನ್ನು ಕಲಿಯುವುದಿಲ್ಲವೇ ಎಂಬುದು. ಆದರೆ ಅಶೋಕ ಕುಮಾರ ರಂಜೇರೆ ಅವರು ಈ ಕುರಿತು ಹೇಳುತ್ತಾ ಬೇರೆ ಭಾಷೆಯನ್ನು ಕಲಿಯುವುದಿಲ್ಲ ಎಂದರ್ಥವಲ್ಲ. ಒಂದು ಭಾಷಿಕ ವಲಯದಿಂದ ಬೇರೆಯಾದ ಅಲ್ಪಸಂಖ್ಯಾತ ಭಾಷಿಕರು ಮತ್ತೊಂದು ಭಾಷಿಕ ಸಮುದಾಯದ ನಡುವೆ ಬದುಕಬೇಕಾದ ಅನಿವಾರ್ಯತೆಯಿಂದ ಬೇರೆ ಬೇರೆ ಭಾಷೆಗಳನ್ನು ಕಲಿಯಬಹುದು. ವ್ಯಾವಹಾರಿಕವಾಗಿ ಅಲ್ಲಿನ ಭಾಷೆಯನ್ನೇ ಮಾತಾಡಬಹುದು" ಎಂದು ತಿಳಿಸುತ್ತಾರೆ. ಇದರ ಅರ್ಥ ಸಾಮಾಜಿಕ ಅವಶ್ಯಕತೆಗಳಿಗೆ ತಕ್ಕಂತೆ ಅಥವಾ ಸಾಮಾಜಿಕ ಸಂದರ್ಭಗಳಿಗೆ ಅನುಗುಣವಾಗಿ ಮತ್ತೊಂದು ಭಾಷೆಯನ್ನು ಕಲಿಯುತ್ತಾರೆ. ಕೆಲವೇ ಕೆಲವು ಜನರು ಮಾತ್ರ ಈ ಸಂದರ್ಭಗಳಿಗೆ ಒಳಗಾಗುತ್ತಾರೆ. ಹೀಗೆ ಈ ಎಲ್ಲಾ ಹೇಳಿಕೆಗೆ ಸಂಬಂಧಿಸಿದಂತೆ ಕನ್ನಡ ಭಾಷಿಕರನ್ನು ಮುಖ್ಯವಾಗಿಟ್ಟುಕೊಂಡು ಉದಾಹರಣೆಗಳನ್ನು ತಿಳಿಸಿದ್ದಾರೆ.

ಒಟ್ಟಾರೆ ಹೇಳುವುದಾದರೆ ಭಾಷಾದ್ವೀಪದ ಕುರಿತ ಈ ವ್ಯಾಖ್ಯಾನ ಹೆಚ್ಚು ಅರ್ಥಪೂರ್ಣವಾಗಿದೆ. ಈ ವ್ಯಾಖ್ಯಾನವನ್ನು ಪ್ರಸ್ತುತ ಭಾಷಾದ್ವೀಪಗಳಿಗೆ ಅನ್ವಯಿಸಬಹುದು. ಆ ಮೂಲಕ ಕನ್ನಡ ಭಾಷಾಶಾಸ್ತ್ರದಲ್ಲಿ ಭಾಷಾದ್ವೀಪ ಪರಿಕಲ್ಪನೆಯನ್ನು ನಿರ್ದಿಷ್ಟಪಡಿಸಬಹುದು.

ಕನ್ನಡ ಭಾಷಾದ್ವೀಪಗಳು ಎಂಬ ಉಪಶೀರ್ಷಿಕೆಯಲ್ಲಿ ಕರ್ನಾಟಕದ ಹೊರಭಾಗದಲ್ಲಿ ಸೃಷ್ಟಿಯಾಗಿರುವ ಕನ್ನಡ ಭಾಷಾದ್ವೀಪಗಳನ್ನು ತಿಳಿಸುತ್ತಾರೆ. ಕನ್ನಡದ ನೆಲದಿಂದ ರಾಜಕೀಯವಾಗಿ, ಸಾಮಾಜಿಕವಾಗಿ ಮತ್ತು

ಭೌಗೋಳಿಕವಾಗಿ ದೂರವಾದ ಪ್ರದೇಶವೊಂದರಲ್ಲಿ ಕನ್ನಡ ಜೀವಂತವಾಗಿರುವ ಸ್ಥಿತಿಯನ್ನು 'ಕನ್ನಡ ಭಾಷಾದ್ವೀಪ'(ಪು-೧೩೫) ಎಂದು ಗುರುತಿಸುತ್ತಾರೆ. ಇವುಗಳಲ್ಲಿ ಮುಂಬಯಿ ನಗರದಲ್ಲಿನ ಕರಾವಳಿ ಕರ್ನಾಟಕದ ಜನರು ರೂಪಿಸಿಕೊಂಡಿರುವ ಕನ್ನಡ ವಾತಾವರಣವನ್ನು ತಿಳಿಸುತ್ತಾರೆ. ದೆಹಲಿ, ಅಮೆರಿಕ, ಆಸ್ಟ್ರೇಲಿಯಾ, ಇಂಗ್ಲೆಂಡ್ ಇತರೆಡೆಗಳಲ್ಲಿ ಈ ಭಾಷಾದ್ವೀಪಗಳನ್ನು ಗುರುತಿಸಿದ್ದಾರೆ. ಈ ಮೇಲೆ ಹೇಳಿದ ಎಲ್ಲಾ ಹೇಳಿಕೆಗಳು, ವಿವರಣೆಗಳು ಭಾಷಾದ್ವೀಪದ ಕುರಿತು ಹೇಳುತ್ತವೆ. ಅವುಗಳನ್ನು ಅನುಸರಿಸಿಕೊಂಡು ಭಾಷಾದ್ವೀಪದ ಸ್ವರೂಪ ಮತ್ತು ಸಂಗ್ರಹಿತ ರೂಪದ ವ್ಯಾಖ್ಯಾನ ನೀಡಬಹುದಾಗಿದೆ.

ಭಾಷಾದ್ವೀಪವನ್ನು ಕಲ್ಪಿಸುವ ಮೊದಲು ನಮಗೆಲ್ಲ ತಿಳಿದಿರುವಂತೆ 'ದ್ವೀಪ' ಎನ್ನುವುದರ ವ್ಯಾಖ್ಯಾನವನ್ನು ತಿಳಿಯುವುದಾದರೆ (ಭೌಗೋಳಿಕವಾಗಿ) ಸುತ್ತಲೂ ನೀರಿದ್ದು ಮಧ್ಯ ಭೂಪ್ರದೇಶವಿರುವುದಕ್ಕೆ ದ್ವೀಪ ಎನ್ನುತ್ತಾರೆ. ಈ ಕುರಿತು ಹಲವು ನಿಘಂಟುಗಳಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಹೀಗೆ ಭಾಷಾದ್ವೀಪದ ವ್ಯಾಖ್ಯಾನವನ್ನು ಭಾಷೆಯನ್ನು ಮುಖ್ಯವಾಗಿರಿಸಿಕೊಂಡು ವ್ಯಾಖ್ಯಾನ ಮಾಡಿರುವುದು ಈ ಹಿಂದೆಯೇ ಗಮನಿಸಿದ್ದೇವೆ. ಆದರೆ ಅದು ಕೇವಲ ಸಂದರ್ಭಗಳಲ್ಲಿ ಪ್ರದೇಶ, ಸಮುದಾಯ ಇತರೆ ಅಂಶಗಳನ್ನು ಅನುಸರಿಸಿ ಭಾಷಾದ್ವೀಪವನ್ನು ವ್ಯಾಖ್ಯಾನಿಸುವಾಗ ಭಿನ್ನವಾಗುತ್ತ ಹೋಗುತ್ತದೆ. ಹಾಗೆಯೇ ಭಾಷಾದ್ವೀಪಗಳು ಕೇವಲ ಭಾಷಾದ್ವೀಪಗಳಾಗಿರದೆ ಅನೇಕ ಸಂದರ್ಭಗಳಲ್ಲಿ ಸಾಂಸ್ಕೃತಿಕ ದ್ವೀಪಗಳಾಗಿ, ರಾಜಕೀಯ ದ್ವೀಪಗಳಾಗಿ, ಧಾರ್ಮಿಕ ದ್ವೀಪಗಳಾಗಿ ಇರುವುದನ್ನು ಕಾಣಬಹುದು. ಅಂದರೆ ಸಾಂಸ್ಕೃತಿಕ ದ್ವೀಪಗಳು ಎಂದರೆ ಬೇರೆ ಸಂಸ್ಕೃತಿಗಳನ್ನು ತಮ್ಮ ಸಂಸ್ಕೃತಿ ಅಥವಾ ಸಮುದಾಯದೊಂದಿಗೆ ಬೆರೆತುಕೊಳ್ಳದ ಹಾಗೆ ಬದುಕನ್ನು ಕಟ್ಟಿಕೊಂಡು ಸಮುದಾಯವನ್ನು ಕಟ್ಟಿಕೊಂಡು ಬದುಕುತ್ತಿರುತ್ತವೆ. ಇವು ಸಾಂಸ್ಕೃತಿಕ ದ್ವೀಪಗಳಾಗಿಯೇ ಉಳಿದಿರುತ್ತವೆ. ಇಲ್ಲಿ ಈ ಸಾಂಸ್ಕೃತಿಕ ದ್ವೀಪಗಳಾಗಿ ಉಳಿಯಲು ಭಾಷೆಯೂ ಒಂದು ಭಾಗವಾಗಿ ಕಾರ್ಯ ನಿರ್ವಹಿಸುತ್ತಿರುತ್ತದೆ. ಅದರಂತೆ ರಾಜಕೀಯ ದ್ವೀಪಗಳು ಎಂದರೆ ಎಷ್ಟೋ ಸಮುದಾಯಗಳು ಬೇರೆ ಅಂದರೆ ಹೊರಗಿನ ಸಮುದಾಯಗಳು ತಮ್ಮ ನಾಯಕತ್ವವನ್ನು ವಹಿಸಿಕೊಳ್ಳಲು ಅಥವಾ ಆಡಳಿತ ಅಧಿಕಾರವನ್ನು ವಹಿಸಿಕೊಳ್ಳಲು ಅವಕಾಶ ಮಾಡಿಕೊಟ್ಟಿರುವುದಿಲ್ಲ. ಅವು ತಮ್ಮದೇ ಆದ ರಾಜಕೀಯ ಅವಸ್ಥೆಯಲ್ಲಿ ಬದುಕನ್ನು ಕಟ್ಟಿಕೊಂಡಿರುತ್ತವೆ ಇವು ರಾಜಕೀಯ ದ್ವೀಪಗಳಾಗಿ ಉಳಿದುಕೊಂಡಿರುತ್ತವೆ. ಇನ್ನು ಧಾರ್ಮಿಕ ದ್ವೀಪಗಳು ಎಂದರೆ ಇವತ್ತಿಗೂ ನಮ್ಮ ಸುತ್ತಮುತ್ತಲಿನ ಅನೇಕ ಸಮುದಾಯಗಳು ಬೇರೆ ಸಮುದಾಯಗಳ ಧಾರ್ಮಿಕ ವಿಧಿವಿಧಾನಗಳನ್ನು ಅನುಸರಿಸುವುದಿಲ್ಲ. ಅಂದರೆ ತಮ್ಮ ಜೀವನದಲ್ಲಿ ಬಾಹ್ಯ ಪರಿಸದಲ್ಲಿರುವ ಧಾರ್ಮಿಕ ಆಚರಣೆಗಳನ್ನು, ಪೂಜಾವಿಧಾನಗಳನ್ನು ಅನುಸರಿಸದೆ ತಮ್ಮದೇ ಸಮುದಾಯದ ಪೂಜಾ ವಿಧಾನಗಳನ್ನು ಆಚರಿಸುತ್ತಾರೆ. ಯಾವುದೇ ಬಾಹ್ಯ ಪರಿಸರದ ಪ್ರಭಾವಕ್ಕೆ ಒಳಗಾಗದೆ ತಮ್ಮ ಸಮುದಾಯಗಳನ್ನು ಕಟ್ಟಿಕೊಂಡಿರುತ್ತಾರೆ. ಹೀಗೆ ಒಂದು ಭಾಷಾದ್ವೀಪವು ಹಲವು ಕಾರಣಗಳಿಗೆ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿರುತ್ತದೆ. ಭಾಷಾದ್ವೀಪವು ಕೇವಲ ಭಾಷೆಯನ್ನು ಮಾತ್ರವೇ ದ್ವೀಪವನ್ನಾಗಿಸದೆ ಹಲವು ಸಂದರ್ಭಗಳಲ್ಲಿ ಸಂಸ್ಕೃತಿ, ಧರ್ಮ, ರಾಜಕೀಯ ಹೀಗೆ ಹಲವು ಅಂಶಗಳಲ್ಲಿ ಬಾಹ್ಯ ಪ್ರಭಾವಗಳಿಗೆ ಒಳಗಾಗದೆ ತಮ್ಮತನವನ್ನು ಉಳಿಸಿಕೊಂಡಿರುತ್ತವೆ. ಹೀಗೆ ವಿವಿಧ ಸಾಮಾಜಿಕ ವಲಯದಲ್ಲಿ ದ್ವೀಪವಾಗಿ ರೂಪುಗೊಂಡಿರುತ್ತವೆ. ಈ ಕಾರಣಕ್ಕಾಗಿ ಭಾಷಾದ್ವೀಪವನ್ನು ನಿರ್ದಿಷ್ಟ ವಾಕ್ಯಗಳಲ್ಲಿ, ಪದಗಳಲ್ಲಿ ಹಿಡಿದಿಡುವುದು ಕಷ್ಟಸಾಧ್ಯ.

ಭಾಷಾದ್ವೀಪಗಳು ಹಲವು ಸಾಮಾಜಿಕ ವಲಯದಲ್ಲಿ ರೂಪುಗೊಂಡಿವೆ. ಅಂದರೆ ರಾಜಕೀಯವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಇವುಗಳನ್ನು ದ್ವೀಪಗಳೆಂದು ಗುರುತಿಸಬಹುದು. ಉದಾಹರಣೆಗೆ ಪ್ರದೇಶವನ್ನು ಮುಖ್ಯವಾಗಿರಿಸಿಕೊಂಡು ಹೇಳುವಾಗ ನಿರ್ದಿಷ್ಟ ಭೂಪ್ರದೇಶದಲ್ಲಿ ವಾಸಿಸುವ ಭಾಷಿಕರನ್ನು ಭಾಷಾದ್ವೀಪವೆಂದು, ಅದೇ ರೀತಿಯಲ್ಲಿ ಸಮುದಾಯವನ್ನು ಮುಖ್ಯವಾಗಿರಿಸಿಕೊಂಡು ಹೇಳುವಾಗ ಲಂಬಾಣಿ ಸಮುದಾಯವು ಏಕಪ್ರದೇಶದಲ್ಲಿ ನೆಲೆಸದೆ, ಅದು ವಿವಿಧ ಭಾಗಗಳಲ್ಲಿ ನೆಲೆಸಿರುವುದನ್ನು ಗಮನಿಸಬಹುದು. ವಿಶೇಷವೆಂದರೆ ಈ ಸಮುದಾಯವು ತಾವು ವಾಸಿಸುವ ಪ್ರದೇಶಗಳಲ್ಲಿ(ಮನೆ/ಸಮುದಾಯದ) ಆವರಣದಲ್ಲಿ ಲಂಬಾಣಿ ಭಾಷೆಯನ್ನು ರೂಢಿಸಿಕೊಂಡು ಭಾಷಾದ್ವೀಪವಾಗಿದೆ. ಹೀಗೆ ಒಂದೇ ಭೂಭಾಗದಲ್ಲಿದ್ದರೂ ಅಥವಾ ಬೇರೆ ಬೇರೆ ಭಾಗಗಳಲ್ಲಿ ವಾಸವಾಗಿದ್ದರೂ ತಮ್ಮ ಖಾಸಗಿ/ರಕ್ತಸಂಬಂಧ/ಸಮುದಾಯದ ಆವರಣಗಳಲ್ಲಿ ತಮ್ಮ ಮೂಲಭಾಷೆಯನ್ನು ಉಳಿಸಿಕೊಂಡಿರುವುದು ಭಾಷಾದ್ವೀಪವಾಗಿದೆ. ಆದ್ದರಿಂದ ಭಾಷಾದ್ವೀಪದ ಕುರಿತ ವ್ಯಾಖ್ಯಾನವನ್ನು ನಿರ್ದಿಷ್ಟವಾಗಿ ಹೇಳುವುದು ಭಾಷಾದ್ವೀಪದ ವ್ಯಾಪ್ತಿಯನ್ನೇ ಸಂಕುಚಿತಗೊಳಿಸಿದಂತಾಗುತ್ತದೆ.

ಭಾಷಾದ್ವೀಪಗಳು ರಾಜಕೀಯವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ದ್ವೀಪಗಳಾಗಿರುತ್ತವೆ ಎಂಬ ಅಂಶಗಳನ್ನು ಜರ್ಮನಿಯ ಭಾಷಾದ್ವೀಪಗಳ ಅಧ್ಯಯನಕಾರರು ತಮ್ಮ ಅಧ್ಯಯನಗಳಲ್ಲಿ ಹೇಳಿರುವುದನ್ನು ಕಾಣಬಹುದು. ಅಂದರೆ ಬಹುತೇಕ ಭಾಷಾದ್ವೀಪಗಳು ತಮ್ಮ ಸಾಮಾಜಿಕ ಪರಿಸರವನ್ನು ಅನುಸರಿಸಿ ಬಾಹ್ಯ ಪರಿಸರದ ಪ್ರೇರಣೆಗಳಿಗೆ ಒಳಗಾಗದೆ ತಮ್ಮದೇ ಜೀವನ, ಭಾಷೆ, ಸಂಸ್ಕೃತಿ, ಧರ್ಮವನ್ನು ರೂಪಿಸಿಕೊಂಡಿರುವುದು ಕಾಣಬಹುದು. ಈ ರೀತಿಯ ಭಾಷಾದ್ವೀಪಗಳನ್ನು ಕರ್ನಾಟಕದಲ್ಲಿ ಕಾಣಬಹುದು. ಅಂದರೆ ಕನ್ನಡ ಭಾಷಾಪರಿಸರದಲ್ಲಿ ವಲಸೆ ಬಂದು ವಾಸವಾಗಿರುವ ಬೇರೆ ಭಾಷಿಕರು ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ದ್ವೀಪಗಳಾಗಿ ಉಳಿದುಕೊಂಡಿರುವುದಕ್ಕೆ ಹಲವು ಉದಾಹರಣೆಗಳು ಸಿಗುತ್ತವೆ. ಉದಾಹರಣೆಗೆ ೧. ಧಾರ್ಮಿಕ ದ್ವೀಪ: ಮುಂಡಗೋಡಿನ ಟಿಬೆಟ್ ನಿರಾಶ್ರಿತರ ಕ್ಯಾಂಪನ್ನು ಭಾಷಾದ್ವೀಪದ ಜೊತೆಗೆ ಧಾರ್ಮಿಕ ದ್ವೀಪವೆಂದು ಸಹ ಹೇಳಬಹುದು. ಅಂದರೆ ಇಲ್ಲಿ ಮೂಲ ಟಿಬೆಟ್‌ನಲ್ಲಿ ಇರುವಂತೆ ಧಾರ್ಮಿಕ ವಿಚಾರಗಳನ್ನು ಆಚರಣೆ ಮತ್ತು ಸಂಗೋಪನೆ ಮಾಡಿಕೊಂಡು ಬರುತ್ತಿದ್ದಾರೆ. ಬುದ್ಧನನ್ನು ತಮ್ಮ ಆರಾಧ್ಯ ದೈವವನ್ನಾಗಿಸಿಕೊಂಡು ಟಿಬೆಟ್ ಭಾಷೆಯಲ್ಲಿ ರಚನೆಯಾಗಿರುವ ಧಾರ್ಮಿಕ ಸಾಹಿತ್ಯವನ್ನು ತಮ್ಮ ಧಾರ್ಮಿಕ ಆಚರಣೆಯ ಸಮಯದಲ್ಲಿ ಬಳಸಿಕೊಂಡಿದ್ದಾರೆ. ಅದರೊಂದಿಗೆ ಧರ್ಮದ ಸಂಗೋಪನೆಗಾಗಿ ಈ ಸಮುದಾಯದವರು ಮನೆಯ ಹಿರಿಯ ಮಗ ಅಥವಾ ಮಗಳನ್ನು ಸನ್ಯಾಸತ್ವವನ್ನು ಸ್ವೀಕರಿಸಿ 'ಲಾಮ'ಗಳಾಗಿ ಇರುವುದನ್ನು ಕಾಣಬಹುದು. ಇದರೊಂದಿಗೆ ತಮ್ಮ ಮಕ್ಕಳಿಗೆ ದೇವಾಲಯಗಳನ್ನು ಮಠಗಳಾಗಿ ರಚಿಸಿಕೊಂಡು ಧರ್ಮದ ಪ್ರಾಚೀನ ಗ್ರಂಥಗಳನ್ನು ಬೋಧಿಸುವ ಮೂಲಕ ಮಕ್ಕಳು ಬೌದ್ಧಧರ್ಮದ ಆಚರಣೆ ಮಾಡುವುದನ್ನು ಕಾಣಬಹುದು. ಇನ್ನು ಧಾರ್ಮಿಕತೆಯನ್ನು ಅವರ ಉಡುಪುಗಳಲ್ಲಿಯೂ ಕಾಣಬಹುದು. ಕಡುಕೆಂಪು ಮಿಶ್ರಿತ ಉಡುಪುಗಳನ್ನು ಧರಿಸುವ ಮೂಲಕ ತಮ್ಮ ಧರ್ಮದ ಆಚರಣೆಯನ್ನು ಮಾಡುತ್ತಾರೆ. ಹೀಗೆ ಕರ್ನಾಟಕದಲ್ಲಿ ಬೈಲುಕುಪ್ಪೆ, ಸೋಮವಾರಪೇಟೆ ಇತರೆಡೆಗಳಲ್ಲಿ ಆಚರಣೆ ಮಾಡುವುದನ್ನು ಕಾಣಬಹುದು. ಹೀಗೆ ಕನ್ನಡಿಗರ ಪರಿಸರದಲ್ಲಿರುವ ಇವರು ಬಹುಭಾಷೆ, ಸಂಸ್ಕೃತಿಗಳ ಪರಿಸರದ ಮಧ್ಯೆ

ಇದ್ದರೂ ತಮ್ಮ ಧಾರ್ಮಿಕ ಆಚರಣೆಯನ್ನು ಬಿಡದೆ ಕನ್ನಡಿಗರ ಪರಿಸರದಲ್ಲಿರುವ ಯಾವುದೇ ಧಾರ್ಮಿಕ ಆಚರಣೆಗಳನ್ನು ಅನುಕರಿಸದೆ ತಮ್ಮದೇ ಆದ ಧಾರ್ಮಿಕ ಪರಿಸರವನ್ನು ಬಳಸುತ್ತಾ ಸಂಗೋಪನೆ ಮಾಡುತ್ತಿದ್ದಾರೆ. ಹೀಗೆ ತಮ್ಮ ಧಾರ್ಮಿಕತೆಯನ್ನು ಸೀಮಿತ ಪ್ರದೇಶಕ್ಕೆ ರೂಪಿಸಿಕೊಂಡು ಬದುಕುತ್ತಾ ಧಾರ್ಮಿಕ ದ್ವೀಪವಾಗಿರುವುನ್ನು ಕಾಣಬಹುದು. ಇದೇ ರೀತಿಯಲ್ಲಿ ಬಂಗಾಳದ ನಿರಾಶ್ರಿತ ಕ್ಯಾಂಪ್‌ಗಳು ಕೂಡ ಧಾರ್ಮಿಕವಾಗಿ ತಮ್ಮ ಮೂಲ ಆಚರಣೆಗಳನ್ನು ಹಾಗೂ ಸಂಸ್ಕೃತಿಯನ್ನು ಉಳಿಸಿಕೊಂಡು ಧಾರ್ಮಿಕ ದ್ವೀಪಗಳಾಗಿ ಉಳಿದುಕೊಂಡಿವೆ. ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನಲ್ಲಿರುವ ಕ್ಯಾಂಪ್‌ಗಳಲ್ಲಿ ಸುಮಾರು ಇಪ್ಪತ್ತೈದು ಸಾವಿರ ಜನರು ೧೯೬೦ರಿಂದ ವಾಸವಾಗಿದ್ದಾರೆ. ಅವರು ಇಂದಿಗೂ ತಮ್ಮದೇ ಆದ ಆಚರಣೆ ಮತ್ತು ಧಾರ್ಮಿಕ ವಿಧಾನಗಳಲ್ಲಿ ಜೀವನ ನಡೆಸುತ್ತಿರುವುದನ್ನು ಕಾಣಬಹುದು. ಈ ಕ್ಯಾಂಪ್‌ಗಳೂ ಕೂಡ ಧಾರ್ಮಿಕ ದ್ವೀಪಗಳಾಗಿರುವುದನ್ನು ಕಾಣಬಹುದು.

ರಾಜಕೀಯ ದ್ವೀಪವಾಗಿಯೂ ಸಹ ಈ ಟಿಬೆಟ್‌ನ ನಿರಾಶ್ರಿತರ ಕ್ಯಾಂಪ್‌ಗಳನ್ನು ಕಾಣಬಹುದು. ಅಂದರೆ ಕರ್ನಾಟಕದಲ್ಲಿರುವ ಇವರು ಇಲ್ಲಿನ ಕಾನೂನಿಗೆ ಅನುಸಾರವಾಗಿಯೇ ಬದುಕಬೇಕು. ಆದರೆ ಇವರಿಗೆ ತಮ್ಮ ಕ್ಯಾಂಪ್‌ನ ಆವರಣದಲ್ಲಿ ತಮ್ಮದೇ ರಾಜಕೀಯ ವ್ಯವಸ್ಥೆಯಲ್ಲಿ ಬದುಕಲು ಅವಕಾಶವನ್ನು ನೀಡಲಾಗಿದೆ. ಅದರಂತೆ ಟಿಬೆಟ್ ಕ್ಯಾಂಪ್‌ನಲ್ಲಿ ಪ್ರತಿ ಕ್ಯಾಂಪ್‌ನಲ್ಲಿ ಒಬ್ಬ ಮುಖಂಡನನ್ನು ಆಯ್ಕೆ ಮಾಡಲಾಗುತ್ತದೆ. ಈ ರೀತಿಯ ಕ್ಯಾಂಪ್‌ಗಳ ಮುಖಂಡರು ಇಡೀ ಕ್ಯಾಂಪ್‌ನ ಮುಖ್ಯಸ್ಥನಿಗೆ ರಾಜಕೀಯವಾಗಿ ಅಧೀನವಾಗಿರುತ್ತಾರೆ. ಇಡೀ ಕ್ಯಾಂಪ್ ತಮ್ಮ ರಾಜಕೀಯ ವ್ಯವಸ್ಥೆಯನ್ನು ಮೂಲ ಟಿಬೆಟ್‌ನಲ್ಲಿ ಇರುವಂತೆಯೇ ರಚಿಸಿಕೊಂಡಿದ್ದು, ತಮ್ಮದೇ ಚುನಾವಣೆಗಳ ಮೂಲಕ ನಾಯಕನನ್ನು ಆಯ್ಕೆ ಮಾಡಿಕೊಂಡು, ಬೇಕಾದ ಸೌಲಭ್ಯಗಳನ್ನು ಪಡೆಯುತ್ತಾರೆ. ಹೀಗೆ ಈ ಕ್ಯಾಂಪ್‌ಗಳ ನಾಯಕನಾಗಿ ಆಯ್ಕೆಯಾಗಲು ಪ್ರಾದೇಶಿಕ ಪರಿಸರದ ಯಾವುದೇ ವ್ಯಕ್ತಿಗೆ ಅವಕಾಶವಿಲ್ಲ. ಈ ಎಲ್ಲಾ ರೀತಿಯ ರಾಜಕೀಯ ಪ್ರವೇಶಕ್ಕೆ ಅರ್ಹತೆ ಪಡೆಯಬೇಕಾದರೆ ಅವನು ಟಿಬೆಟ್‌ನ ನಿರಾಶ್ರಿತ ಕ್ಯಾಂಪಿನ ಸದಸ್ಯನಾಗಿರಬೇಕು. ಅದರೊಂದಿಗೆ ಸ್ಥಳೀಯ ಪರಿಸರದ ಯಾವುದೇ ರಾಜಕೀಯ ವ್ಯಕ್ತಿಯು ಇದಕ್ಕೆ ಸಂಬಂಧಿಸಿರುವುದಿಲ್ಲ. ಕ್ಯಾಂಪ್‌ಗಳ ಮೇಲೆ ಯಾವುದೇ ನಿಯಂತ್ರಣ ಹೊಂದಿರುವುದಿಲ್ಲ. ಹೀಗೆ ಪರಸ್ಪರ ಎರಡು ಪರಿಸರದಲ್ಲಿ ಯಾವುದೇ ರಾಜಕೀಯ ಅಧಿಕಾರ ಪಡೆಯಲು ಅವಕಾಶವಿಲ್ಲ. ಈ ರೀತಿಯಾಗಿ ನಿರಾಶ್ರಿತ ಕ್ಯಾಂಪ್ ತನ್ನದೇ ರಾಜಕೀಯ ಜೀವನವನ್ನು ರೂಪಿಸಿಕೊಂಡಿದೆ. ಇಲ್ಲಿ ಬಾಹ್ಯ ಪರಿಸರದ ಯಾವುದೇ ರಾಜಕೀಯ ಅಧಿಕಾರ ಮತ್ತು ಸಂಬಂಧವನ್ನು ಹೊಂದದೆ ಸ್ವತಂತ್ರವಾಗಿ ರಾಜಕೀಯ ಜೀವನ ಮಾಡುತ್ತಿರುವುದನ್ನು ಕಾಣಬಹುದು. ಈ ಕಾರಣಕ್ಕಾಗಿಯೇ ಇದು ರಾಜಕೀಯ ದ್ವೀಪವಾಗಿದೆ.

ಕರ್ನಾಟಕದಲ್ಲಿ ಭಾಷಾದ್ವೀಪಗಳ ಕಲ್ಪನೆಯಲ್ಲಿ ಹಲವು ಗುಂಪುಗಳನ್ನು ಕಾಣಬಹುದು. ಅವುಗಳಲ್ಲಿ ಲಂಬಾಣಿ ಸಮುದಾಯಗಳು ವಾಸಿಸುವ ಪ್ರದೇಶಗಳು, ಉತ್ತರ ಭಾರತದ ಶೇಟು ಸಮುದಾಯಗಳು ವಾಸಿಸುವ ಪ್ರದೇಶಗಳು ಸೇರಿವೆ. ಅಂದರೆ ಇವು ಕರ್ನಾಟಕದಲ್ಲಿ ಇದ್ದರೂ ತಮ್ಮ ಭಾಷೆ-ಸಂಸ್ಕೃತಿಗಳನ್ನು ಕೆಲವು ಸೀಮಿತ ಆವರಣಗಳಲ್ಲಿ ಬಳಕೆ ಮಾಡಿಕೊಂಡು ಸಂಗೋಪನೆ ಮಾಡಿಕೊಂಡು ಬಂದಿದ್ದಾರೆ. ಈ

ಸಮುದಾಯಗಳ ಕೆಲವರು ಮಾತ್ರ ಕನ್ನಡಿಗರ ಪರಿಸರದ ಭಾಷೆಗಳನ್ನು ಕಲಿತು ತಮ್ಮ ವ್ಯಾಪಾರ ಮತ್ತು ಜೀವನವನ್ನು ಸಾಗಿಸುತ್ತಿದ್ದಾರೆ. ಹಾಗೆಯೇ ತಮ್ಮ ಮಕ್ಕಳಿಗೆ ತಮ್ಮ ಮೂಲಭಾಷೆಯನ್ನು ಕಲಿಸುತ್ತಾರೆ. ಹೀಗೆ ತಾವು ವಾಸಿಸುವ ಪ್ರದೇಶಗಳನ್ನು ಭಾಷಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ದ್ವೀಪಗಳಾಗಿಸಿದ್ದಾರೆ.

ಹೀಗಾಗಿ ಭಾಷಾದ್ವೀಪವನ್ನು ಕೇವಲ ಭಾಷಿಕವಾಗಿ ವಿವರಿಸದೆ ಭಾಷೆ, ಸಮಾಜ–ಸಾಮಾಜಿಕ ಅಂಶಗಳನ್ನು ಆಧರಿಸಿ ವಿವರಿಸಿದಾಗ ಭಾಷಾದ್ವೀಪದ ವ್ಯಾಪ್ತಿ ಮತ್ತು ಸಾಧ್ಯತೆಗಳು ವಿಸ್ತಾರವಾಗಿರುವುದು ಕಂಡುಬರುತ್ತದೆ. ಆದ್ದರಿಂದ ಭಾಷಾದ್ವೀಪದ ವ್ಯಾಖ್ಯಾನವನ್ನು ನಿರ್ದಿಷ್ಟ ವಾಕ್ಯಗಳಲ್ಲಿ ಹೇಳುವುದು ಕಷ್ಟಸಾಧ್ಯವಾಗಿದೆ.

ಈ ಭಾಷಾದ್ವೀಪಗಳ ಸ್ವರೂಪವನ್ನು ಗಮನಿಸಿದಾಗ ಭಾಷಿಕವಾಗಿ ಮತ್ತು ಸಾಮಾಜಿಕವಾಗಿ ಹಲವು ಆಯಾಮಗಳು ಕಂಡುಬರುತ್ತವೆ. ಅಂದರೆ ಈವರೆಗೂ ಭಾಷಾದ್ವೀಪಗಳಲ್ಲಿ ಏಕಭಾಷಿಕರು, ದ್ವಿಭಾಷಿಕರು, ಬಹುಭಾಷಿಕರು ಇರುತ್ತಾರೆ ಎಂದು ಗುರುತಿಸಲಾಗಿದೆ. ಅಂದರೆ ಏಕಭಾಷಿಕರು ಏಕೆ ಇರುತ್ತಾರೆ, ದ್ವಿಭಾಷಿಕರಾಗಿ ಏಕೆ ಇರುತ್ತಾರೆ. ಮತ್ತು ಬಹುಭಾಷಿಕರಾಗಿ ಏಕೆ ಇರುತ್ತಾರೆ? ಅಲ್ಲದೇ ಈ ಭಾಷಾದ್ವೀಪಗಳಲ್ಲಿ ಇರುವ ಜನರು ಬಾಹ್ಯ ಪರಿಸರದ ಭಾಷೆಗಳನ್ನು ಏಕೆ ಕಲಿಯುವುದಿಲ್ಲ? ಬಾಹ್ಯ ಪರಿಸರದ ಜನರು ಏಕೆ ಭಾಷಾದ್ವೀಪದ ಭಾಷೆ ಸಂಸ್ಕೃತಿಯನ್ನು ರೂಢಿಸಿಕೊಳ್ಳುವುದಿಲ್ಲ ಎಂಬ ಹಲವು ಪ್ರಶ್ನೆಗಳು ಎದುರಾಗುತ್ತವೆ.

ಭಾಷಾದ್ವೀಪಗಳ ಸ್ವರೂಪವನ್ನು ಮುಖ್ಯವಾಗಿ ನಾವು ಭಾಷಾಬಳಕೆ ಮತ್ತು ಸಾಮಾಜಿಕ ಆಯಾಮದಿಂದ ಗಮನಿಸಿದಾಗ ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಬಹುದು. ಅಂದರೆ ಯಾರು ಯಾವ ಭಾಷೆಗಳನ್ನು ಬಳಸುತ್ತಾರೆ? ಯಾವ ಸಾಮಾಜಿಕ ಸಂದರ್ಭ ಮತ್ತು ಕಾರಣದಿಂದಾಗಿ ಬೇರೆ ಭಾಷೆಗಳನ್ನು ಕಲಿತು ಬಳಕೆ ಮಾಡುತ್ತಾರೆ ಎಂಬ ಅಂಶಗಳನ್ನು ವಿವರಿಸಿಕೊಳ್ಳಲು ಸಾಧ್ಯವಿದೆ. ಈ ಮಾದರಿಗಳಿಂದ ಭಾಷಾದ್ವೀಪಗಳಲ್ಲಿ ಭಾಷಾಬಳಕೆಯ ಮತ್ತು ಭಾಷಾಬಳಕೆಯ ಹಿನ್ನೆಲೆಯಲ್ಲಿ ಸಾಮಾಜಿಕತೆ ಹೇಗೆ ಕೆಲಸ ಮಾಡುತ್ತದೆ ಎನ್ನುವುದನ್ನು ಗಮನಿಸಬಹುದಾಗಿದೆ.

ಭಾಷಾದ್ವೀಪಗಳಲ್ಲಿ ಭಾಷಾಬಳಕೆಯ ಸಾಮಾಜಿಕ ಆಯಾಮಕ್ಕೆ ಉದಾಹರಣೆಯ ಮೂಲಕ ಗಮನಿಸುವುದಾದರೆ, ಮುಖ್ಯವಾಗಿ ಭಾಷಾದ್ವೀಪಗಳು ಮತ್ತು ಸ್ಥಳೀಯ ಭಾಷಿಕರು ಹೇಗೆ ಪರಸ್ಪರರ ಭಾಷೆಯನ್ನು ಬಳಕೆ ಮಾಡುತ್ತಾರೆ ಹಾಗೂ ಯಾವ ಭಾಷೆಗಳನ್ನು ಯಾರು ಕಲಿಯುತ್ತಾರೆ? ಯಾರು ಯಾವ ಭಾಷೆಗಳನ್ನು ಕಲಿಯುವುದಿಲ್ಲ? ಕೆಲವು ಸಂದರ್ಭದಲ್ಲಿ ಪರಸ್ಪರರರು ಭಾಷೆಯನ್ನು ಕಲಿತರೆ ಅದರ ಸಾಮಾಜಿಕ ಉಪಯೋಗಗಳು ಯಾವ ಭಾಷಿಕರಿಗೆ ಆಗುತ್ತವೆ? ಭಾಷೆ ಕಲಿಯಲು ಇರುವ ಸಾಮಾಜಿಕ ಒತ್ತಡಗಳೇನು? ಭಾಷೆಯನ್ನು ಕಲಿಯದೇ ಇರುವುದಕ್ಕೆ ಕಾರಣಗಳೇನು ಎನ್ನುವುದನ್ನು ಇಲ್ಲಿ ಗಮನಿಸಬಹುದು.

ಉದಾಹರಣೆ–೧. ನಮ್ಮ ಪರಿಸರದಲ್ಲಿ ಹಿಂದಿ ಅಥವಾ ಇಂಗ್ಲಿಷ್ ಭಾಷಿಕರು ಸಮುದಾಯಗಳಾಗಿ ವಾಸವಾಗಿದ್ದರೆ, ಸಂಪರ್ಕದಲ್ಲಿದ್ದರೆ ನಾವು ಆ ಭಾಷಿಕರನ್ನು ಅವರದ್ದೇ ಭಾಷೆಗಳಲ್ಲಿ ಸಂಪರ್ಕಿಸಲು ಮುಂದಾಗುತ್ತೇವೆ. ಅಂದರೆ ಆ ಭಾಷೆಗಳನ್ನು ಕಲಿತು ಸಂಪರ್ಕ ಸಾಧಿಸುತ್ತೇವೆ.

ಉದಾಹರಣೆ-೨. ಮುಂಡಗೋಡು ಪರಿಸರದಲ್ಲಿ ಟಿಬೆಟ್ ಭಾಷಿಕರು ಕ್ಯಾಂಪ್‌ಗಳಲ್ಲಿ ವಾಸವಾಗಿದ್ದಾರೆ. ಆದರೆ ಮುಂಡಗೋಡಿನ ಜನರು ಟಿಬೆಟ್ ಭಾಷೆಯನ್ನು ಕಲಿತಿಲ್ಲ. ಸ್ಥಳೀಯರು ಕೆಲವು ಸಾಮಾಜಿಕ ಸಂದರ್ಭದಲ್ಲಿ ಮಾತ್ರ ಟಿಬೆಟ್ ಭಾಷೆಯ ಕೆಲವು ಪದಗಳು ಅಥವಾ ವಾಕ್ಯಗಳನ್ನು ಸೀಮಿತ ಆವರಣಗಳಲ್ಲಿ ಬಳಕೆ ಮಾಡುತ್ತಾರೆ. ಅಂದರೆ ವ್ಯಾಪಾರ ವಲಯದಲ್ಲಿ, ಸಾರ್ವಜನಿಕ ಸಾರಿಗೆ, ಹೋಟೆಲ್, ಮಾರುಕಟ್ಟೆ ಸಂದರ್ಭದಲ್ಲಿ ಮಾತ್ರ.

ಈ ಮೇಲಿನ ಎರಡು ಉದಾಹರಣೆಗಳನ್ನು ಗಮನಿಸಿದಾಗ ಉದಾಹರಣೆಗಳೆರಡರಲ್ಲೂ ಬಾಹ್ಯಪರಿಸರದಲ್ಲಿ ಕನ್ನಡಿಗರಿದ್ದು, ವಲಸಿಗ ಪರಿಸರದಲ್ಲಿ ಇಂಗ್ಲಿಷ್, ಹಿಂದಿ, ಟಿಬೆಟ್ ಭಾಷಿಕರಿದ್ದಾರೆ. ಉದಾಹರಣೆಗೆ ೧ರಲ್ಲಿರುವವರು ಇಂಗ್ಲಿಷ್ ಮತ್ತು ಹಿಂದಿಯನ್ನು ಕಲಿತು ಬಳಸುತ್ತಾರೆ. ಆದರೆ ಉದಾಹರಣೆಗೆ ೨ರಲ್ಲಿರುವ ಕನ್ನಡಿಗರು ಟಿಬೆಟ್ ಭಾಷೆಯನ್ನು ಕಲಿಯುವುದಿಲ್ಲ. ಇದಕ್ಕೆ ಕಾರಣಗಳನ್ನು ತಿಳಿಯುವುದಾದರೆ, ಇಂಗ್ಲಿಷ್ ಮತ್ತು ಹಿಂದಿಯು ಈ ಪ್ರದೇಶಗಳಲ್ಲಿ ಒಂದು ಅಂತಾರಾಷ್ಟ್ರೀಯ ಭಾಷೆಯಾಗಿಯೂ ಮತ್ತೊಂದು ರಾಷ್ಟ್ರಭಾಷೆಯಾಗಿಯೂ ಬಳಕೆಯಲ್ಲಿವೆ. ಅಲ್ಲದೇ ಈ ಭಾಷೆಯನ್ನು ಕಲಿತರೆ ಸ್ಥಳೀಯ ಪರಿಸರದಲ್ಲಿ ಹಲವು ಅನುಕೂಲಗಳನ್ನು ಪಡೆದುಕೊಳ್ಳಬಹುದು. ಈ ಭಾಷೆಗಳಲ್ಲಿ ಬರುವ ಪತ್ರಿಕೆ, ಟಿ.ವಿ., ಇತರೆ ಸಾಮಾಜಿಕ ಮಾಧ್ಯಮಗಳಲ್ಲಿ ತೊಡಗಲು ಅನುಕೂಲವಾಗುತ್ತದೆ. ಇದರೊಂದಿಗೆ ವಿದ್ಯಾಭ್ಯಾಸದಲ್ಲಿಯೋ, ವ್ಯಾಪಾರದಲ್ಲಿಯೋ ಅಥವಾ ಹೊರ ರಾಜ್ಯ/ದೇಶಗಳಲ್ಲಿ ತಮ್ಮ ಸಂಪರ್ಕಕ್ಕೆ ಅನುಕೂಲವಾಗುತ್ತದೆ ಎಂಬುದು ಇದಕ್ಕೆ ಕಾರಣವಾಗಿದೆ. ಆದರೆ ಉದಾಹರಣೆ ೨ನ್ನು ಗಮನಿಸಿದರೆ ಟಿಬೆಟ್‌ನ ಭಾಷೆಯನ್ನು ಕನ್ನಡಿಗ ಪರಿಸರದವರು ಕಲಿತರೆ ಅವರಿಗೆ ಯಾವ ರೀತಿಯ ಅನುಕೂಲವಾಗುತ್ತದೆ? ವಿದ್ಯಾಭ್ಯಾಸಕ್ಕೆ, ದಿನನಿತ್ಯದ ಭಾಷಾಬಳಕೆಗೆ ಅಂದರೆ ಪತ್ರಿಕೆಗಳು, ಸಮೂಹ ಮಾಧ್ಯಮಗಳಲ್ಲಿ ಬಳಕೆ ಮಾಡಲು ಹೀಗೆ ಎಲ್ಲಿಯೂ ಈ ಭಾಷೆಯನ್ನು ಬಳಕೆ ಮಾಡಲು ಸಾಧ್ಯವಾಗುವುದಿಲ್ಲ. ಆದ ಕಾರಣ ಭಾಷಾದ್ವೀಪಗಳಲ್ಲಿರುವ ಭಾಷೆಗಳನ್ನು ಸ್ಥಳೀಯ ಪರಿಸರದ ಜನರು ಕಲಿಯಲು ಮತ್ತು ಬಳಕೆ ಮಾಡಲು ಹೆಚ್ಚು ಆಸಕ್ತರಾಗಿರುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಇದಕ್ಕೆ ವಿರೋಧ ಎನ್ನುವಂತೆ ಭಾಷಾದ್ವೀಪದ ಭಾಷೆಗಳನ್ನು ಕಲಿತು ಬಳಸುತ್ತಿರುತ್ತಾರೆ. ಆ ಸಾಮಾಜಿಕ ಸಂದರ್ಭಗಳು ಕೇವಲ ವ್ಯಾವಹಾರಿಕ ಮತ್ತು ಸಂಪರ್ಕ ಸಾಧಿಸಲು ಮಾತ್ರವಾಗಿರುತ್ತವೆ. ಅದೂ ಅಲ್ಲದೆ ಈ ಭಾಷೆಯು ಕೇವಲ ಸಂಕೇತ ರೂಪಗಳು ಅಥವಾ ನಿರ್ದಿಷ್ಟಪಡಿಸಿದ ಕೆಲವೇ ಭಾಷಿಕ ರೂಪಗಳಾಗಿರುತ್ತವೆ. ಹೀಗೆ ಭಾಷಿಕರು ಬೇರೆ ಭಾಷೆಯನ್ನು ಕಲಿಯುವಲ್ಲಿ ಸಾಮಾಜಿಕ ಸಂದರ್ಭಗಳು ಕಾರ್ಯ ನಿರ್ವಹಿಸುತ್ತವೆ. ತಮ್ಮ ಮೂಲಭಾಷೆಯನ್ನು ಬಿಟ್ಟು ಬೇರೆ ಭಾಷೆಯನ್ನು ಕಲಿಯುವಲ್ಲಿ ಸಾಮಾಜಿಕ, ಆರ್ಥಿಕ ಆಸಕ್ತಿಗಳು ಕೆಲಸ ಮಾಡುತ್ತವೆ.

ಮೇಲಿನ ಉದಾಹರಣೆ ಮತ್ತು ವಿವರಣೆಯು ಕನ್ನಡಿಗರ ಪರಿಸರವನ್ನು ದೃಷ್ಟಿಕೋನವನ್ನಿರಿಸಿಕೊಂಡು ವಿವರಿಸಲಾಗಿದೆ. ಅದೇ ರೀತಿಯಲ್ಲಿ ಭಾಷಾದ್ವೀಪಗಳಲ್ಲಿರುವ ಸಮುದಾಯಗಳ ದೃಷ್ಟಿಕೋನದಲ್ಲಿ ನೋಡುವುದಾದರೆ ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರು ದ್ವೀಪಗಳಲ್ಲಿ ವಾಸ ಮಾಡುತ್ತಿರುವುದು ಕಾಣಬಹುದು. ಹಾಗೆಯೇ ಟಿಬೆಟ್ ನಿರಾಶ್ರಿತ ಕ್ಯಾಂಪ್‌ನ ಟಿಬೆಟ್ ಸಮುದಾಯದವರು, ಸಿಂಧನೂರಿನ

ಬಂಗಾಳಿ ಕ್ಯಾಂಪ್‌ನಲ್ಲಿರುವ ಸಮುದಾಯದವರು ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಕಲಿತಿದ್ದಾರೆಯೇ ಎಂಬುದನ್ನು ಗಮನಿಸಿದರೆ ಕಂಡುಬರುವ ಉತ್ತರ ಮೂರು ಸ್ಥಳಗಳಲ್ಲಿ ಭಿನ್ನ ಭಿನ್ನವಾಗಿದೆ. ಅಂದರೆ ಸಾಮಾಜಿಕ, ಆರ್ಥಿಕ ಒತ್ತಡಗಳಿಂದಾಗಿ ಭಿನ್ನ ಭಿನ್ನ ಉತ್ತರಗಳು ದೊರೆಯುವಂತೆ ಮಾಡಿವೆ. ಅಂದರೆ ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರು ಕನ್ನಡ ಭಾಷೆಯನ್ನು ಸಾಮಾಜಿಕ ಮತ್ತು ಆರ್ಥಿಕ ಒತ್ತಡಗಳಿಗೆ ತಕ್ಕಂತೆ ಬಳಕೆ ಮಾಡುತ್ತಿರುವುದನ್ನು ಕಾಣಬಹುದು. ಅಂದರೆ ಇಲ್ಲಿ ಸ್ಥಳೀಯ ಪರಿಸರದ ಭಾಷೆಯಾದ ಕನ್ನಡ ಕಲಿಯಲೇಬೇಕು ಎಂಬ ಒತ್ತಡವಿಲ್ಲದಿದ್ದರೂ ತಮಿಳು ಭಾಷಿಕರು ತಮ್ಮ ನಿತ್ಯದ ಕಾರ್ಯ ಸಾಧಿಸಲು ಮತ್ತು ತಮ್ಮ ಜೀವನ ನಿರ್ವಹಣೆಗಾಗಿ ಕನ್ನಡ ಭಾಷಿಕ ಪರಿಸರದೊಂದಿಗೆ ವ್ಯವಹರಿಸುವ ಸಂದರ್ಭಗಳು ಒದಗಿಬಂದವು. ಅದರಿಂದ ತಮಿಳು ಭಾಷೆಯ ಹಲವರು ತಮ್ಮ ಅವಶ್ಯಕತೆಗೆ ಅನುಸಾರವಾಗಿ ಕನ್ನಡವನ್ನು ಕಲಿತು ಮಾತನಾಡಲು ಪ್ರಾರಂಭಿಸಿದರು. ಆದರೆ ತಮಿಳು ಭಾಷಿಕ ಸಮುದಾಯದಲ್ಲಿ ವಾಸಿಸುವ ಉಳಿದ ಸ್ತ್ರೀಯರು, ವಯೋವೃದ್ಧರು, ಮಕ್ಕಳು ಕನ್ನಡ ಭಾಷಿಕ ಪರಿಸರದ ಸಂಪರ್ಕಕ್ಕೆ ಸಿಗದವರು ಕನ್ನಡವನ್ನು ಕಲಿಯದೇ ಹಾಗೆಯೇ ಉಳಿದಿದ್ದಾರೆ. ಇತ್ತೀಚೆಗೆ ಅಂದರೆ ಮೂರನೇ ತಲೆಮಾರಿನ ಮಕ್ಕಳು ಕನ್ನಡ ಭಾಷೆಯನ್ನು ಬಳಕೆ ಮಾಡುತ್ತಿರುವುದು ಕಾಣಬಹುದು. ಇದಕ್ಕೆ ಕಾರಣವೆಂದರೆ ಸಾಮಾಜಿಕವಾಗಿ ಒತ್ತಡದ ರೂಪದಲ್ಲಿ ಶಿಕ್ಷಣ, ಸ್ಥಳೀಯ ಪರಿಸರದಲ್ಲಿ ಉದ್ಯೋಗ, ಸಾರ್ವಜನಿಕ ಸಂಪರ್ಕದಂತಹವು ಕನ್ನಡ ಭಾಷೆಯನ್ನು ಕಲಿಯುವಂತೆ ಮಾಡಿವೆ. ಆದರೆ ಇವರು ತಮ್ಮ ಮನೆ ಮತ್ತು ಖಾಸಗಿ ಆವರಣಗಳಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡುತ್ತಿದ್ದಾರೆ. ಹೀಗೆ ಸಿಂಧನೂರಿನ ಹತ್ತಿರ ಇರುವ ಬಂಗಾಳಿ ನಿರಾಶ್ರಿತ ಕ್ಯಾಂಪ್‌ನ ಹಿರಿಯರು ಅಂದರೆ ವಲಸೆ ಬಂದ ಮೊದಲ ತಲೆಮಾರಿನ ಜನರು ಈವರೆಗೂ ಕನ್ನಡ ಭಾಷೆಯನ್ನು ಕಲಿಯದೇ ತಮ್ಮದೇ ಭಾಷೆಯಲ್ಲಿ ಬದುಕುತ್ತಿದ್ದಾರೆ. ಇವರು ಪ್ರಾದೇಶಿಕ ಭಾಷೆಯನ್ನು ಕಲಿಯದೇ ಇರುವುದಕ್ಕೆ ಬೇರೆ ಬೇರೆ ಕಾರಣಗಳಿವೆ. ಅಂದರೆ ಅಂದಿನ ಸರ್ಕಾರವು ಇವರು ಜೀವನ ನಿರ್ವಹಣೆಗಾಗಿ ತುಂಡುಭೂಮಿಯನ್ನು ನೀಡಿ ಕೃಷಿ ಮಾಡಿ ಜೀವನ ಸಾಗಿಸಲು ಅನುವು ಮಾಡಿಕೊಟ್ಟಿತು. ಇವರು ಸ್ಥಳೀಯ ಪರಿಸರದ ಭಾಷೆಯಾದ ಕನ್ನಡವನ್ನು, ಕನ್ನಡ ಪರಿಸರವನ್ನು ಸಂಪರ್ಕಿಸದೇ ಹೋದರು. ಆದ್ದರಿಂದ ಮೊದಲನೇ ತಲೆಮಾರಿನವರು ಕನ್ನಡ ಕಲಿಯುವಲ್ಲಿ ಯಾವುದೇ ಒತ್ತಡಗಳು ಇರಲಿಲ್ಲ. ಆದರೆ ಎರಡನೇ ತಲೆಮಾರಿನಲ್ಲಿ ಈ ರೀತಿಯ ಸಂದರ್ಭಗಳು ಇರಲಿಲ್ಲ. ಏಕೆಂದರೆ ಜನಸಂಖ್ಯೆ ಮತ್ತು ಜೀವನಾವಕಾಶಗಳು ವಿಸ್ತರಿಸಿದಂತೆ ಸ್ಥಳೀಯ ಪರಿಸರದ ಸಂಪರ್ಕವನ್ನು ಹೊಂದುವುದು ಅನಿವಾರ್ಯವಾಗಿತ್ತು. ಅಂದರೆ ಕೃಷಿ ಚಟುವಟಿಕೆ ತ್ಯಜಿಸಿ ಇತರೆ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಪ್ರಾರಂಭಿಸಿದರು. ಇದರಿಂದ ಕನ್ನಡ ಭಾಷೆಯನ್ನು ಕಲಿಯುವ ಒತ್ತಡ ಸೃಷ್ಟಿಯಾಯಿತು. ಇದರೊಂದಿಗೆ ಎರಡನೇ ತಲೆಮಾರಿನವರು ಶಿಕ್ಷಣ ಪಡೆಯಲು ಪ್ರಾರಂಭಿಸಿದರು. ಅವರಿಗೆ ತಮ್ಮ ಭಾಷೆಯಲ್ಲಿ ಶಿಕ್ಷಣ ಪಡೆಯುವ ಅವಕಾಶ ಇಲ್ಲದ್ದರಿಂದಾಗಿ ಕನ್ನಡವನ್ನು ಕಲಿಯಬೇಕಾಯಿತು. ಇನ್ನು ಸ್ಥಳೀಯ ಶಿಕ್ಷಣ ಪಡೆದವರು ಉದ್ಯೋಗ ಅವಕಾಶಗಳಿಗಾಗಿ ಕನ್ನಡವನ್ನು ಕಲಿತಿದ್ದಾರೆ. ಇದರಿಂದ ಬಂಗಾಳಿ ಕ್ಯಾಂಪ್‌ನ ಎರಡು ಮತ್ತು ಮೂರನೇ ತಲೆಮಾರಿನ ಜನರು ಕನ್ನಡ ಪರಿಸರದ ಸಂಪರ್ಕವನ್ನು ಪಡೆಯುವಂತಾಯಿತು.

ಬಂಗಾಳಿ ಕ್ಯಾಂಪ್‌ನ ಭಾಷಾದ್ವೀಪದಲ್ಲಿರುವ ಜನರು ಕನ್ನಡ ಭಾಷೆಯ/ಪರಿಸರದ ಸಂಪರ್ಕವನ್ನು ಪಡೆಯುವಂತಾಯಿತು. ಇಲ್ಲಿ ಸಾಮಾಜಿಕ ಅವಶ್ಯಕತೆಯಾಗಿ ಸ್ಥಳೀಯ ಪರಿಸರದ ಜನರನ್ನು ಸಂಪರ್ಕ ಮಾಡುವುದು ಮತ್ತು ಶಿಕ್ಷಣವು ಸಾಮಾಜಿಕ ಒತ್ತಡವಾಗಿ ಕಾರ್ಯ ನಿರ್ವಹಿಸಿದರೆ, ಉದ್ಯೋಗವು ಆರ್ಥಿಕ ಒತ್ತಡವಾಗಿ ಕಾರ್ಯ ನಿರ್ವಹಿಸಿದೆ. ಹೀಗೆ ಭಾಷಾದ್ವೀಪದಲ್ಲಿರುವ ಜನರು ಸ್ಥಳೀಯ ಪರಿಸರದ ಭಾಷೆಯನ್ನು ಕಲಿಯುವಂತೆ ಸಾಮಾಜಿಕ ಮತ್ತು ಆರ್ಥಿಕ ಒತ್ತಡಗಳು ಕಾರ್ಯ ನಿರ್ವಹಿಸುತ್ತವೆ. ಮುಂಡಗೋಡು ಮತ್ತು ಬೈಲಕುಪ್ಪೆ ಟಿಬೆಟ್ ಕ್ಯಾಂಪ್‌ಗಳು ಈ ಎರಡು ಭಾಷಾದ್ವೀಪಗಳಿಗಿಂತಲೂ ಭಿನ್ನವಾದವು. ಅಂದರೆ ಇವರು ವಲಸೆಯ ಮೂಲಕ ಭಾರತದ ಇತರೆ ಪ್ರದೇಶಗಳಲ್ಲಿ ನೆಲೆಸಿದವರು. ಇವರಿಗೆ ಸರ್ಕಾರದ ವತಿಯಿಂದ ಭೂಮಿಯನ್ನು ನೀಡಲಾಯಿತು. ಆದರೆ ಇವರು ತಾವುಗಳು ವಾಸಿಸುವ ಪ್ರದೇಶದಲ್ಲಿ ತಮ್ಮ ಮೂಲನೆಲೆಯನ್ನು ಪ್ರತಿ ಹಂತದಲ್ಲೂ ರೂಪಿಸಿಕೊಂಡರು. ಅದರಲ್ಲಿ ಧರ್ಮ, ರಾಜಕೀಯ, ಆರ್ಥಿಕತೆ, ಸಂಸ್ಕೃತಿ, ವಾಣಿಜ್ಯ, ಸಂಪ್ರದಾಯಗಳನ್ನು ಸೃಷ್ಟಿಸಿಕೊಂಡರು. ಆ ಮೂಲಕ ಸ್ಥಳೀಯ ಪರಿಸರವನ್ನು ಅಲಂಬಿಸದ ರೀತಿಯಲ್ಲಿ ತಮ್ಮ ಜೀವನ ಮತ್ತು ಸಮುದಾಯವನ್ನು ಕಟ್ಟಿಕೊಂಡರು. ಇವರಿಗೆ ಸ್ಥಳೀಯ ಭಾಷೆಯನ್ನು ಕಲಿಯಬೇಕು ಎಂಬ ಈ ಹಿಂದೆ ನೋಡಿದ ಯಾವುದೇ ಒತ್ತಡಗಳು ಇಲ್ಲದೇ ಇರುವುದರಿಂದ ಇವರ ಕನ್ನಡವನ್ನಾಗಲಿ ಸ್ಥಳೀಯ ಭಾಷೆಯನ್ನಾಗಲಿ ಸಂಸ್ಕೃತಿಯನ್ನಾಗಲಿ ಕಲಿಯದೇ ಬದುಕು ಕಟ್ಟಿಕೊಂಡಿದ್ದಾರೆ. ಇವರಿಗೆ ಸ್ಥಳೀಯ ಭಾಷೆಯನ್ನು ಕಲಿಯುವ ಯಾವುದೇ ಅವಕಾಶವಾಗಲಿ ಮತ್ತು ಸಾಮಾಜಿಕ ಒತ್ತಡವಾಗಲಿ ಇಲ್ಲ. ಈ ಕ್ಯಾಂಪ್‌ಗಳಲ್ಲಿರುವ ಕೆಲವೇ ಕೆಲವರು ಅಲ್ಪ ಸಲ್ಪ ಕನ್ನಡವನ್ನು ಮಾತನಾಡುತ್ತಾರೆ. ಸಾಮಾಜಿಕ ಸಂದರ್ಭದಲ್ಲಿ ಸ್ಥಳೀಯ ಪರಿಸರದಿಂದ ಅನುಕೂಲಗಳನ್ನು ಪಡೆಯಬೇಕೆಂದಾಗ ಕೆಲವರೇ ಮಾತ್ರ ಕನ್ನಡ ಮಾತನಾಡಿ ತಮಗೆ ಬೇಕಾದ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಾರೆ.

ಮೇಲೆ ವಿವರಿಸಿದಂತೆ ಭಾಷಾದ್ವೀಪದಲ್ಲಿರುವ ಜನರು ಸ್ಥಳೀಯ ಭಾಷೆಯನ್ನು ಕಲಿಯುವ ಅಥವಾ ಕಲಿಯದೇ ಇರುವ ರೀತಿಯಲ್ಲಿ ಕೆಲವು ಸಾಮಾಜಿಕ ಮತ್ತು ಆರ್ಥಿಕ ಒತ್ತಡಗಳು ಕಾರ್ಯ ನಿರ್ವಹಿಸುವುದನ್ನು ಕಾಣಬಹುದು. ಒಂದು ವೇಳೆ ಸ್ಥಳೀಯ ಭಾಷೆಯನ್ನು ಕಲಿಯದೇ ಇದ್ದರೆ ಅವರ ತಮ್ಮ ಪ್ರದೇಶಗಳಲ್ಲಿ ಪೂರ್ಣ ಪ್ರಮಾಣದಲ್ಲಿ ತಮ್ಮ ಮೂಲಪ್ರದೇಶವನ್ನು ರೂಪಿಸಿಕೊಂಡಿರುತ್ತಾರೆ. ಹಿರಿಯೂರು ಮತ್ತು ಹೊಸಪೇಟೆಯ ತಮಿಳು ಭಾಷಿಕರ ಪರಿಸರದಲ್ಲಿ ಮತ್ತು ಬಂಗಾಳಿ ಕ್ಯಾಂಪ್‌ನಲ್ಲಿರುವ ಬಹುತೇಕ ಸ್ತ್ರೀಯರು ಮತ್ತು ವಯೋವೃದ್ಧರು ತಮ್ಮ ಮೂಲಭಾಷೆಯನ್ನು ಬಳಕೆ ಮಾಡುವುದನ್ನು ಹೆಚ್ಚಾಗಿ ಕಾಣಬಹುದು. ಇದಕ್ಕೆ ಕಾರಣ ಇವರ ಸಾಮಾಜಿಕವಾಗಿ ಸ್ಥಳೀಯ ಪರಿಸರದೊಂದಿಗೆ ಯಾವುದೇ ರೀತಿಯ ವ್ಯವಹಾರ ಸಂಪರ್ಕಗಳನ್ನು ಹೊಂದದೆ ಇರುವ ಕಾರಣ ಅವರು ಬೇರೆ ಭಾಷೆ ಸಂಸ್ಕೃತಿಯನ್ನು ಕಲಿಯದೇ ಉಳಿದುಕೊಂಡಿರುತ್ತಾರೆ. ಕೆಲವೇ ಕೆಲವರು ಸ್ಥಳೀಯ ಭಾಷಿಕರಿಂದ ಅನೇಕ ಸಂದರ್ಭಗಳಲ್ಲಿ ವ್ಯಾವಹಾರಿಕ ಮತ್ತು ಸಾಮಾಜಿಕ ಸಂಬಂಧಗಳನ್ನು ಹೊಂದಿದ ಕಾರಣಕ್ಕಾಗಿ ಸ್ಥಳೀಯ ಭಾಷೆ ಸಂಸ್ಕೃತಿಯನ್ನು ಕಲಿತಿರುತ್ತಾರೆ.

ಹೀಗೆ ಭಾಷಾದ್ವೀಪದಲ್ಲಿರುವ ಜನರು ತಮ್ಮ ಭಾಷೆಯನ್ನು ಉಳಿಸಿಕೊಂಡಿರುವುದು ಮತ್ತು ಬೇರೆ ಭಾಷೆಗಳನ್ನು ರೂಢಿಸಿಕೊಳ್ಳಲು ಇರುವ ಹಲವು ಸಂದರ್ಭಗಳು ಮತ್ತು ಸಾಮಾಜಿಕ ಒತ್ತಡಗಳನ್ನು ಕಾಣಬಹುದು.

## ೩.೨. ಭಾಷಾದ್ವೀಪದ ಸ್ವರೂಪ

ಈ ಹಿಂದೆ ಭಾಷಾದ್ವೀಪದ ಕಲ್ಪನೆ ಮತ್ತು ವ್ಯಾಖ್ಯಾನಗಳನ್ನು ಚರ್ಚಿಸಿದೆ. ಆದರೆ ಇಲ್ಲಿ ಭಾಷಾದ್ವೀಪಗಳ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ. ಅಂದರೆ ಭಾಷಾದ್ವೀಪಗಳು ಹೇಗೆ ರೂಪುಗೊಳ್ಳುತ್ತವೆ? ಅವುಗಳ ರಚನೆಯ ಹಿನ್ನೆಲೆಯಲ್ಲಿ ಜನರ ಪಾತ್ರವೇನು? ಭಾಷಾದ್ವೀಪಗಳು ರೂಪುಗೊಳ್ಳುವುದು ಯಾವ ಕಾರಣಗಳಿಗೆ? ಭಾಷಾದ್ವೀಪಗಳು ರೂಪುಗೊಂಡ ನಂತರದಲ್ಲಿ ಅವುಗಳ ಭಾಷಿಕ ಸ್ಥಿತಿಯನ್ನು ಇಲ್ಲಿ ಸಂಕ್ಷಿಪ್ತವಾಗಿ ತಿಳಿಯುವುದು ಮುಖ್ಯವಾಗಿದೆ.

ಭಾಷಾದ್ವೀಪಗಳ ರಚನೆಯನ್ನು ಗಮನಿಸಿದಾಗ ಅವುಗಳ ರಚನೆಯ ಹಿನ್ನೆಲೆಯಲ್ಲಿ ಕೆಲಸ ಮಾಡುವುದು 'ವಲಸೆ' ಪ್ರಕ್ರಿಯೆ. ಮಾನವರು ತಮ್ಮ ಚಲನಾತ್ಮಕ ಬದುಕಿನಲ್ಲಿ ಅನೇಕ ಕಾರಣಗಳಿಗಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ತೆರಳುತ್ತಾರೆ. ಹೀಗೆ ಸ್ಥಳಾಂತರಗೊಳ್ಳುವಾಗ ತಮ್ಮ ಭಾಷೆ, ಸಂಸ್ಕೃತಿ, ಸಮಾಜವನ್ನು ತಮ್ಮೊಂದಿಗೆ ಹೊತ್ತು ಸಾಗುತ್ತಾರೆ. ಕೆಲವು ಸಂದರ್ಭಗಳಲ್ಲಿ ಸ್ಥಳಾಂತರಗೊಂಡ ಪ್ರದೇಶವು ಅಧಿಕಾರಯುತವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಬಲಾಢ್ಯವಾಗಿದ್ದರೆ ತಮ್ಮ ಭಾಷೆ, ಸಂಸ್ಕೃತಿ, ಸಮಾಜವನ್ನು ಅನಿವಾರ್ಯವಾಗಿ ಬಿಟ್ಟು ಆ ಸ್ಥಳಕ್ಕೆ ಹೊಂದಿಕೊಳ್ಳಬೇಕಾಗುತ್ತದೆ. ಇನ್ನು ಕೆಲವು ಸಂದರ್ಭಗಳಲ್ಲಿ ಯಾವುದೇ ಒತ್ತಡಗಳು ಇಲ್ಲವೆಂದರೆ ತಮ್ಮ ಭಾಷೆ, ಸಂಸ್ಕೃತಿ, ಸಮಾಜವನ್ನು ಹಾಗೆಯೇ ಉಳಿಸಿಕೊಳ್ಳುತ್ತಾರೆ. ಹೀಗೆ ತಮ್ಮ ಭಾಷೆ, ಸಂಸ್ಕೃತಿ, ಸಮಾಜವನ್ನು ಉಳಿಸಿಕೊಂಡು ಬದುಕುವವರು ನಿರ್ದಿಷ್ಟ ಪ್ರದೇಶದಲ್ಲಿ ಗುಂಪುಗಳಾಗಿ ನೆಲೆಸುತ್ತಾರೆ. ಇವರಿಗೆ ಬಾಹ್ಯ ಪರಿಸರದ ಅಧಿಕಾರ, ಸಾಮಾಜಿಕ, ಭಾಷೆಯ ಪ್ರಭಾವಗಳು ಮುಖ್ಯವಾಗದೇ ತಮ್ಮ ಭಾಷೆ, ಸಂಸ್ಕೃತಿ ಮತ್ತು ಸಮಾಜದ ಮೂಲಾಂಶಗಳನ್ನು ಉಳಿಸಿಕೊಂಡಿರುತ್ತಾರೆ. ಈ ಮೂಲಕ ಅವರ ಆ ಪರಿಸರದಲ್ಲಿ ವಿಶೇಷವಾಗಿ ಕಂಡುಬರುತ್ತಾರೆ. ಇಂತಹ ಗುಂಪುಗಳೇ ಭಾಷಾದ್ವೀಪಗಳಾಗಿರುತ್ತವೆ. ಈ ರೀತಿಯಾಗಿ ಭಾಷಾದ್ವೀಪಗಳ ರಚನೆಯ ಸ್ವರೂಪವನ್ನು ಕಾಣಬಹುದು.

### ೩.೨.೧. ಭಾಷಾದ್ವೀಪ: ರೂಪುಗೊಳ್ಳುವ ಬಗೆ

ಮಾನವರ ವಲಸೆ ಪ್ರಕ್ರಿಯೆಯ ಮೂಲಕ ರೂಪುಗೊಳ್ಳುವ ಭಾಷಾದ್ವೀಪಗಳು ಬೇರೆ ಬೇರೆಯ ಆಯಾಮಗಳಿಂದ ವಿಶೇಷವಾಗಿರುತ್ತವೆ. ಇವುಗಳಲ್ಲಿ ಆರ್ಥಿಕತೆ, ಸಂಸ್ಕೃತಿ, ರಾಜಕೀಯ ಸ್ಥಾನ, ಚಾರಿತ್ರಿಕತೆ, ಸಾಮಾಜಿಕ ಬದಲಾವಣೆ ಇನ್ನೂ ಹಲವುಗಳಿಂದಾಗಿ ಮುಖ್ಯವೆನಿಸುತ್ತವೆ. ಈ ಹಿನ್ನೆಲೆಯಲ್ಲಿ ಭಾಷಾದ್ವೀಪಗಳು ರೂಪುಗೊಳ್ಳಲು ವಲಸೆ ಪ್ರಕ್ರಿಯೆಗೆ ಇರುವ ಕಾರಣವೇನು? ವಲಸೆ ಪ್ರಕ್ರಿಯೆಯು ಕರ್ನಾಟಕದಲ್ಲಿರುವ ಭಾಷಾದ್ವೀಪಗಳ ರಚನೆಯಲ್ಲಿ ಹೇಗೆ ಕಾರ್ಯ ನಿರ್ವಹಿಸಿದೆ? ಕರ್ನಾಟಕದ ಭಾಷಾದ್ವೀಪಗಳು ವಲಸೆಯ ಯಾವ ಕಾರಣಗಳಿಂದಾಗಿ ರಚನೆಯಾಗಿವೆ?ಅವುಗಳ ಭೌಗೋಳಿಕ ಸ್ವರೂಪವೇನು? ಭಾಷಿಕ ಸ್ವರೂಪವೇನು? ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ. ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಾದ್ವೀಪಗಳನ್ನು ಗುರುತಿಸುವಿಕೆ ಮತ್ತು ಅವುಗಳ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಡಲಾಗಿದೆ.

೩.೨.೧.೧. ವಲಸೆ

ಮಾನವರ ಚಲನಾತ್ಮಕ ಬದುಕಿನಲ್ಲಿ ಅನೇಕ ಕಾರಣಗಳಿಂದ ಬದಲಾವಣೆಗಳನ್ನು ಕಾಣಬಹುದು. ಪ್ರಾಚೀನ ಕಾಲದಿಂದ ಇಂದಿನವರೆಗೆ ಹಲವು ಬದಲಾವಣೆಗಳನ್ನು ವಿವಿಧ ಸ್ವರೂಪದಲ್ಲಿ ಗುರುತಿಸಬಹುದು. ಪ್ರಾಚೀನ ಕಾಲದಲ್ಲಿ ತಮ್ಮ ಬದುಕಿಗಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಆಹಾರ ಹುಡುಕಿಕೊಂಡು ಹೋಗುತ್ತಿದ್ದರು. ನಂತರದಲ್ಲಿ ಒಂದು ಕಡೆ ನೆಲೆಸಿ ತಮ್ಮ ಜೀವನ ರೂಪಿಸಿಕೊಂಡರು. ಆ ನಂತರದಲ್ಲಿ ಪ್ರಕೃತಿಯ ವಿಕೋಪಗಳಿಂದ ತಪ್ಪಿಸಿಕೊಳ್ಳಲು ಸುರಕ್ಷಿತ ಪ್ರದೇಶಗಳಿಗೆ ತೆರಳಿದರು. ಹೀಗೆ ತಮ್ಮ ಆಹಾರ ಮತ್ತು ಅಗತ್ಯಗಳನ್ನು ಪಡೆಯಲು ಬೇರೆ ಬೇರೆ ಪ್ರದೇಶಗಳಿಗೆ ತೆರಳಿದರು. ಹೀಗೆ ಪ್ರಾಚೀನ ಕಾಲದಿಂದ ಜೀವನದಲ್ಲಿ ಬದಲಾವಣೆ ಕಂಡುಕೊಂಡರು. ಇಂದಿಗೂ ಈ ಸ್ಥಳ ಬದಲಾವಣೆಯ ಪ್ರಕ್ರಿಯೆ ನಿಂತಿಲ್ಲ. ಅದೇ ಆಹಾರ, ಬದುಕಿನ ಸ್ಥಿತಿ, ಸಾಮಾಜಿಕ ಒತ್ತಡಗಳಿಂದಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಬದಲಾಯಿಸುವ, ಸ್ಥಳೀಯ ಪರಿಸರ ಮತ್ತು ಸಮಾಜಕ್ಕೆ ಹೊಂದಿಕೊಳ್ಳುವ ರೀತಿಯಲ್ಲಿ ಜೀವನ ಹಾಗೂ ಜೀವನಕ್ರಮದಲ್ಲಿ ಬದಲಾವಣೆಗಳನ್ನು ಮಾಡಿಕೊಂಡಿರುವುದು ಕಾಣಬಹುದು. ಇದೇ ಮುಂದುವರಿದು ಬಹುತ್ವವಾಗಿ ರೂಪುಗೊಂಡಿದೆ. ಹೀಗೆ ಹಲವು ಕಾರಣಗಳಿಗೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ತೆರಳಿ ತಮ್ಮ ಬದುಕು ರೂಪಿಸಿಕೊಳ್ಳುವುದನ್ನು ಕಾಣಬಹುದು.

ಮಾನವರ ಬದುಕಿನ ಈ ರೀತಿಯ ಚಲನಾತ್ಮಕ ಪ್ರಕ್ರಿಯೆಯನ್ನು 'ವಲಸೆ' ಎಂದು ಗುರುತಿಸಿದ್ದಾರೆ. ವಲಸೆ ಕುರಿತಂತೆ ಭೂಗೋಳಶಾಸ್ತ್ರಜ್ಞರು, ಆರ್ಥಿಕಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ಭಾಷಾಶಾಸ್ತ್ರಜ್ಞರು ಅಧ್ಯಯನ ಮಾಡಿದ್ದಾರೆ. ಈ ಎಲ್ಲಾ ಜ್ಞಾನಶಿಸ್ತಿನಲ್ಲಿ ವಲಸೆಯ ಕುರಿತು ಚರ್ಚಿಸಿರುವುದನ್ನು ಕಾಣಬಹುದು. ಹೀಗೆ ವಲಸೆಯ ಕುರಿತು ಹೇಳಿರುವ ಕೆಲವು ವ್ಯಾಖ್ಯಾನಗಳನ್ನು ಗಮನಿಸುವುದಾದರೆ;

ಇಂಗ್ಲಿಷ್‌ನ ಆಕ್ಸ್‌ಫರ್ಡ್ ಲಿವಿಂಗ್ ಡಿಕ್ಷನರಿಯಲ್ಲಿ ಹೇಳಿರುವಂತೆ: Movement of people to a new area or country in order to find work or better living conditions (https://en.oxforddictionaries.com/definition/migration)

ಕೇಂಬ್ರಿಡ್ಜ್ ಡಿಕ್ಷನರಿಯಲ್ಲಿ ಹೇಳಿರುವಂತೆ: Movement from one region to another and often back again, esp. according to the season of the year(https://dictionary.cambridge.org/dictionary/english/migration)

ವಿಶ್ವಸಂಸ್ಥೆಯ ಜನಸಂಖ್ಯಾಶಾಸ್ತ್ರೀಯ ಬಹುಭಾಷಾ ಶಬ್ದಕೋಶವು ವಲಸೆಯಂದರೆ "ಒಂದು ವಿಧವಾದ ಭೌಗೋಲಿಕ ಅಥವಾ ಪ್ರಾದೇಶಿಕ ಚಲನೆಯಾಗಿದ್ದು, ಜನರು ಒಂದು ಪ್ರದೇಶದಿಂದ ಮತ್ತೊಂದಕ್ಕೆ ಚಲಿಸಿ, ಮೂಲಸ್ಥಳದಿಂದ ವಾಸಿಸಬೇಕೆಂಬ ಸ್ಥಳಕ್ಕೆ ನಿವಾಸವನ್ನು ಬದಲಾಯಿಸುವುದು" ಎಂದು ವ್ಯಾಖ್ಯಾನಿಸಿದೆ. ಮೆರಿಯಮ್ ವೆಬ್‌ಸ್ಟರ್ ಪ್ರಕಾರ: To move from one country, place, or locality to another(https://www.merriam-webster.com/dictionary/migrate)

'ಪ್ರಮುಖವಾಗಿ ಬಹುಸಂಖ್ಯೆಯ ಜನ ಒಂದೇ ಭಾಷೆಯನ್ನಾಡುವುದರಿಂದ ಆ ನಾಡಿನವರೆಂದು ಗುರುತಿಸಲಾಗುತ್ತದೆ. ಉದಾಹರಣೆಗೆ ಗೋವಾ-ಕೊಂಕಣಿ, ಕರ್ನಾಟಕ-ಕನ್ನಡ, ಮಹಾರಾಷ್ಟ್ರ-ಮರಾಠಿ. ಆಯಾ ಭಾಷಿಕರ ನಾಡಿನಲ್ಲಿ ಅನ್ಯಭಾಷಿಕನೊಬ್ಬ ನೆಲೆಸಿದರೆ ಅವನನ್ನು ವಲಸಿಗನೆಂದು ಕರೆಯುತ್ತಾರೆ. ವಲಸೆಗೆ ಹಲವಾರು ಕಾರಣಗಳಿವೆ. ಆದರೆ ಹೆಚ್ಚಾಗಿ ವಲಸೆ ಹೋಗುವುದು ಬಡತನ, ಬರಗಾಲದಂತಹ ಬದುಕಿನ ದುರ್ಭರತೆಗೆ ತತ್ತರಿಸಿದ ಜನರು'(ಹರಿಶ್ಚಂದ್ರ ದಿಗ್ಸಂಗಿಕರ್, ಕನ್ನಡಿಗರ ಗೋವೆ ವಲಸೆ, ಪುಟ. ೨) ಎಂದು ಭಾಷಿಕವಾಗಿ ಮುಖ್ಯವಾಗಿರಿಸಿಕೊಂಡು ವಲಸೆಯ ವ್ಯಾಖ್ಯಾನವನ್ನು ಮಾಡುತ್ತಾರೆ.

ಮೇಲಿನ ವಲಸೆ ಕುರಿತ ವ್ಯಾಖ್ಯಾನಗಳನ್ನು ಗಮನಿಸಿದಾಗ ಜನರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗಿ ನೆಲೆಸುವುದು ಎಂದು ತಿಳಿಯಬಹುದು. ನಾರಾಯಣವಿಶ್ವ ಎಂ. ಅವರು ರಾವಿನ್ಸ್‌ಸ್ಟೈನ್ ಅವರ ವಲಸೆ ಕುರಿತ ಹೇಳಿಕೆಯನ್ನು ಈ ರೀತಿ ಹೇಳುತ್ತಾರೆ. "ಜನರು ಮೊದಮೊದಲು ಹತ್ತಿರದ ಸ್ಥಳಗಳಿಗೆ ಅಥವಾ ಪಟ್ಟಣಗಳಿಗೆ ವಲಸೆ ಬಂದು ನಂತರ ನಗರಗಳಿಗೆ ವಲಸೆ ಬರುತ್ತಾರೆ. ಈ ರೀತಿಯಾಗಿ ಒಂದು ಗ್ರಾಮದಿಂದ ಮತ್ತೊಂದು ದೊಡ್ಡಗ್ರಾಮಕ್ಕೂ; ಅಲ್ಲಿಂದ ಪಟ್ಟಣಕ್ಕೂ, ಮತ್ತೆ ಅಲ್ಲಿಂದ ನಗರಕ್ಕೂ ಜನರು ವಲಸೆ ಬರುವುದು ಕಂಡುಬರುತ್ತದೆ ಎಂದು ಹೇಳುತ್ತಾರೆ(ನಾರಾಯಣವಿಶ್ವ ಎಂ., ಗ್ರಾಮೀಣ ಮತ್ತು ನಗರ ಸಮಾಜಶಾಸ್ತ್ರ, ಪುಟ. ೯೪). ಹೀಗೆ ಮಾನವರ ವಲಸೆಯು ಸಮಾಜೋ-ಆರ್ಥಿಕ ಸ್ಥಿತಿಯನ್ನು ಬದಲಿಸುವುದರಿಂದ ದಿನದಿಂದ ದಿನಕ್ಕೆ ಹೆಚ್ಚು ಒತ್ತು ಪಡೆಯುತ್ತಿದೆ. ವಲಸೆಯ ಕುರಿತಂತೆ ವಿದ್ವಾಂಸರು ಈ ರೀತಿಯ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಪರಿಸರದಲ್ಲಿ ಸಮಾನತೆ ಕಾಪಾಡಲು ಕೆಲವು ಪ್ರದೇಶಗಳಿಂದ ಮತ್ತೊಂದು ಪ್ರದೇಶಕ್ಕೆ ಹೋಗಬೇಕಾಗುತ್ತದೆ ಎನ್ನುತ್ತಾರೆ. ಅಂದರೆ ಹೆಚ್ಚು ಸಂಪನ್ಮೂಲವಿರುವ ಪ್ರದೇಶಗಳಲ್ಲಿ ಕಡಿಮೆ ಜನಸಂಖ್ಯೆ ಇದ್ದರೆ ಅಲ್ಲಿಗೆ ಸಂಪನ್ಮೂಲಗಳು ಇಲ್ಲದೇ ಇರುವ ಜನರು ವಲಸೆ ಬಂದು ಜೀವಿಸಬಹುದು. ಅದೇ ರೀತಿಯಲ್ಲಿ ಅಭಿವೃದ್ಧಿಯಾಗದ ಪ್ರದೇಶದಿಂದ ಅಭಿವೃದ್ಧಿಯಾಗಿರುವ ಪ್ರದೇಶಕ್ಕೆ ವಲಸೆ ಹೋಗಿ ನೆಲಸಿ ಜೀವನ ಕಟ್ಟಿಕೊಳ್ಳಬಹುದು. ಹೀಗೆ ಪರಿಸರದಲ್ಲಿ ಮತ್ತು ಸಮಾಜದಲ್ಲಿ ಒಂದು ಹಂತದ ಸಮಾನತೆ ಪಡೆಯಲು ವಲಸೆ ಅವಶ್ಯವಿದೆ ಎನ್ನುತ್ತಾರೆ. ಈ ರೀತಿಯ ಪ್ರಕ್ರಿಯೆಯಿಂದಾಗಿ ಅನುಕೂಲಗಳು ಮತ್ತು ಅನನುಕೂಲಗಳು ಇವೆ.

### ೩.೨.೧.೧.೧. ವಲಸೆಯ ಸ್ವರೂಪ

ವಲಸೆ ಪ್ರಕ್ರಿಯೆಯು ಮಾನವರ ಜೀವನದಲ್ಲಿ ಯಾವ ರೀತಿಯಲ್ಲಿ ಪಾತ್ರ ವಹಿಸಿದೆ? ಈ ವಲಸೆಯನ್ನು ಅಧ್ಯಯನಕಾರರು ಯಾವ ರೀತಿಯಲ್ಲಿ ವರ್ಗೀಕರಿಸಿಕೊಂಡಿದ್ದಾರೆ ಎನ್ನುವುದನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. ಸಾಮಾನ್ಯವಾಗಿ ವಲಸೆ ಎಂದರೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗುವುದು ಅಥವಾ ನೆಲೆಸುವುದು ಎಂದು ಹೇಳುತ್ತಾರೆ. ಆದರೆ ಒಂದು ಸ್ಥಳದಿಂದ ಮತ್ತೊಂದು ಸ್ಥಳದಲ್ಲಿ ನೆಲೆಸುವಾಗ ಇರುವ ಪ್ರಕ್ರಿಯೆಗಳನ್ನು ಆಧರಿಸಿ ಅಧ್ಯಯನಕಾರರು ವಿವಿಧ ರೀತಿಯ ವಲಸೆಗಳನ್ನು ವರ್ಗೀಕರಿಸಿದ್ದಾರೆ. ಅವುಗಳೆಂದರೆ ಭೌಗೋಳಿಕ ಪ್ರದೇಶಗಳನ್ನು ಅನುಸರಿಸಿ ಆಂತರಿಕ ವಲಸೆ, ದೇಶೀಯ ವಲಸೆ, ಹೊರದೇಶೀಯ ವಲಸೆ ಮತ್ತು ಅಂತಾರಾಷ್ಟ್ರೀಯ ವಲಸೆ ಎಂದು ವರ್ಗೀಕರಿಸಿದ್ದಾರೆ. ಆಂತರಿಕ

ವಲಸೆ ಎಂದರೆ ಒಂದು ರಾಜ್ಯ ಅಥವಾ ದೇಶದ ಒಳಗೆ ನಡೆಯುವ ವಲಸೆ ಪ್ರಕ್ರಿಯೆಯಾಗಿದೆ. ದೇಶೀಯ ವಲಸೆ ಎಂದರೆ ಒಂದು ಭೌಗೋಳಿಕ ಪ್ರದೇಶದಿಂದ ಅದೇ ರಾಜ್ಯದ ಅಥವಾ ಅದೇ ರಾಷ್ಟ್ರದ ಗಡಿಯೊಳಗೆ ನೆಲೆಸುವಂತಹ ವಲಸೆಗೆ ಮತ್ತು ಇತರ ರಾಷ್ಟ್ರಗಳಿಂದ ಒಂದು ರಾಷ್ಟ್ರಕ್ಕೆ ಬಂದು ನೆಲೆಸುವ ವಲಸೆಗೆ ದೇಶೀಯ ವಲಸೆ ಎಂದು ಕರೆಯಲಾಗುತ್ತದೆ. ಹೊರದೇಶೀಯ ವಲಸೆ ಎಂದರೆ ಒಂದು ಭೌಗೋಳಿಕ ಎಲ್ಲೆಯಿಂದ ಮತ್ತೊಂದು ಭೌಗೋಳಿಕ ಎಲ್ಲೆಗೆ ಅಂದರೆ ಬೇರೆ ರಾಷ್ಟ್ರದ ಭೂಪ್ರದೇಶಕ್ಕೆ ಹೋಗಿ ನೆಲೆಸುವುದಕ್ಕೆ ಹೊರದೇಶೀಯ ವಲಸೆ ಎಂದು ಕರೆಯಲಾಗುತ್ತದೆ. ಅಂತರರಾಷ್ಟ್ರೀಯ ವಲಸೆ ಎಂದರೆ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಹೋಗಿ ನೆಲೆಸುವುದು. ಮರುವಲಸೆ ಎಂದರೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗಿದ್ದವರು ತಮ್ಮ ಮೂಲನೆಲೆಗೆ ಮತ್ತೆ ಬಂದು ನೆಲೆಸುವುದಕ್ಕೆ ಮರುವಲಸೆ ಎಂದು ಕರೆಯಾಗುತ್ತದೆ. ಇನ್ನು ಉಳಿದಂತೆ ಒಳವಲಸೆ, ಹೊರವಲಸೆ, ಹಳ್ಳಿಯಿಂದ ಹಳ್ಳಿಗೆ ವಲಸೆ, ನಗರದಿಂದ ಹಳ್ಳಿಗೆ ವಲಸೆ, ಹಳ್ಳಿಗಳಿಂದ ನಗರಕ್ಕೆ ವಲಸೆ ಎಂದು ಪ್ರದೇಶಗಳನ್ನು ಆಧಾರವಾಗಿರಿಸಿಕೊಂಡು ವರ್ಗೀಕರಿಸಿದ್ದಾರೆ.

ಜನರು ಒಂದು ಪ್ರದೇಶದಿಂದ ವಲಸೆ ಹೋಗಲು ಹೊರದೂಡುವ ಅಂಶಗಳೇ(Push factor) ಮತ್ತು ಆಕರ್ಷಿಸುವ ಅಂಶಗಳೇ(Pull factor) ಕಾರಣ ಎಂದು ತಿಳಿಸುತ್ತಾರೆ. ಅಂದರೆ ಒಂದು ಪ್ರದೇಶದಿಂದ ಹೊರದೂಡುವ ಅಂಶಗಳು ಎಂದರೆ ಒಂದು ಪ್ರದೇಶದಲ್ಲಿ ಜನರಿಗೆ ಬೇಕಾದ ಸೌಲಭ್ಯ, ಜೀವನಾವಶ್ಯಕತೆಗಳು ಸಿಗದೇ ಇದ್ದಾಗ ಅವು ಆ ಪ್ರದೇಶದ ಹೊರದೂಡುವ ಅಂಶಗಳಾಗುತ್ತವೆ. ಹಾಗೆಯೇ ಒಂದು ಪ್ರದೇಶದಲ್ಲಿ ಜನರ ಜೀವನಾವಶ್ಯಕತೆಗೆ ಬೇಕಾದ ಸೌಲಭ್ಯಗಳು ದೊರಕುವ ಅಂಶಗಳಿಗೆ ಆಕರ್ಷಿಸುವ ಅಂಶಗಳೆನ್ನುತ್ತಾರೆ ಅಥವಾ ಒಂದು ಸ್ಥಳಕ್ಕೆ ವಲಸಿಗರನ್ನು ಸೆಳೆಯುವ ಅಂಶಗಳೇ ಆಕರ್ಷಿಸುವ ಅಂಶಗಳು.

**ಹೊರದೂಡುವ ಅಂಶಗಳು**(Push factor)

ನಿರುದ್ಯೋಗ

ಕಡಿಮೆ ವೇತನ

ಬೆಳೆನಾಶ

ಬಡತನ

ಅನಾರೋಗ್ಯ ಅಥವಾ ಶಿಕ್ಷಣದ ಕೊರತೆ

ಕೆಲವೇ ಸೌಲಭ್ಯಗಳು

ನೈಸರ್ಗಿಕ ವಿಕೋಪಗಳು

ನಾಗರಿಕ ಯುದ್ಧಗಳು

**ಆಕರ್ಷಿಸುವ ಅಂಶಗಳು(Pull factor)**

ಹೆಚ್ಚಿನ ಉದ್ಯೋಗ ಅವಕಾಶಗಳು

ಹೆಚ್ಚಿನ ವೇತನ ದೊರಕುವುದು

ಉತ್ತಮ ಬದುಕಿನ ಅವಕಾಶ

ಉತ್ತಮ ಶಿಕ್ಷಣ ಮತ್ತು ಆರೋಗ್ಯ ಸೌಲಭ್ಯಗಳು

ಕಡಿಮೆ ನೈಸರ್ಗಿಕ ವಿಕೋಪಗಳು

### ೩.೨.೧.೧.೧.ಅ. ವ್ಯಕ್ತಿಯಾಗಿ ವಲಸೆ ಹೋಗುವುದು

ಬೇರೆ ಬೇರೆ ಕಾರಣಗಳಿಗಾಗಿ ಒಂದು ಪ್ರದೇಶದ ವ್ಯಕ್ತಿಯು ಮತ್ತೊಂದು ಪ್ರದೇಶಕ್ಕೆ ಹೋಗಿ ನೆಲೆಸುವುದು ವ್ಯಕ್ತಿಯಾಗಿ ವಲಸೆ ಎನ್ನಬಹುದು. ಇತ್ತೀಚಿನ ಶಿಕ್ಷಣ, ಉದ್ಯೋಗ, ವ್ಯಾಪಾರ ಕಾರಣಗಳಿಗಾಗಿ ಒಂದು ಪ್ರದೇಶದ ಒಬ್ಬ ವ್ಯಕ್ತಿಯು ವಲಸೆ ಹೋಗುವುದನ್ನು ಕಾಣಬಹುದು.

ಉದಾಹರಣೆಗೆ ವಿದೇಶಗಳಿಗೆ ಶಿಕ್ಷಣದ ಸಲುವಾಗಿ ವಿದ್ಯಾರ್ಥಿಗಳು ಹೋಗುವುದು. ವ್ಯಾಪಾರಕ್ಕಾಗಿ ಕೆಲವು ವ್ಯಾಪಾರಿಗಳು ತಮ್ಮ ಪ್ರದೇಶಗಳನ್ನು ಬಿಟ್ಟು ಬೇರೆ ಪ್ರದೇಶಗಳಲ್ಲಿ ನೆಲೆಸುವುದು.

ಈ ರೀತಿಯ ವಲಸೆಯು ಬಹುತೇಕ ಅಲ್ಪಕಾಲಿಕವಾಗಿರುತ್ತದೆ. ವ್ಯಕ್ತಿಯು ತಮ್ಮ ಕಾರ್ಯ ಮುಗಿದ ತಕ್ಷಣ ಮರುವಲಸೆ ಮಾಡುವುದನ್ನು ಕಾಣಬಹುದು. ಸಾಮಾನ್ಯವಾಗಿ ವಲಸೆ ವ್ಯಕ್ತಿಯ ಮೂಲ ಭಾಷೆಯಲ್ಲದ ಪರಿಸರಗಳಿಗೆ ವಲಸೆ ಹೋದರೆ ತಮ್ಮ ಭಾಷೆಯನ್ನು ಉಳಿಸಿಕೊಳ್ಳುವ ಕುರಿತು ಯೋಚಿಸುವಂತಾಗುತ್ತದೆ. ಉದಾಹರಣೆಗೆ ಉತ್ತರ ಭಾರತದ ವ್ಯಕ್ತಿಯೊಬ್ಬ ಕರ್ನಾಟಕಕ್ಕೆ ಉದ್ಯೋಗದ ಕಾರಣಕ್ಕೆ ಬಂದು ನೆಲೆಸುತ್ತಾನೆ. ಅವನು ಸಾಮಾಜಿಕ ಸಂಪರ್ಕಕ್ಕಾಗಿ ಹಿಂದಿ–ಇಂಗ್ಲಿಷ್ ಭಾಷೆಯನ್ನು ಬಳಸಿ ಕೆಲಸ ನಿರ್ವಹಿಸುತ್ತಾನೆ. ಆದರೆ ತನ್ನ ಮೂಲ ಭಾಷೆಯಲ್ಲಿ ಸಂಭಾಷಿಸಲು ಯಾರೂ ಸಿಗದ ಸಂದರ್ಭದಲ್ಲಿರುತ್ತಾನೆ. ಹೀಗೆ ವ್ಯಕ್ತಿಯು ಬಹು ದಿನಗಳು ಇಲ್ಲಿಯೇ ನೆಲೆಸಿದ್ದರೆ ತನ್ನ ಭಾಷೆಯನ್ನು ಕಳೆದುಕೊಳ್ಳುವ ಸಂದರ್ಭಕ್ಕೆ ಬಂದು ನಿಲ್ಲುತ್ತಾನೆ. ಭಾಷಿಕವಾಗಿ ಗಮನಿಸಬೇಕಾದ ಅಂಶಗಳೆಂದರೆ ವ್ಯಕ್ತಿಯು ಅಲ್ಪಕಾಲಿಕವಾಗಿ ಬೇರೊಂದು ಪ್ರದೇಶದಲ್ಲಿ ವಾಸವಾಗಿದ್ದರೆ ತನ್ನ ಮೂಲಭಾಷೆಗೆ ಯಾವುದೇ ತೊಂದರೆಯಾಗುವುದಿಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ಈ ರೀತಿಯ ವ್ಯಕ್ತಿ ಹೊಸ ಪ್ರದೇಶಗಳಲ್ಲಿ ವೈವಾಹಿಕ ಸಂಬಂಧ ಬೆಳೆಸಿ ಅಥವಾ ಶಾಶ್ವತ ನೆಲೆಯನ್ನು ಕಂಡುಕೊಂಡರೆ ವ್ಯಕ್ತಿಯು ಬಳಕೆಯ ಭಾಷೆಯನ್ನು ಬಿಟ್ಟುಕೊಡಬೇಕಾಗುತ್ತದೆ. ಹೀಗೆ ಈ ರೀತಿಯ ಸಂದರ್ಭಗಳು ತುಂಬಾ ಕಡಿಮೆ. ಭಾಷಾದ್ವೀಪಗಳಲ್ಲಿ ಈ ರೀತಿಯ ವಲಸೆಯನ್ನು ಕಾಣುವುದಿಲ್ಲ. ಏಕೆಂದರೆ ಭಾಷಾದ್ವೀಪಗಳು ಮೂಲತಃ ಗುಂಪು ಗುಂಪುಗಳಾಗಿ ವಲಸೆ ಬಂದು ನೆಲೆಸಿ ತಮ್ಮ ಭಾಷೆಯನ್ನು ಉಳಿಸಿಕೊಳ್ಳಲು ತಮ್ಮ ಮೂಲ ಭಾಷಿಕ ಪರಿಸರವನ್ನು ಸೃಷ್ಟಿಸಿಕೊಂಡಿರುತ್ತವೆ.

### ೩.೨.೧.೧.೧.ಆ. ಕುಟುಂಬ/ಸಮುದಾಯ/ಗ್ರಾಮಗಳ ರೂಪದಲ್ಲಿ ವಲಸೆ ಹೋಗುವುದು

ಮಾನವರ ಜೀವನದಲ್ಲಿ ಬಹುತೇಕವಾಗಿ ಕುಟುಂಬಗಳ ರೂಪದಲ್ಲಿ, ಸಮುದಾಯಗಳ ರೂಪದಲ್ಲಿ ಮತ್ತು ಗ್ರಾಮಗಳ ರೂಪದಲ್ಲಿ ವಲಸೆ ಹೋಗುವುದನ್ನು ಕಾಣಬಹುದು. ಈ ರೀತಿಯ ವಲಸೆಯು ಗ್ರಾಮ-ಗ್ರಾಮಗಳಿಂದ ವಲಸೆ ಪ್ರಾರಂಭವಾಗಿ ಅಂತಾರಾಷ್ಟ್ರೀಯ ಮಟ್ಟದಲ್ಲಿಯೂ ನಡೆಯುತ್ತದೆ. ಗ್ರಾಮ-ಗ್ರಾಮಗಳಲ್ಲಿ ನಡೆಯುವ ವಲಸೆಯನ್ನು ಗಮನಿಸುವುದಾದರೆ ಕರ್ನಾಟಕದಲ್ಲಿ ಹಲವು ಕೂಲಿ ಕಾರ್ಮಿಕ ಕುಟುಂಬದವರು/ಸಮುದಾಯದವರು ವಲಸೆ ಹೋಗುವುದನ್ನು ಕಾಣುತ್ತೇವೆ. ಉದಾಹರಣೆಗೆ ಮಲೆನಾಡಿನ ತೋಟಗಳಲ್ಲಿ ಕೆಲಸ ಮಾಡಲು ಉತ್ತರ ಕರ್ನಾಟಕದ ಹಲವು ಕುಟುಂಬಗಳು ವಲಸೆ ಹೋಗಿ ಕೆಲಸ ಮಾಡುತ್ತವೆ. ಅದೇ ರೀತಿಯಲ್ಲಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಕುಟುಂಬ ಅಥವಾ ಸಮುದಾಯಗಳ ವಲಸೆಗೆ ಉದಾಹರಣೆ ಬ್ರಿಟಿಷ್ ವಸಾಹತು ಕಾಲದಲ್ಲಿ ಭಾರತದಲ್ಲಿನ ಹಲವು ಕೆಳವರ್ಗದ ಜನರು ತಮ್ಮ ಜೀವನಕ್ಕಾಗಿ ಬೇರೆ ದೇಶಗಳಿಗೆ ವಲಸೆ ಹೋಗಿರುವುದಕ್ಕೆ ಆಧಾರಗಳಿವೆ. ೧೮೭೯ರಿಂದ ೧೯೧೬ರವರೆಗೆ ಸುಮಾರು ೬೦,೦೦೦ ಜನರನ್ನು ಬ್ರಿಟಿಷ್ ವಸಾಹತು ಸರ್ಕಾರಗಳು ಕಬ್ಬು ಬೆಳೆ ಕೆಲಸಕ್ಕಾಗಿ(Sugar-cane plantations) ಉತ್ತರ ಭಾರತ ಮತ್ತು ದಕ್ಷಿಣ ಭಾರತದ ಬೇರೆ ಬೇರೆ ಭಾಷಿಕರನ್ನು ಕರೆದೊಯ್ಯಲಾಗಿತ್ತು( ಫ್ರಾನ್ಸಿಸ್ ಮುಗ್ಲೆರ್, ಸ್ಯಾಮ್ ಮೋಹನ್ ಲಾಲ್, ಫಿಜಿ ಇನ್ ತಮಿಳ್, ಐಜೆಡಿಎಲ್ ಪತ್ರಿಕೆಯ IJDL Vol XXVIII NO ೨ ಸಂಚಿಕೆ. ಪುಟ.೧೨).

ಹೀಗೆ ಕುಟುಂಬ, ಸಮುದಾಯ ಮತ್ತು ಗ್ರಾಮಗಳು ವಲಸೆ ಹೋಗುವುದರಿಂದ ಒಂದು ಭಾಷೆಯವರು. ಅವರ ಮೂಲಭಾಷೆಯನ್ನು ಬಳಕೆ ಮಾಡಲು ಮತ್ತು ಸಂಗೋಪನೆ ಮಾಡಲು ಅನುಕೂಲವಾಗುತ್ತದೆ. ಈ ರೀತಿಯಲ್ಲಿ ವಲಸೆ ಹೋಗಿ ತಮ್ಮ ಭಾಷೆಯನ್ನು ಸಂಗೋಪನೆ ಮಾಡಿಕೊಂಡಿರುವ ಗುಂಪುಗಳೇ ಭಾಷಾದ್ವೀಪಗಳಾಗಿ ಉಳಿದುಕೊಂಡಿರುತ್ತವೆ. ಇನ್ನು ಕರ್ನಾಟಕದಲ್ಲಿ ಈ ರೀತಿಯ ಗುಂಪುಗಳನ್ನು ಕಾಣಬಹುದು.

ಉದಾಹರಣೆಗೆ ಉತ್ತರ ಭಾರತದಿಂದ ಬಂದು ನೆಲೆಸಿರುವ ಶೇಟು ಮನೆತನಗಳು ಬಳ್ಳಾರಿ, ಕೊಪ್ಪಳ, ರಾಯಚೂರು ಜಿಲ್ಲೆಗಳಲ್ಲಿ ಕ್ಯಾಂಪ್‌ಗಳಲ್ಲಿ ವಾಸಿಸುತ್ತಿರುವ ತೆಲುಗು ಭಾಷಿಕರು, ಸಿಂಧನೂರು ತಾಲ್ಲೂಕಿನಲ್ಲಿ ವಾಸವಾಗಿರುವ ಬಂಗಾಳಿ ನಿರಾಶ್ರಿತರು.

### ೩.೨.೧.೧.೨. ವಲಸೆಗೆ ಕಾರಣಗಳು

ಮಾನವರ ವಲಸೆಗೆ ಬೇರೆ ಬೇರೆ ಕಾರಣಗಳನ್ನು ಗುರುತಿಸಬಹುದು. ಈ ಹಿಂದೆ ತಿಳಿಸಿದಂತೆ ಹೊರದೂಡುವ ಅಂಶಗಳು ಬಹುತೇಕ ವಲಸೆಯ ಕಾರಣಗಳಾಗಿ ಮಾರ್ಪಡುತ್ತವೆ. ಅಂದರೆ ಒಂದು ಪ್ರದೇಶದಲ್ಲಿ ಜೀವನ ಅವಶ್ಯಕಗಳನ್ನು ಪೂರೈಸಿಕೊಳ್ಳಲು ಆಗದಿದ್ದಾಗ, ಆ ಪರಿಸರವನ್ನು ಬಿಟ್ಟು ಸೌಲಭ್ಯಗಳು ಲಭ್ಯವಾಗುವ ಮತ್ತೊಂದು ಪ್ರದೇಶಕ್ಕೆ ಹೋಗುವುದಕ್ಕೆ ಇರುವ ಕಾರಣಗಳು. ಸಾಮಾನ್ಯವಾಗಿ ವಲಸೆಗೆ ಕಾರಣಗಳನ್ನು ಸಾಮಾಜಿಕ ಸ್ಥಿತಿಗತಿಗಳನ್ನು ಅನುಸರಿಸಿ ವರ್ಗೀಕರಿಸಿರುವುದನ್ನು ಕಾಣಬಹುದು.

ಕಾರಣಗಳು:

ಸಾಮಾಜಿಕ ಕಾರಣಗಳು

ಆರ್ಥಿಕ ಕಾರಣಗಳು

ರಾಜಕೀಯ ಕಾರಣಗಳು

**೩.೨.೨. ಭಾಷಾದ್ವೀಪಗಳು ರೂಪುಗೊಳ್ಳಲು ಕಾರಣಗಳು**

ಇಲ್ಲಿ ಭಾಷಾದ್ವೀಪಗಳು ರೂಪುಗೊಳ್ಳಲು ಇರುವ ಕಾರಣಗಳನ್ನು ವಲಸೆಗೆ ಇರುವ ಕಾರಣಗಳೆಂದು ಪರಿಗಣಿಸಲಾಗಿದೆ. ಅಂದರೆ ವಲಸೆ ಪ್ರಕ್ರಿಯೆಯಿಂದಲೇ ಭಾಷಾದ್ವೀಪಗಳು ರೂಪುಗೊಳ್ಳುವ ಕಾರಣ ವಲಸೆಯ ಕಾರಣಗಳೇ ಇಲ್ಲಿ ಭಾಷಾದ್ವೀಪ ರೂಪುಗೊಳ್ಳುವ ಕಾರಣಗಳಾಗಿವೆ. ಭಾಷಾದ್ವೀಪಗಳ ಹಿನ್ನೆಲೆಯಲ್ಲಿ ವಲಸೆಯ ಕಾರಣಗಳನ್ನು ವಿವರಿಸಿಕೊಳ್ಳಲಾಗಿದೆ. ಅಲ್ಲದೆ ಭಾಷಾದ್ವೀಪಗಳು ರೂಪುಗೊಳ್ಳಲು ಸಾಮಾಜಿಕ, ಆರ್ಥಿಕ, ರಾಜಕೀಯ ಕಾರಣಗಳು ಹೇಗೆ ಕಾರ್ಯ ನಿರ್ವಹಿಸುತ್ತವೆ ಎನ್ನುವುದನ್ನು ಚರ್ಚಿಸಲಾಗಿದೆ. ಪ್ರಸ್ತುತ ಕರ್ನಾಟಕದಲ್ಲಿ ವಲಸೆಯಿಂದ ರಚನೆಯಾಗಿರುವ ಭಾಷಾದ್ವೀಪಗಳನ್ನು ಪರಿಚಯಿಸಿದೆ.

**೩.೨.೨.೧. ಸಾಮಾಜಿಕ ಕಾರಣಗಳು**

**ಮಾನವರ ವಲಸೆಗೆ ಇರುವ ಸಾಮಾಜಿಕ ಕಾರಣಗಳು**

ಮಾನವರು ತಮ್ಮ ಜೀವನವನ್ನು ಕಟ್ಟಿಕೊಳ್ಳಲು ಜೀವನದ ಅನೇಕ ಸಂದರ್ಭಗಳಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ತೆರಳಿ ವಾಸಿಸಲು ಪ್ರಾರಂಭಿಸುತ್ತಾರೆ. ಇವುಗಳಲ್ಲಿ ಸಾಮಾಜಿಕ ಕಾರಣಗಳು ಎಂದು ವಿಭಾಗಿಸಿಕೊಂಡು ಸಾಮಾಜಿಕವಾಗಿ ಕಂಡುಬರುವ ಸಾಮಾಜಿಕ ಸ್ಥಿತಿ, ಉತ್ತಮ ಜೀವನಾವಕಾಶ, ಶಿಕ್ಷಣ ಕಾರಣಕ್ಕಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಬರುವುದನ್ನು ಕಾಣಬಹುದು. ಸಾಮಾಜಿಕ ಸ್ಥಿತಿ ಎಂದರೆ ಮೊದಲು ವಾಸಿಸುವ ಸ್ಥಳದಲ್ಲಿ ಜಾತಿಯ ಕಾರಣಕ್ಕೋ, ವರ್ಗದ ಕಾರಣಕ್ಕೋ ಜನರನ್ನು ಕೀಳಾಗಿ ಕಾಣುತ್ತಾರೆ. ಅವರು ಸಮಾಜದಿಂದ ಶೋಷಣೆಯನ್ನು ತಪ್ಪಿಸಿಕೊಳ್ಳಲು ಮತ್ತೊಂದು ಪ್ರದೇಶಕ್ಕೆ ಬಂದು ಹೊಸ ಪರಿಸರದಲ್ಲಿ ಸಮಾಜದ ಉತ್ತಮ ಸ್ಥಾನದಲ್ಲಿ ಬದುಕುವುದನ್ನು ಕಾಣಬಹುದು.

ಉದಾಹರಣೆಗೆ ಬಳ್ಳಾರಿಯಲ್ಲಿ ವಾಸವಾಗಿರುವ ಆಂಧ್ರ ಮತ್ತು ತೆಲಂಗಾಣ ಮೂಲದ ಅನೇಕ ಕೆಳವರ್ಗದ ಜನರು ತಮ್ಮ ಮೂಲಸ್ಥಳಗಳಲ್ಲಿ ಕೀಳಾಗಿ ಕಾಣುವ ಕಾರಣಕ್ಕೆ ಮತ್ತು ಕಡಿಮೆ ಜೀವನ ಮಟ್ಟಕ್ಕಾಗಿ ಅವರು ಬಳ್ಳಾರಿಯ ಸ್ಥಳೀಯ ಸಂಸ್ಥೆಗಳಲ್ಲಿ ಪೌರಕಾರ್ಮಿಕರಾಗಿ ಬದುಕುತ್ತಿರುವುದನ್ನು ಕಾಣಬಹುದು. ಇವರ ತಮ್ಮ ಊರುಗಳಿಗಿಂತ ಉತ್ತಮ ಮಟ್ಟದ ಜೀವನವನ್ನು ಇಲ್ಲಿ ಕಟ್ಟಿಕೊಂಡಿದ್ದಾರೆ. ಇನ್ನು ಶೈಕ್ಷಣಿಕ ಮತ್ತು ಆರೋಗ್ಯದ ಕಾರಣಕ್ಕಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗಿ ನೆಲೆಸುವುದನ್ನು ಕಾಣಬಹುದು. ಉದಾಹರಣೆಗೆ ಪ್ರಸ್ತುತ ಕರ್ನಾಟಕದ ಬಹುಭಾಗಗಳಲ್ಲಿ ಮಕ್ಕಳ ಶಿಕ್ಷಣಕ್ಕಾಗಿ ಗ್ರಾಮೀಣ ಪರಿಸರದ ಸ್ಥಿತಿವಂತರು ಪಟ್ಟಣಗಳಿಗೆ ವಲಸೆ ಬಂದು ನೆಲೆಸುತ್ತಿದ್ದಾರೆ. ಇದರೊಂದಿಗೆ ಮಕ್ಕಳ

ಉನ್ನತ ಶಿಕ್ಷಣಕ್ಕಾಗಿ ದೊಡ್ಡ ದೊಡ್ಡ ನಗರಗಳಿಗೆ ವಲಸೆ ಹೋಗಿ ನೆಲೆಸಿರುವುದನ್ನು ಕಾಣಬಹುದು. ಪ್ರಾದೇಶಿಕ ಅಸಮಾನತೆಯ ಕಾರಣಕ್ಕಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಬರುವುದನ್ನು ಕಾಣಬಹುದು. ಉದಾಹರಣೆಗೆ ಉತ್ತರ ಕರ್ನಾಟಕದ ಜನರು ಉದ್ಯೋಗಗಳನ್ನು ಹುಡುಕಿಕೊಂಡು ಬೆಂಗಳೂರು, ಗೋವಾ, ಮುಂಬೈ ನಗರಗಳಿಗೆ ವಲಸೆ ಹೋಗುತ್ತಿರುವುದನ್ನು ಕಾಣಬಹುದು. ಇಲ್ಲಿ ಉದ್ಯೋಗವು ಎಲ್ಲಾ ಪ್ರದೇಶಗಳಲ್ಲಿ ಸಮಾನವಾಗಿ ಹಂಚಿಕೆಯಾಗದ ಕಾರಣ ಉದ್ಯೋಗ ದೊರಕುವ ಪ್ರದೇಶಗಳಿಗೆ ವಲಸೆ ಹೋಗುವುದನ್ನು ಕಾಣಬಹುದು.

**೩..೨.೨.೨. ಆರ್ಥಿಕ ಕಾರಣ:**

**ಮಾನವರ ವಲಸೆಗೆ ಇರುವ ಆರ್ಥಿಕ ಕಾರಣಗಳು**

ವಲಸೆಗೆ ಆರ್ಥಿಕ ಕಾರಣಗಳು ಎಂದು ಉದ್ಯೋಗ, ವ್ಯಾಪಾರ, ಬಡತನವನ್ನು ಗುರುತಿಸಬಹುದು. ಇವು ಸಾಮಾನ್ಯವಾಗಿ ಮಾನವರ ಪ್ರಾಚೀನ ಕಾಲದಿಂದಲೂ ಈ ಕಾರಣಗಳಿಗಾಗಿಯೇ ಹೆಚ್ಚು ವಲಸೆ ನಡೆದಿರುವುದನ್ನು ಕಾಣಬಹುದು. ಅಸಮಾನ ಸೌಲಭ್ಯಗಳ ಹಂಚಿಕೆಯಿಂದಾಗಿ ಉದ್ಯೋಗ ಹುಡುಕಿಕೊಂಡು ಬೇರೆ ಪ್ರದೇಶಗಳಿಗೆ ಹೋಗುವುದನ್ನು ಕಾಣಬಹುದು. ಇನ್ನು ಕೆಲವರು ತಮ್ಮ ವ್ಯಾಪಾರ ವಹಿವಾಟುಗಳ ಚಟುವಟಿಕೆಗಳನ್ನು ವಿಸ್ತರಿಸಲು ತಮ್ಮ ಪ್ರದೇಶಗಳನ್ನು ಬಿಟ್ಟು ಬೇರೆ ಪ್ರದೇಶಗಳಿಗೆ ವಲಸೆ ಹೋಗುವುದನ್ನು ನೋಡಬಹುದು. ಹಾಗೆಯೇ ಬಡತನದ ಕಾರಣದಿಂದ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗಿ ದುಡಿಮೆಯ ಸೌಲಭ್ಯ, ಆರ್ಥಿಕತೆಯ ಸೌಲಭ್ಯ ಪಡೆಯುವುದನ್ನು ಕಾಣಬಹುದು.

ಉದಾಹರಣೆಗೆ ಬೆಂಗಳೂರು ನಗರ ಪ್ರದೇಶದಲ್ಲಿ ವಾಸವಾಗಿರುವ ತಮಿಳು ಮತ್ತು ತೆಲುಗು ಭಾಷಿಕರ ಗುಂಪುಗಳು ತಮ್ಮ ಬಡತನ ಹಾಗೂ ಉದ್ಯೋಗದ ಕಾರಣಕ್ಕಾಗಿ ಮೂಲನೆಲೆಯನ್ನು ತ್ಯಜಿಸಿ ಬೆಂಗಳೂರಿಗೆ ವಲಸೆ ಬಂದಿದ್ದಾರೆ. ಇವರಲ್ಲಿ ಬಹುತೇಕರು ಕೆಳವರ್ಗಗಳಿಗೆ ಸಂಬಂಧಿಸಿದವರು. ತಮ್ಮ ಮೂಲಸ್ಥಳಗಳಲ್ಲಿ ಕೃಷಿ, ಕೂಲಿ ಕೆಲಸವನ್ನು ಮಾಡುತ್ತಿದ್ದವರು. ಕೃಷಿಯಲ್ಲಿ ಹೆಚ್ಚು ಆದಾಯವಿಲ್ಲದ ಕಾರಣ ಬೆಂಗಳೂರಿಗೆ ಬಂದೆವು ಎಂದು ಹೇಳುತ್ತಾರೆ. ಇನ್ನು ಕೆಲವರು ನಮ್ಮ ಮೂಲಸ್ಥಳಗಳಲ್ಲಿ ಹೆಚ್ಚಿನ ಕೂಲಿ ಸಿಗದ ಕಾರಣ ನಾವು ಬೆಂಗಳೂರಿಗೆ ಬಂದೆವು ಎಂದು ಹೇಳುತ್ತಾರೆ. ಹೀಗೆ ಬೆಂಗಳೂರಿನಲ್ಲಿ ಪೌರಕಾರ್ಮಿಕರಾಗಿ ದುಡಿಯುತ್ತಿರುವ ಅನ್ಯಭಾಷಿಕರು ಬಹುತೇಕರು ಆರ್ಥಿಕ ಕಾರಣದಿಂದಾಗಿಯೇ ವಲಸೆ ಬಂದಿರುವುದನ್ನು ಕಾಣಬಹುದು. ಇನ್ನು ಕರ್ನಾಟಕದ ಹಲವು ಕಡೆಗಳಲ್ಲಿ ನೆಲೆಸಿರುವ ತಮಿಳು ಭಾಷಿಕರಲ್ಲಿ ಬಹುತೇಕರು ಉದ್ಯೋಗ, ಬಡತನದ ನಿವಾರಣೆಗಾಗಿ ವಲಸೆ ಬಂದವರಾಗಿದ್ದಾರೆ. ಇವರು ಸ್ವಾತಂತ್ರ್ಯ ಪೂರ್ವ, ಸ್ವಾತಂತ್ರ್ಯ ನಂತರದಲ್ಲಿ ಮತ್ತು ಇಂದಿಗೂ ಅನೇಕರು ವಲಸೆ ಬಂದಿರುವುದನ್ನು ಕಾಣಬಹುದು. ಇವರಲ್ಲಿ ಬಹುತೇಕರು ಚಿಕ್ಕಮಗಳೂರು, ಶಿವಮೊಗ್ಗ, ಮೈಸೂರು, ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಲ್ಲಿ ಹೆಚ್ಚಾಗಿರುವುದನ್ನು ಕಾಣುತ್ತೇವೆ.

ಹುಬ್ಬಳ್ಳಿ ಭಾಗದ ರೈಲ್ವೆ ಕೆಲಸಕ್ಕಾಗಿ ತಮಿಳುನಾಡಿನಿಂದ ಬಂದು ನೆಲೆಸಿರುವ ಬೃಹತ್ ಸಮುದಾಯವನ್ನು ಇಂದಿಗೂ ನಾವು ಕಾಣಬಹುದು. ಅವರು ಇಂದಿಗೂ ರೈಲ್ವೆ ಇಲಾಖೆಯ ಅನೇಕ ಕೆಲಸಗಳಲ್ಲಿ ತೊಡಗಿದ್ದಾರೆ.

ಸುಮಾರು ೩೦,೦೦೦ ಜನರು ರೈಲ್ವೆ ಕೆಲಸಕ್ಕಾಗಿ ಬಂದಿದ್ದಾರೆ. ಇವರು ಕರ್ನಾಟಕಕ್ಕೆ ಬಂದು ೧೫೦ ವರ್ಷಗಳು ಕಳೆದಿವೆ ಎಂದು ಹೇಳುತ್ತಾರೆ.(Madaswamy S, Tamils in Karnataka, Ph.d. thesis, Karnataka University, Page-51)

ಭದ್ರಾವತಿಯ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಯಲ್ಲಿ ಕಾರ್ಮಿಕರಾಗಿ ಹೆಚ್ಚಿನ ತಮಿಳು ಭಾಷಿಕರು ಕೆಲಸ ಮಾಡುತ್ತಿದ್ದಾರೆ. ಇವರಲ್ಲಿ ಯಾದವರು, ಚೆಟ್ಟಿಯಾರ್, ಆಚಾರ್ಯ ಸಮುದಾಯದವರು ಹೆಚ್ಚಿದ್ದಾರೆ.

ಇನ್ನು ವ್ಯಾಪಾರಕ್ಕಾಗಿ ಕರ್ನಾಟಕಕ್ಕೆ ವಲಸೆ ಬಂದು ನೆಲೆಸಿರುವ ಸಮುದಾಯಗಳಿವೆ. ಅವುಗಳಲ್ಲಿ ಶೇಟ್ ಸಮುದಾಯಗಳು, ಸಿಂಗ್ ಸಮುದಾಯಗಳು ಸೇರಿವೆ. ಈ ರೀತಿಯ ಸಮುದಾಯಗಳನ್ನು ಬಹುತೇಕ ಕರ್ನಾಟಕದ ಬೃಹತ್ ನಗರಗಳಲ್ಲಿ ಕಾಣಬಹುದು. ಇವು ಗ್ರಾಮ ಪ್ರದೇಶಗಳಲ್ಲಿ ಕಂಡುಬರುವುದಿಲ್ಲ. ಬೆಂಗಳೂರು ನಗರದಲ್ಲಿ ನಗರ್ತ ಪೇಟೆ ಪ್ರದೇಶದಲ್ಲಿ ವ್ಯಾಪಾರವನ್ನೇ ಮುಖ್ಯವಾಗಿಸಿಕೊಂಡು ಬದುಕುತ್ತಿರುವ ಈ ಸಮುದಾಯಗಳು ನಗರ್ತ ಪೇಟೆಯ ಪರಿಸರವನ್ನು ವ್ಯಾಪಾರಿ ದ್ವೀಪವಾಗಿಸಿಕೊಂಡಿದ್ದಾರೆ. ಅಂದರೆ ಇಲ್ಲಿನ ಬಹುತೇಕ ಪ್ರದೇಶವು ವ್ಯಾಪಾರಕ್ಕೆ ಮೀಸಲಾಗಿದೆ. ಇಲ್ಲಿನ ಜನರು ವ್ಯಾಪಾರಕ್ಕಾಗಿ ಹಿಂದಿ, ಕನ್ನಡವನ್ನು ಮಾತನಾಡುತ್ತಾರೆ. ಇವನ್ನು ಹೊರತುಪಡಿಸಿದಂತೆ ತಮ್ಮ ಮೂಲಭಾಷೆಯನ್ನು ಅಥವಾ ಹಿಂದಿಯನ್ನು ಪೂರ್ಣ ಪ್ರಮಾಣದಲ್ಲಿ ಬಳಸುವುದನ್ನು ಕಾಣಬಹುದು. ಈ ರೀತಿಯ ಉತ್ತರ ಭಾರತ ವ್ಯಾಪಾರಿ ಸಮುದಾಯಗಳು ಕೇವಲ ಬೆಂಗಳೂರು ನಗರಕ್ಕೆ ಸೀಮಿತವಾಗಿರದೆ ಕರ್ನಾಟಕದ ಜಿಲ್ಲಾ ಕೇಂದ್ರಗಳಲ್ಲಿ, ತಾಲ್ಲೂಕು ಕೇಂದ್ರಗಳಲ್ಲಿ ತಮ್ಮ ವ್ಯಾಪಾರ ವಹಿವಾಟನ್ನು ವಿಸ್ತರಿಸಿಕೊಂಡು ತಮ್ಮದೇ ವ್ಯಾಪಾರಿ ಮತ್ತು ಸಾಂಸ್ಕೃತಿಕ ಪರಿಸರವನ್ನು ನಿರ್ಮಿಸಿಕೊಂಡಿದ್ದಾರೆ.

ಬಳ್ಳಾರಿ ಜಿಲ್ಲೆಯಲ್ಲಿ ತೆಲುಗು ಭಾಷಿಕರು ಹೆಚ್ಚಾಗಿ ವಲಸೆ ಬಂದಿರುವುದನ್ನು ಕಾಣಬಹುದು. ಇವರಲ್ಲಿ ಕೆಲವರು ಕೃಷಿ ಚಟುವಟಿಕೆಗಾಗಿ ಬಂದಿದ್ದರೆ, ಇನ್ನು ಕೆಲವರು ತಮ್ಮ ಉದ್ಯೋಗವನ್ನು ಹುಡುಕಿಕೊಂಡು ಬಂದಿದ್ದಾರೆ. ಅಲ್ಲದೆ ಗಣಿಕಾರ್ಮಿಕರಾಗಿ, ಕೂಲಿಕಾರ್ಮಿಕರಾಗಿ ವಲಸೆ ಬಂದಿದ್ದಾರೆ. ಇವರು ಕರ್ನಾಟಕದಲ್ಲಿ ವಾಸಿಸುವ ಪ್ರದೇಶಗಳನ್ನು ಕ್ಯಾಂಪ್‌ಗಳೆಂದು ಕರೆಯುತ್ತಾರೆ. ಹೊಸಪೇಟೆ, ಕಂಪ್ಲಿ, ಗಂಗಾವತಿ, ಸಂಡೂರು, ಸಿಂಧನೂರು ಪ್ರದೇಶಗಳಲ್ಲಿ ಇವರು ಹೆಚ್ಚಾಗಿದ್ದಾರೆ.

ಹೀಗೆ ಆರ್ಥಿಕ ಕಾರಣಕ್ಕಾಗಿ ಬೇರೆ ಬೇರೆ ಕಡೆಗಳಿಂದ ವಲಸೆ ಬಂದು ಕರ್ನಾಟಕದಲ್ಲಿ ನೆಲೆಸಿರುವುದನ್ನು ಕಾಣಬಹುದು. ಹೀಗೆ ನೆಲೆಸಿರುವ ಸಮುದಾಯಗಳು ತಮ್ಮದೇ ಭಾಷಿಕ ಮತ್ತು ಸಾಂಸ್ಕೃತಿಕ ವಲಯಗಳನ್ನು ರಚಿಸಿಕೊಂಡಿದ್ದಾರೆ.

**೩.೨.೨.೩. ರಾಜಕೀಯ ಕಾರಣ**

**ಮಾನವರ ವಲಸೆಗೆ ಇರುವ ರಾಜಕೀಯ ಕಾರಣ**

ಮಾನವರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗಲು ರಾಜಕೀಯ ಒತ್ತಡಗಳನ್ನು ಕಾಣಬಹುದು. ಅಂದರೆ ಮೂಲಪ್ರದೇಶಗಳಲ್ಲಿ ಇವರು ಪ್ರಬಲವರ್ಗದ, ಸಮುದಾಯಗಳ

ಅಧಿಕಾರದ ಒತ್ತಡದಿಂದಲೋ ಅಥವಾ ತಮ್ಮ ಜೀವನ ರಕ್ಷಣೆಗಾಗಿಯೋ ಶೋಷಿತ ಸಮುದಾಯಗಳು ಆ ಪ್ರದೇಶಗಳನ್ನು ತೊರೆಯುವ ಸಂದರ್ಭಗಳು ಬರುತ್ತವೆ. ಹೀಗೆ ತಮ್ಮ ಜೀವನ ಉಳಿಸಿಕೊಳ್ಳಲು ಮೂಲಪ್ರದೇಶಗಳನ್ನು ತೊರೆದು ಮತ್ತೊಂದು ಪ್ರದೇಶಕ್ಕೆ ಹೋಗಿ ನೆಲೆಸಿರುವ ಸಮುದಾಯಗಳನ್ನು ಹಿಂದಿನಿಂದಲೂ ಕಾಣಬಹುದು.

ಇದಲ್ಲದೆ ಪ್ರಾಚೀನ ಕಾಲದಿಂಡಲೂ ರಾಜರು ತಮ್ಮ ಯುದ್ಧದ ಸಂದರ್ಭದಲ್ಲಿ ಮತ್ತು ರಾಜ್ಯಗಳ ವಿಸ್ತರಣೆಯ ಸಮಯದಲ್ಲಿ ಬೇರೆ ಬೇರೆ ಪ್ರದೇಶಗಳ ಮೇಲೆ ದಾಳಿ ಮಾಡುತ್ತಿದ್ದರು. ಆ ಸಂದರ್ಭದಲ್ಲಿ ಸೈನಿಕರು, ಅಧಿಕಾರಿಗಳು ತಮ್ಮ ಮೂಲನೆಲೆಯನ್ನು ಬಿಟ್ಟು ರಾಜರು ಸೂಚಿಸಿದ ಪ್ರದೇಶಗಳಲ್ಲಿ ವಾಸವಾಗಿರಬೇಕಿತ್ತು. ಹೀಗೆ ರಾಜಕೀಯ ಮತ್ತು ಆಡಳಿತದ ಕಾರಣದಿಂದ ವಲಸೆ ಬಂದು ನೆಲೆಸಿದ ಸಮುದಾಯಗಳನ್ನು ಚೋಳ, ಗಂಗ, ಹೊಯ್ಸಳ, ವಿಜಯನಗರ ರಾಜರ ಆಳ್ವಿಕೆಯ ಕಾಲದಿಂದಲೂ ಕಾಣಬಹುದು. ಅಲ್ಲದೆ ಬ್ರಿಟಿಷ್ ವಸಾಹತು ಕಾಲದಲ್ಲಿಯೂ ಈ ರೀತಿಯ ವಲಸೆಯನ್ನು ಕಾಣಬಹುದು. ಕರ್ನಾಟಕದಲ್ಲಿ ಮಲೆನಾಡು ಮತ್ತು ಕರಾವಳಿ ಪ್ರದೇಶಗಳಲ್ಲಿ ಇರುವ ಕೆಲವು ಮರಾಠಿ ಗುಂಪುಗಳು ಈ ರೀತಿ ನೆಲೆಸಿದವಾಗಿವೆ.

ಮುಖ್ಯವಾಗಿ ರಾಜಕೀಯ ಕಾರಣದಲ್ಲಿ ಪ್ರಬಲವರ್ಗದವರ ಸಾಮಾಜಿಕ ಒತ್ತಡ, ಅಧಿಕಾರಿಗಳ ಅಧಿಕಾರದ ಒತ್ತಡ, ಧರ್ಮದ ಹೆಸರಿನಲ್ಲಿ ಸಂಪ್ರದಾಯಗಳ ಹೇರಿಕೆ, ಹೀಗೆ ಬೇರೆ ಬೇರೆ ಅಂಶಗಳನ್ನು ಕಾಣಬಹುದು. ಕರ್ನಾಟಕದಲ್ಲಿ ರಾಜಕೀಯ ಕಾರಣಕ್ಕಾಗಿ ವಲಸೆ ಬಂದು ನೆಲೆಸಿರುವ ಹಲವು ಸಮುದಾಯಗಳನ್ನು ಕಾಣಬಹುದು.

ಕರ್ನಾಟಕದಲ್ಲಿ ರಾಜಕೀಯ ಕಾರಣಕ್ಕಾಗಿ ವಲಸೆ ಬಂದು ನೆಲೆಸಿದ ಸಮುದಾಯಗಳು

ಟಿಬೆಟ್ ನಿರಾಶ್ರಿತರು

ಬಂಗಾಳಿ ನಿರಾಶ್ರಿತರು

ಶ್ರೀಲಂಕದ ತಮಿಳು ನಿರಾಶ್ರಿತರು

**ಟಿಬೆಟ್ ನಿರಾಶ್ರಿತರ ಕ್ಯಾಂಪ್**

ಚೀನಾ ಮತ್ತು ಟಿಬೆಟ್‌ನಲ್ಲಿ ೧೯೫೦ರಲ್ಲಿ ನಡೆದ ರಾಜಕೀಯಬೆಳವಣಿಗೆಯಿಂದಾಗಿ ಎರಡೂ ಪ್ರದೇಶಗಳ ನಡುವೆ ರಾಜಕೀಯ ಅಧಿಕಾರ ಸ್ಥಾಪನೆ ಮತ್ತು ಅಸ್ತಿತ್ವವನ್ನು ಕಾಪಾಡಿಕೊಳ್ಳುವ ಗೊಂದಲಗಳು ಪ್ರಾರಂಭಗೊಂಡವು. ಚೀನಾ ಟಿಬೆಟ್ಟನ್ನು ತನ್ನ ಪ್ರದೇಶವಾಗಿ ಮಾಡಿಕೊಂಡು ೧೭ ಅಂಶಗಳ ಕಾರ್ಯಕ್ರಮದ ಮೇಲೆ ಸ್ವಾತಂತ್ರ್ಯ ಪ್ರದೇಶವೆಂದು ಘೋಷಿಸಿತು. ಆದರೆ ಚೀನಾ ಸರ್ಕಾರವು ಟಿಬೆಟ್‌ನ ಮೇಲೆ ಪರೋಕ್ಷವಾಗಿ ಅಧಿಕಾರ ಸ್ಥಾಪಿಸಲು ಪ್ರಾರಂಬಿಸಿತು. ಆ ಮೂಲಕ ೧೯೫೬ರಿಂದ ೧೯೫೮ರವರೆಗೆ ಭೂ ಸುಧಾರಣೆಗಳನ್ನು ಜಾರಿಗೆ ತಂದಿತು. ಇದನ್ನು ಟಿಬೆಟ್ ಜನರು ವಿರೋಧಿದರು. ಅಲ್ಲದೇ ಚೀನಾದ

ಕಮ್ಯೂನಿಸ್ಟರು ಟಿಬೆಟ್‌ನ ಗ್ರಾಮೀಣ ಪ್ರದೇಶಗಳಲ್ಲಿ ಕಮ್ಯೂನಿಸ್ಟರನ್ನು ಸ್ಥಾಪಿಸಲು ಪ್ರಾರಂಭಿಸಿದರು. ಈ ರೀತಿಯ ಚೀನಿಯರ ಆಕ್ರಮಣವನ್ನು ಟಿಬೆಟ್‌ನ ಶ್ರೀಮಂತರು ಮತ್ತು ಸನ್ಯಾಸಿಗಳು ವಿರೋಧಿಸಿದರು. ಈ ಸಮಯದಲ್ಲಿ ಟಿಬೆಟಿಯನ್ನರು ಗೆರಿಲ್ಲಾ ಮಾದರಿಯ ಹೋರಾಟ ಮಾಡಿದರು. ಕಮ್ಯೂನಿಸ್ಟರೂ ಟಿಬೆಟಿಯನ್ ಧಾರ್ಮಿಕ ಸ್ವಾತಂತ್ರ್ಯಕ್ಕೆ ಧಕ್ಕೆ ತರುತ್ತಾರೆಂಬ ಭಾವನೆ ಹೆಚ್ಚಿದಂತೆಲ್ಲಾ ವಿರೋಧದ ಪ್ರತಿಭಟನೆಗಳು ಹೆಚ್ಚಿದವು. ಇದರೊಂದಿಗೆ ಶ್ರೀಮಂತರು ಭೂಸುಧಾರಣೆಯ ಅಂಶಗಳನ್ನು ವಿರೋಧಿಸಿದರು. ಈ ಬೆಳವಣಿಗೆಯನ್ನು ನಿಯಂತ್ರಿಸಲು ಚೀನಾ ಸರ್ಕಾರವು ಸೈನಿಕ ಕಾರ್ಯಾಚರಣೆ ಮಾಡಿತು. ಇದರಲ್ಲಿ ಸುಮಾರು ೧೦,೦೦೦ ದಿಂದ ೧,೫೦,೦೦೦ ಟಿಬೆಟಿಯನ್ನರು ಸಾವಿಗೀಡಾದರು.

ಹೀಗೆ ಚೀನಾದಿಂದ ಆಕ್ರಮಣಕ್ಕೊಳಗಾದ ಟಿಬೆಟ್ಟನ್ನು ತ್ಯಜಿಸಿ ರಕ್ಷಣೆಗಾಗಿ ೧೯೫೯ರಲ್ಲಿ ಟಿಬೆಟಿಯನ್ನರು ಭಾರತಕ್ಕೆ ಬಂದರು. ಅಂದಿನ ಸರ್ಕಾರವು ಇವರಿಗೆ ಭಾರತದಲ್ಲಿ ವಾಸಿಸಲು ಅವಕಾಶ ಮಾಡಿಕೊಟ್ಟಿತು. ಹಿಮಾಚಲ ಪ್ರದೇಶದ ಧರ್ಮಶಾಲವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಕೆಲಕಾಲ ಟಿಬೆಟ್ಟನನ್ನು ಆಳ್ವಿಕೆ ಮಾಡಿದರು. ಇದಕ್ಕೆ ಚೀನಾ ವಿರೋಧವನ್ನು ವ್ಯಕ್ತಪಡಿಸಿದೆ.

ಒಟ್ಟು ಮೂರು ಹಂತಗಳಲ್ಲಿ ಟಿಬೆಟ್‌ನ ನಿರಾಶ್ರಿತರು ಭಾರತ, ಭೂತಾನ ಮತ್ತು ನೇಪಾಳದ ವಿವಿಧ ಭಾಗಗಳಲ್ಲಿ ನೆಲೆಸಿರುವುದು ಕಾಣಬಹುದು. ಈ ವಲಸೆಯು ಶಾಶ್ವತ ವಲಸೆಯಲ್ಲ ಎಂದು ಟಿಬೆಟ್‌ನ ಜನರು ನಂಬಿದ್ದಾರೆ. ಕೇಂದ್ರೀಯ ಟಿಬೆಟ್ ಆಡಳಿತವು ೨೦೦೯ರಲ್ಲಿ ಗುರುತಿಸುವಂತೆ ೧,೨೭,೯೩೫ ಟಿಬೆಟಿಯನ್ನರು ವಲಸೆ ಬಂದಿದ್ದಾರೆ. ಭಾರತದಲ್ಲಿ ೯೪,೨೦೩, ನೇಪಾಳದಲ್ಲಿ ೧೩.೫೧೪, ಭೂತಾನ್‌ನಲ್ಲಿ ೧೨೯೮ ಮತ್ತು ಪ್ರಪಂಚದ ಇತರ ಭಾಗಗಳಲ್ಲಿ ೧೮,೯೨೦ ಟಿಬೆಟಿಯನ್ನರು ವಾಸವಾಗಿದ್ದಾರೆ ಎಂದು ತಿಳಿಸುತ್ತದೆ.

ದಕ್ಷಿಣ ಭಾರತದಲ್ಲಿ ಒಟ್ಟು ಐದು ನಿರಾಶ್ರಿತ ನೆಲೆಗಳನ್ನು ಕಾಣಬಹುದು

೧. ಲುಗ್ಸಂಗ್ ಸ್ಯಾಮ್ದುಪ್ಲಿಂಗ್, ಬಿಕೋಪೆ

೨. ಡಿಕಿ ಲಾಸೋರ್, ಬೈಲಕುಪ್ಪೆ

೩. ಡೋಗ್ಗುಲಿಂಗ್, ಮುಂಡಗೋಡು

೪. ರಬ್ಗಿಲಿಂಗ್, ಹುನ್ಸುರ್

೫. ಧೋನ್ಡೆನ್ಲಿಂಗ್, ಕೊಳ್ಳೆಗಾಲ

ಹೀಗೆ ದಕ್ಷಿಣ ಭಾರತದ ಐದು ಬೇರೆ ಬೇರೆ ಪ್ರದೇಶಗಳಲ್ಲಿ ಕ್ಯಾಂಪ್‌ಗಳನ್ನು ಕಾಣಬಹುದು. ಇವುಗಳಲ್ಲಿ ಮುಖ್ಯವಾಗಿ ಮೂರು ಪ್ರದೇಶಗಳು ಕರ್ನಾಟಕದಲ್ಲಿ ನೆಲೆಗೊಂಡಿರುವುದನ್ನು ಕಾಣಬಹುದಾಗಿದೆ.

ಭಾರತ ಮತ್ತು ಭೂತಾನ್‌ಗಳಲ್ಲಿ ೪೬ ನಿರಾಶ್ರಿತ ಕೇಂದ್ರಗಳಿವೆ. ಕರ್ನಾಟಕದಲ್ಲಿ ಬೈಲುಕುಪ್ಪೆ ಪ್ರದೇಶದಲ್ಲಿ ೧೫,೦೦೦ಹೆಕ್ಟೇರ್ ಪ್ರದೇಶದಲ್ಲಿ ೩೦೦೦ ನಿರಾಶ್ರಿತರು ವಾಸಿಸಲು ೧೯೬೯ರಲ್ಲಿ ಅನುವು ಮಾಡಿಕೊಟ್ಟಿತು. ನಂತರ ಟಿಬೆಟ್‌ನ ಜನಗಣತಿಯ ಪ್ರಕಾರ ಪ್ರಸ್ತುತ ೭೬೩೧ ಜನರು ವಾಸವಾಗಿದ್ದಾರೆ.

ಇದರಲ್ಲಿ ಸನ್ಯಾಸಿಗಳು, ಶಿಷ್ಯರು ಮತ್ತು ಸಿಬ್ಬಂದಿಗಳು ಸೇರಿದ್ದಾರೆ. ಬೌದ್ಧಧರ್ಮದ ನಾಲ್ಕು ಪಂಗಡಗಳಾದ ಸೆರಾ, ತಾಶಿಲ್ಹನ್ಪೋ, ಕಾರ್ಗಿಯು ಮತ್ತು ನಾಮ್ಡ್ರಿಲಿಂಗ್ಗಳ ಅನುಯಾಯಿಗಳು ಇದ್ದಾರೆ. ಈ ಕ್ಯಾಂಪ್‌ಗಳ ಮುಖ್ಯ ಆಡಳಿತಾಧಿಕಾರಿಯು ಕೇಂದ್ರೀಯ ಟಿಬೆಟ್ ಆಡಳಿತ(ಸಿಎಟಿ) ಸಂಸ್ಥೆಯಿಂದ ನೇಮಕಗೊಂಡಿರುತ್ತಾನೆ. ಇನ್ನು ಕ್ಯಾಂಪ್‌ಗಳ ನಾಯಕನನ್ನು ಜನರೇ ಆಯ್ಕೆ ಮಾಡುತ್ತಾರೆ. ಈ ಕ್ಯಾಂಪ್‌ಗಳ ಒಟ್ಟು ಜವಾಬ್ದಾರಿಯು ಸಿಎಟಿಯ ಜವಾಬ್ದಾರಿಯಾಗಿರುತ್ತದೆ. ಕ್ಯಾಂಪ್‌ನ ಆವರಣದಲ್ಲಿ ಶೈಕ್ಷಣಿಕ ಅವಕಾಶಕ್ಕಾಗಿ ಪ್ರಾಥಮಿಕ ಮತ್ತು ಪ್ರೌಢಶಾಲೆ ಮಾದರಿಯ ಶಾಲೆಗಳು ಇವೆ. ಈ ಶಾಲೆಗಳಲ್ಲಿ ೧೧೬೦ ಮಕ್ಕಳಿಗೆ ಶಿಕ್ಷಣ ನೀಡಲಾಗುತ್ತಿದೆ. ಇದರೊಂದಿಗೆ ಧಾರ್ಮಿಕ ಶಿಕ್ಷಣವನ್ನು ಕ್ಯಾಂಪ್‌ನ ಆವರಣದಲ್ಲಿರುವ ಮಠಗಳಲ್ಲಿ ನೀಡಲಾಗುತ್ತಿದೆ.

ಮುಂಡಗೋಡು ಟಿಬೆಟ್ ನಿರಾಶ್ರಿತ ಕೇಂದ್ರ: ಇದು ಒಟ್ಟು ೯ ಕ್ಯಾಂಪ್‌ಗಳನ್ನು ಒಳಗೊಂಡಿದೆ. ಇಲ್ಲಿಯೂ ಪ್ರತಿ ಕ್ಯಾಂಪ್‌ನ ಜನರು ಸೇರಿ ನಾಯಕನನ್ನು ಆಯ್ಕೆ ಮಾಡುತ್ತಾರೆ ಅವನನ್ನು 'ಗ್ಯಾಂಬೋ' ಎಂದು ಕರೆಯಲಾಗುತ್ತದೆ. ಇವನು ಜನರ ಮತ್ತು ಆಡಳಿತ ಸಂಸ್ಥೆಗಳಿಗೆ ಮಧ್ಯವರ್ತಿಯಾಗಿ ಕಾರ್ಯ ನಿರ್ವಹಿಸುತ್ತಾನೆ. ಇವನು ಜನರಿಗೆ ಸಾಮಾಜಿಕ, ಆರ್ಥಿಕ, ಧಾರ್ಮಿಕ ಕಾರ್ಯಗಳಲ್ಲಿ ನೆರವಾಗುತ್ತಾನೆ. ಇದು ನಾಯಕ ಜವಾಬ್ದಾರಿಯಾಗಿರುತ್ತದೆ. ಈ ರೀತಿಯ ಟಿಬೆಟ್ ನಿರಾಶ್ರಿತ ಕ್ಯಾಂಪ್ ಚಾಮರಾಜ ನಗರದ ಕೊಳ್ಳೆಗಾಲ ತಾಲ್ಲೂಕಿನಲ್ಲಿದೆ. ಇದು ತಮಿಳುನಾಡು ಮತ್ತು ಕರ್ನಾಟಕದ ಗಡಿ ಪ್ರದೇಶದಲ್ಲಿದೆ. ಇದರ ಆರಂಭಿಕ ಜನಸಂಖ್ಯೆಯು ೩೧೬೦ ಇದ್ದು ಇಂದು ೪೧೭೧ ಜನರಿದ್ದಾರೆ. ಈ ಕೇಂದ್ರದಲ್ಲಿ ಒಟ್ಟು ೨೫ರಿಂದ ೩೦ ಕುಟುಂಬಗಳು ಇವೆ. ಇಲ್ಲಿ ಮೂರು ಪೂರ್ವ ಪ್ರಾಥಮಿಕ ಶಾಲೆಗಳಿವೆ ಮತ್ತು ಒಂದು ಪ್ರೌಢಶಾಲೆ ಇದೆ. ಇದರೊಂದಿಗೆ ಒಟ್ಟು ಐದು ಮಠಗಳನ್ನು ಹೊಂದಿದೆ. ಟಿಬೆಟ್ ವೈದ್ಯಕೀಯ ಸಂಸ್ಥೆಯನ್ನು ಹೊಂದಿದೆ. ಇಲ್ಲಿಯೂ ಗುಂಪಿನ ನಾಯಕನನ್ನು ಜನರೇ ಆಯ್ಕೆ ಮಾಡುತ್ತಾರೆ. ಇವನು ಸಿಎಟಿಯ ನಡುವೆ ಕಾರ್ಯ ನಿರ್ವಹಿಸುತ್ತಾನೆ.

**ಭಾಷಾದ್ವೀಪಗಳಾಗಿ ಟಿಬೆಟ್ ಕ್ಯಾಂಪ್‌ಗಳು: ಕ್ಯಾಂಪ್‌ಗಳಲ್ಲಿ ಸಾಮಾಜಿಕ ಜೀವನವ್ಯವಸ್ಥೆ**

ಕ್ಯಾಂಪ್‌ನ ವಿಸ್ತೀರ್ಣದಲ್ಲಿ ೧೧ ಹಳ್ಳಿಗಳಿವೆ. ಇವು ಒಂದೊಂದು ೪-೬ ಕಿ. ಮೀ. ದೂರದಲ್ಲಿವೆ. ಇವುಗಳಲ್ಲಿ ಎರಡು ಕ್ಯಾಂಪ್‌ಗಳಲ್ಲಿ ಲಾಮಗಳು(ಸನ್ಯಾಸಿಗಳು) ವಾಸವಾಗಿದ್ದಾರೆ. ಇನ್ನುಳಿದ ಒಂಬತ್ತು ಕ್ಯಾಂಪ್‌ಗಳಲ್ಲಿ ಸಾಂಸಾರಿಕ ಜೀವನ ನಡೆಸುವವರು ಇದ್ದಾರೆ. ಸರ್ಕಾರ ನೀಡಿರುವ ಅಲ್ಪಪ್ರಮಾಣದ ಜಮೀನಿನಲ್ಲಿಯೇ ಕೃಷಿ ಮತ್ತು ಪಶು ಸಂಗೋಪನೆ ಮಾಡಿಕೊಂಡು ತಮ್ಮ ಜೀವನ ನಡೆಸುತ್ತಾರೆ. ತಮ್ಮ ಕ್ಯಾಂಪ್‌ನ ಆವರಣದಲ್ಲಿ ಬಹುತೇಕರು ಟಿಬೆಟ್ ಭಾಷೆಯನ್ನು ಬಳಸುತ್ತಾರೆ. ಇದರಲ್ಲಿ ಕೆಲವೇ ಕೆಲವರು ಕನ್ನಡ ಮಾತನಾಡುತ್ತಾರೆ. ಇವರು ಕನ್ನಡಿಗರ ಪರಿಸರದೊಂದಿಗೆ ವ್ಯವಹರಿಸುವ ಕಾರಣ ಕನ್ನಡವನ್ನು ಅಲ್ಪಸ್ವಲ್ಪ ಪ್ರಮಾಣದಲ್ಲಿ ಮಾತನಾಡುತ್ತಾರೆ. ಇನ್ನು ಕೆಲವರು ಹಿಂದಿಯನ್ನು ಸ್ಥಳೀಯ ಪರಿಸರದ ಸಂಪರ್ಕ ಭಾಷೆಯಾಗಿ ಬಳಕೆ ಮಾಡುತ್ತಾರೆ. ಇವರು ತಮ್ಮದೇ ಭಾಷೆಯ ಪ್ರಾಥಮಿಕ ಶಾಲೆಗಳನ್ನು ಹೊಂದಿದ್ದು, ತಮ್ಮ ಭಾಷೆಯಲ್ಲಿಯೇ ಪ್ರಾಥಮಿಕ, ಪ್ರೌಢ ಮತ್ತು ಕಾಲೇಜು ಶಿಕ್ಷಣವನ್ನು ಮಕ್ಕಳಿಗೆ ನೀಡುತ್ತಾರೆ.

ಇದರೊಂದಿಗೆ ಕ್ಯಾಂಪ್‌ಗಳಲ್ಲಿರುವ ಮಠಗಳಲ್ಲಿ ತಮ್ಮದೇ ಭಾಷೆ ಮತ್ತು ಸಂಸ್ಕೃತಿಯಲ್ಲಿ ಧರ್ಮಶಿಕ್ಷಣವನ್ನು ನೀಡುತ್ತಾರೆ. ಹಾಗೆಯೇ ಕ್ಯಾಂಪ್‌ನ ಆವರಣದಲ್ಲಿ ಆಸ್ಪತ್ರೆ ಮತ್ತು ದೈನಂದಿನ ವ್ಯವಹಾರಕ್ಕಾಗಿ ಹೋಟೆಲ್, ವಾಣಿಜ್ಯ ಮಳಿಗೆಗಳನ್ನು ಹೊಂದಿದ್ದಾರೆ.

**ಕ್ಯಾಂಪ್‌ನ ಜನರು ಕನ್ನಡಿಗರ ಪರಿಸರದೊಂದಿಗೆ ವ್ಯವಹರಿಸುವುದು**

ಕ್ಯಾಂಪ್‌ನ ಜನರು ತಮ್ಮ ದಿನನಿತ್ಯದ ಜೀವನಕ್ಕಾಗಿ ಕನ್ನಡಿಗರ ಪರಿಸರವನ್ನು ಅವಲಂಬಿಸಿದ್ದಾರೆ. ಅದರಲ್ಲೂ ವಿಶೇಷವಾಗಿ ವ್ಯವಹಾರಕ್ಕೆ ಹಾಗೂ ತಮ್ಮ ಕೃಷಿ ಕೆಲಸಗಳಿಗೆ ಅವಲಂಬಿಸಿರುವುದನ್ನು ಕಾಣಬಹುದು. ಇವರು ಮುಂಡಗೋಡು ಪಟ್ಟಣದಲ್ಲಿ ಕನ್ನಡಿಗರೊಂದಿಗೆ ಹಿಂದಿ ಅಥವಾ ಟಿಬೆಟ್‌ನಲ್ಲಿ ಮಾತನಾಡುತ್ತಾರೆ. ಕನ್ನಡಿಗರು ಇವರೊಂದಿಗೆ ವ್ಯವಹರಿಸಲು ಅಗತ್ಯಕ್ಕೆ ತಕ್ಕಂತೆ ಟಿಬೆಟ್ ಭಾಷೆಯನ್ನು ಕಲಿತು ವ್ಯವಹರಿಸುವುದನ್ನು ಕಾಣಬಹುದು.

ಮುಂಡಗೋಡು ಪಟ್ಟಣದ ಕೆಲವು ವ್ಯಾಪಾರಿಗಳನ್ನು ಈ ಕುರಿತು ಮಾಹಿತಿ ಸಂಗ್ರಹಿಸಿದಾಗ, ಟಿಬೆಟಿಯನ್ನರು ಸಾಮಾನ್ಯವಾಗಿ ಅವರ ಭಾಷೆಯಲ್ಲಿಯೇ ಮಾತನಾಡುತ್ತಾರೆ. ಅವರಲ್ಲಿ ಕೆಲವರು ಮಾತ್ರ ಹಿಂದಿಯನ್ನು ಮಾತನಾಡುತ್ತಾರೆ. ಇನ್ನುಳಿದಂತೆ ಎಲ್ಲಾರೂ ಟಿಬೆಟ್ ಭಾಷೆಯನ್ನೇ ಬಳಸುತ್ತಾರೆ ಎನ್ನುತ್ತಾರೆ. ಹಾಗಾದರೆ ನೀವು ಅವರೊಂದಿಗೆ ಹೇಗೆ ವ್ಯವಹಾರ ನಡೆಸುತ್ತೀರಾ ಎನ್ನುವ ಪ್ರಶ್ನೆಗೆ ಅವರಿಂದ ಬಂದ ಉತ್ತರ; ನಾವು ಟಿಬೆಟ್ ಭಾಷೆಯ ಕೆಲವು ಪದಗಳನ್ನು ಕಲಿತಿದ್ದೇವೆ. ಅವುಗಳಿಂದ ವ್ಯವಹಾರ ನಡೆಸುತ್ತೇವೆ. ಉದಾಹರಣೆಗೆ ಸಂಖ್ಯಾವಾಚಕಗಳು ಹೇಳುವುದಾದರೆ ೧–ಚೀ, ೨–ನೀ, ೩–ಸೊಂ, ೪–ಶೀ, ೫–ನಾ, ೬–ಟು, ೭–ದೈ, ೮–ಗೆ, ೯–ಗೂ, ೧೦–ಚು ಎಂದು ಹೇಳುತ್ತಾ ವಸ್ತುವಾಚಕಗಳನ್ನು ಅವುಗಳ ಬೆಲೆಗಳನ್ನು ಟಿಬೆಟ್ ಭಾಷೆಯಲ್ಲಿ ಗುರುತಿಸಿದರು.

ಇದೇ ಪಟ್ಟಣದ ಟೈಲರ್‌ಗಳಿಂದ ಟಿಬೆಟಿಯನ್ನರು ಬಳಸುವ ಭಾಷೆಯ ಕುರಿತು ಮಾಹಿತಿ ಸಂಗ್ರಹಿಸಿದಾಗ, ಟಿಬೆಟಿಯನ್ನರು ನಮ್ಮೊಂದಿಗೆ ಅವರದೇ ಟಿಬೆಟ್ ಭಾಷೆಯನ್ನು ಬಳಸುತ್ತಾರೆ ಎಂದಿದ್ದಾರೆ. ಕೆಲವರು ಮಾತ್ರ ಹಿಂದಿಯನ್ನು ಬಳಸಿ ಮಾತನಾಡುತ್ತಾರೆ. ನೀವು ಅವರೊಂದಿಗೆ ಹೇಗೆ ವ್ಯವಹರಿಸುತ್ತೀರಾ ಎನ್ನುವುದಕ್ಕೆ ಅವರು ನೀಡಿದ ಉತ್ತರ ಟಿಬೆಟ್ ಭಾಷೆಯಲ್ಲಿಯೇ ವ್ಯವಹರಿಸುತ್ತೇವೆ ಎನ್ನುತ್ತಾರೆ. ನೀವು ಹೇಗೆ ಟಿಬೆಟ್ ಭಾಷೆಯನ್ನು ಕಲಿತಿರಿ ಎಂದರೆ, ಕೆಲವು ಟಿಬೆಟಿಯನ್ನರು ವ್ಯವಹರಿಸಲು ಕೆಲವು ಪದಗಳನ್ನು ನಮಗೆ ಕಲಿಸಿದ್ದಾರೆ. ನಾವು ನಮ್ಮ ಜೀವನಾವಶ್ಯಕತೆಗಾಗಿ ಕಲಿತಿದ್ದೇವೆ ಎನ್ನುತ್ತಾರೆ.

ಉದಾಹರಣೆಗೆ ಹೇಳುವುದಾದರೆ "ನಾನು ಟೈಲರ್ ಕೆಲಸ ಮಾಡುತ್ತೇನೆ. ನಾನು ಅವರು ಉಡುವ ಬಟ್ಟೆಗಳನ್ನು ಅವರದೇ ಭಾಷೆಯಲ್ಲಿ ಗುರುತಿಸುತ್ತೇನೆ. ಲಾಮಾಗಳು ಕೆಂಪು ಬಣ್ಣದ ಬಟ್ಟೆಯನ್ನು ಮೇಲಂಗಿಯಾಗಿ ಬಳಕೆ ಮಾಡುತ್ತಾರೆ. ಅದಕ್ಕೆ 'ತೊಂಗ' ಎಂದು ಕರೆಯುತ್ತಾರೆ. ಇದು ಜಾಕೆಟ್ ರೂಪದಲ್ಲಿರುತ್ತದೆ. ಇನ್ನು ಕೆಳಭಾಗದಲ್ಲಿ ಲಂಗ ತರಹದ ಉದ್ದನೆಯ ವಸ್ತ್ರ ತೊಡುತ್ತಾರೆ. ಅದು ಕೆಂಪು ಬಣ್ಣದ್ದು. ಅದನ್ನು 'ಶಾಂತಪ್' ಎಂದು ಕರೆಯುತ್ತಾರೆ. ಇನ್ನು ಹೊದಿಕೆಯಾಗಿ ಬಳಸುವ ಶಾಲನ್ನು 'ಚುಗು' ಎಂದು ಕರೆಯತ್ತಾರೆ. ಇದನ್ನು ಸಾಮಾನ್ಯವ್ವಾಗಿ ಪೂಜೆಯ ಸಮಯದಲ್ಲಿ ಮಾತ್ರ ಬಳಸುತ್ತಾರೆ.

ಹಳದಿ ಬಣ್ಣ ಮತ್ತು ಬೇರೆ ಬೇರೆ ಬಣ್ಣದ ಚಿಕ್ಕ ಚಿಕ್ಕ ತುಂಡುಗಳಿಂದ ಸಿದ್ಧಮಾಡಿದ ಶಾಲನ್ನು ವಿಶೇಷ ಪೂಜೆಯ ಸಮಯದಲ್ಲಿ ಬಳಸುತ್ತಾರೆ. ಇದಕ್ಕೆ 'ನಂಬಜರ್' ಎಂದು ಹೆಸರು. ಹೀಗೆ ಲಾಮಾಗಳು ಬಳಸುವ ಉಡುಮಗಳ ಮಾಹಿತಿಯನ್ನು ಟಿಬೆಟ್ ಭಾಷೆಯಲ್ಲಿಯೇ ಹೆಸರಿಸುತ್ತಾ ಕನ್ನಡದ ವಿವರಣೆಯನ್ನು ನೀಡಿದರು.

ಇನ್ನು ಕೆಲವೇ ಕೆಲವು ಸಂದರ್ಭಗಳಲ್ಲಿ ಮಾತ್ರ ಕನ್ನಡ ಬಳಸುವುದನ್ನು ಕಾಣಬಹುದು. ಉದಾಹರಣೆಗೆ ಟಿಬೆಟಿಯನ್ನರು ಹೋಟೆಲ್‌ಗಳಲ್ಲಿ 'ಟೀ ತಂದುಕೊಡು' ಎಂಬುದನ್ನು 'ಹೇ ಚಾಯ್ ಕೋಡು/ತಾ' ಎನ್ನುತ್ತಾರೆ. ಈ ಉಚ್ಚಾರಣೆಯಲ್ಲಿ ಪೂರ್ಣರೂಪದ ಉಚ್ಚಾರಣೆಗಳಿರುವುದಿಲ್ಲ. ಇದೇ ರೀತಿಯ ಇನ್ನೊಂದು ಸಂದರ್ಭದಲ್ಲಿ ಟಿಬೆಟಿಯನ್ನರು ತಮ್ಮ ಕ್ಯಾಂಪ್‌ಗಳಿಗೆ ಹೋಗಲು ಆಟೋ/ಕಾರುಗಳ ಚಾಲಕರೊಂದಿಗೆ ಈ ಕೆಳಗಿನಂತೆ ಮಾತನಾಡಿಸುವುದನ್ನು ಕಾಣಬಹುದು. ಉದಾಹರಣೆಗೆ 'ಹೇ ನಿಮ್ಮದು ಬಾಡಿಗೆ ಬರುತ್ತೆ, ಎಷ್ಟು ಬಾಡಿಗೆ?' ಈ ರೀತಿಯಾಗಿ ಕೆಲವೇ ಕೆಲವರು ಮಾತನಾಡುವುದನ್ನು ಕಾಣಬಹುದು.

ಈ ಮೇಲಿನ ಬೇರೆ ವ್ಯಾವಹಾರಿಕ ಮತ್ತು ಸಾಮಾಜಿಕ ಪರಿಸರದ ವಿವರಣೆಗಳನ್ನು ಗಮನಿಸಿದಾಗ ನಮಗೆ ತಿಳಿದುಬರುವ ಅಂಶಗಳೆಂದರೆ ಬಹುತೇಕ ಟಿಬೆಟಿಯನ್ನರು ತಮ್ಮ ಭಾಷೆಯ ಕೆಲವು ವ್ಯಾವಹಾರಿಕ ಪದಗಳನ್ನು ಕನ್ನಡಿಗರಿಗೆ ಕಲಿಸಿದ್ದಾರೆ. ಕನ್ನಡಿಗರು ತಮ್ಮ ಜೀವನ ಅವಶ್ಯಕತೆಗೋ/ಆಂತರಿಕ ಒತ್ತಡಕ್ಕೋ ಟಿಬೆಟ್ಟನ್ನು ವ್ಯವಹಾರಕ್ಕೆ ತಕ್ಕಂತೆ ಕಲಿತಿರುತ್ತಾರೆ. ಇನ್ನು ಟಿಬೆಟಿಯನ್ನರೂ ಕೂಡ ಅಲ್ಪ ಸ್ವಲ್ಪ ಕನ್ನಡ ಕಲಿತರೂ, ಅದು ಪೂರ್ಣರೂಪದ ಉಚ್ಚಾರಣೆಗಳಿರುವುದಿಲ್ಲ. ಹೀಗೆ ಸಾಮಾಜಿಕ ಪರಿಸರದಲ್ಲಿ ಕನ್ನಡಿಗರು ಮತ್ತು ಟಿಬೆಟಿಯನ್ನರು ತಮ್ಮ ವ್ಯವಹಾರಗಳನ್ನು ನಿರ್ವಹಿಸುತ್ತಾರೆ.

**ಕ್ಯಾಂಪ್‌ನ ಜನರು ತಮ್ಮ ಭಾಷೆ ಮತ್ತು ಸಂಸ್ಕೃತಿಯನ್ನು ಉಳಿಸಿಕೊಂಡಿರುವುದು**

ಈಗಾಗಲೇ ನಾವು ತಿಳಿದಿರುವಂತೆ ಕ್ಯಾಂಪ್‌ನಲ್ಲಿ ಎಲ್ಲಾ ನಿರಾಶ್ರಿತರು ಟಿಬೆಟ್ ಭಾಷೆಯನ್ನು ಎಲ್ಲಾ ಪರಿಸರಗಳಲ್ಲಿಯೂ ಬಳಸುತ್ತಾರೆ. ಇನ್ನು ಅವರದ್ದೇ ಭಾಷೆಯ ಮೂಲಕ ಅವರನ್ನು ಗುರುತಿಸುವುದಾದರೆ ಕ್ಯಾಂಪ್‌ನ ಜನರ ವ್ಯಕ್ತಿನಾಮಗಳ ಮೂಲಕ ಗಮನಿಸಬಹುದು.

| ಪುರುಷರ ವ್ಯಕ್ತಿನಾಮಗಳು | ಸ್ತ್ರೀಯರ ವ್ಯಕ್ತಿನಾಮಗಳು |
|---|---|
| ಟೆಂಜಿನ್ ಕುಂಸಂಗ್ | ಸೋನಂ |
| ಟೆಂಜಿನ್ ದುಮಶಿಜ್ | ಲಾಹಮೊ |
| ಟೆಂಜಿನ್ ಟಶಿ | ದೊಲ್ಮ ಯಂಜ್ಮೊ |
| ಶಿಮೋಸ್ | ಕಲ್ಸಂಗ್ ದೊಲ್ಮ |
| ಕಾರ್ ಮರ್ ಸೆಕಿಂಗ್ | ದೆಚೆನ್ ಲಹ್ಮೊ |
| ಕುಂಚಿಕೊ ಪಾಸ್ಕಮ್ | ಟೆಂಡಲ್ |

ಈ ಮೇಲಿನ ವ್ಯಕ್ತಿನಾಮಗಳನ್ನು ಗಮನಿಸಿದಾಗ ಸಾಮಾನ್ಯವಾಗಿ ಬೇರೆ ಭಾಷೆಗಳಲ್ಲಿ ಕಂಡುಬರುವಂತೆ ವಾರ್ಗಿಕ ಮತ್ತು ನಿರ್ದಿಷ್ಟಗಳನ್ನು ಕಾಣಬಹುದು. ಪುರುಷ ವ್ಯಕ್ತಿನಾಮದ ಉದಾಹರಣೆಯಲ್ಲಿ 'ಟೆಂಜಿನ್' ಎನ್ನುವುದನ್ನು ಸಾಮಾನ್ಯವಾಗಿ ಕಾಣಬಹುದು. ಟೆಂಜಿನ್ ಎನ್ನುವುದು ಟಿಬೆಟ್ ಜನರಲ್ಲಿ ಒಂದು ಸಮುದಾಯ. ಆ ಸಮುದಾಯದವರನ್ನು ಗುರುತಿಸಲು ಹೆಸರಿನ ಮುಂದೆ ಟೆಂಜಿನ್ ಎಂದು ಬಳಸಲಾಗುತ್ತದೆ. ಅದೇ ರೀತಿಯಲ್ಲಿ 'ಧೋರ್ಜಿ'ಯು ಒಂದು ಸಮುದಾಯ ಸೂಚಕ. ಅದನ್ನು ವ್ಯಕ್ತಿನಾಮಗಳಲ್ಲಿ ಬಳಸುವುದನ್ನು ಕಾಣಬಹುದು. ಈ ಸಮುದಾಯಗಳು ಸಹ ತಮ್ಮ ಹಿರಿಯರ ಹೆಸರುಗಳನ್ನು ಹಾಗೂ ದೇವರ ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಡುವ ಆಚರಣೆಯನ್ನು ಹೊಂದಿದ್ದಾರೆ. ತಮ್ಮ ಸಂಸ್ಕೃತಿ ಮೂಲ ಹೆಸರುಗಳಂತೆ ಈಗಲೂ ಬಳಕೆ ಮಾಡುತ್ತಿದ್ದಾರೆ.

ಕ್ಯಾಂಪ್‌ನ ಆವರಣದಲ್ಲಿ ವಾರ್ಷಿಕವಾಗಿ 'ಗಾಯಿಪೂಜೆ' ಎಂಬ ಹಬ್ಬವನ್ನು ನವೆಂಬರ್ ತಿಂಗಳಿನಲ್ಲಿ ಆಚರಣೆ ಮಾಡುತ್ತಾರೆ. ಹಾಗೆಯೇ 'ಲೋಸರ್' ಎನ್ನುವ ಪ್ರಮುಖ ಹಬ್ಬವನ್ನು ಆಚರಣೆ ಮಾಡುತ್ತಾರೆ. ಇದನ್ನು ಫೆಬ್ರುವರಿ ತಿಂಗಳಲ್ಲಿ ಆಚರಿಸುತ್ತಾರೆ. ಇದು ಟಿಬೆಟಿಯನ್ನರಿಗೆ ಹೊಸ ವರ್ಷ ಪ್ರಾರಂಭವಾಗುವ ಹಬ್ಬವಾಗಿದೆ. ಈ ಹಬ್ಬದಂದು ಹೋಳಿ ಆಟವನ್ನು ಆಡುತ್ತಾರೆ.

ಕ್ಯಾಂಪಿನಲ್ಲಿರುವ ಲಾಮಾಗಳ ಕುರಿತ ಆಚರಣೆ ಮತ್ತು ನಂಬಿಕೆಗಳು: ಬೌದ್ಧ ಜನರ ಧಾರ್ಮಿಕ ನಂಬಿಕೆಯಲ್ಲಿ ಕುಟುಂಬಕ್ಕೆ ಜನಿಸಿದ ಮೊದಲ ಅಥವಾ ಎರಡನೇ ಮಗುವನ್ನು ದೇವರಿಗೆ ಅರ್ಪಿಸುವ ಮೂಲಕ ಬೌದ್ಧ ಸನ್ಯಾಸಿ ದೀಕ್ಷೆಯನ್ನು ಕೊಡುತ್ತಾರೆ. ಆಗ ಆ ಮಕ್ಕಳಿಗೆ ಸಂಪ್ರದಾಯದಂತೆ 'ಲಾಮಾ' ಎಂಬ ಹೆಸರು ಬರುತ್ತದೆ. ಈ ಲಾಮಾಗಳ ಜೀವನವ್ಯವಸ್ಥೆಯು ಸಾಮೂಹಿಕ ಜೀವನವ್ಯವಸ್ಥೆಯಾಗಿದ್ದು, ಇವರ ಸಂಪೂರ್ಣ ಆರ್ಥಿಕ ವೆಚ್ಚವನ್ನು ಲಾಮಾಗಳ ಸಂಘ ನೋಡಿಕೊಳ್ಳುತ್ತದೆ. ಇವರು ತಮ್ಮ ಮನೆಯೊಂದಿಗೆ ಯಾವುದೇ ಸಂಬಂಧ ಹೊಂದಿರುವುದಿಲ್ಲ. ಇವರ ಆಹಾರ, ಶೈಕ್ಷಣಿಕ ಕ್ರಮವನ್ನು, ವಸತಿಯನ್ನು ಸಂಘವೇ ಪೂರೈಸುತ್ತದೆ. ಪುರುಷ ಲಾಮಾಗಳು ಕೆಂಪು ಬಟ್ಟೆ, ಶಾಲು, ಹಳದಿ ಬಣ್ಣದ ಮೈಯಂಗಿಯನ್ನು ತೊಡುತ್ತಾರೆ. ಹಾಗೆಯೇ ಸ್ತ್ರೀ ಲಾಮಾಗಳು 'ಚುಭ' ಎನ್ನುವ ವಸ್ತ್ರವನ್ನು ತೊಡುತ್ತಾರೆ. ಈ ಲಾಮ ಪದ್ಧತಿಯು ಸ್ವ ಒಪ್ಪಿಗೆ ಮೇರೆಗೆ ನಡೆಯುವ ಪದ್ಧತಿಯಾಗಿದ್ದು, ಒತ್ತಾಯವಿರುವುದಿಲ್ಲ. ೨೪ವರ್ಷ ದಾಟಿದ ನಂತರ ಲಾಮಾ ಪದ್ಧತಿಯಿಂದ ಬಿಡುಗಡೆ ಹೊಂದಿ ವೈವಾಹಿಕ ಸ್ಥಿತಿಯನ್ನು ಹೊಂದಬಹುದು. ಹೀಗೆ ಲಾಮಗಳು ತಮ್ಮ ಆಚರಣೆಗಳನ್ನು ಕ್ಯಾಂಪಿನಲ್ಲಿ ಪಾಲಿಸುತ್ತಾ ಬಂದಿದ್ದಾರೆ.

ಕ್ಯಾಂಪ್‌ನಲ್ಲಿ ತಮ್ಮ ಧರ್ಮವನ್ನು ಸಾರುವ ಮಠಗಳನ್ನು ಕಾಣಬಹುದು. ಅವುಗಳನ್ನು ಟಿಬೆಟ್‌ನಲ್ಲಿ ಕಾಣುವಂತೆ ಬಹುವರ್ಣದ ಮತ್ತು ಬೃಹತ್ ವಿಶಾಲವಾದ ಕಟ್ಟಡಗಳನ್ನು ಕಾಣಬಹುದು. ಎತ್ತರದ ಶಿಖರಗಳು ಮತ್ತು ಗೋಡೆಗಳ ಮೇಲೆ ಟಿಬೆಟ್‌ನ ಧರ್ಮಗ್ರಂಥಗಳಲ್ಲಿ ಬರುವ ದೇವರುಗಳ ವರ್ಣಚಿತ್ರಗಳನ್ನು ಕಾಣಬಹುದು.

ಸ್ಥಳೀಯ ಪರಿಸರದ ಪ್ರಭಾವ ಕ್ಯಾಂಪ್‌ನ ಮೇಲಾಗಿರುವುದುನ್ನು ಗುರುತಿಸಬಹುದು. ೧೯೬೬ರಲ್ಲಿ ಕ್ಯಾಂಪ್‌ನಲ್ಲಿರುವ ಲಾಮಾಗಳು ಮೃತಪಟ್ಟರೆ ಅವರನ್ನು ಅಂತ್ಯಕ್ರಿಯೆ ಮಾಡುತ್ತಿದ್ದು ಮೂಲ ಟಿಬೆಟ್‌ನ

ಆಚರಣೆಗಳಂತೆ ಅಂದರೆ ಲಾಮಾಗಳು ಮೃತಪಟ್ಟರೆ ಟಿಬೆಟ್‌ನಲ್ಲಿ ಎತ್ತರವಾದ ಪ್ರದೇಶದಲ್ಲಿ ದೇಹವನ್ನು ಇರಿಸಿ ಬರುತ್ತಿದ್ದರು. ನಂತರ ಮೂಳೆಗಳನ್ನು ಕುಟ್ಟಿ ಪುಡಿ ಮಾಡಿ ಗಾಳಿಗೆ ಎಸೆಯುತ್ತಿದ್ದರು. ಇದು ಪಂಚಭೂತಗಳಲ್ಲಿ ಲೀನವಾಗುವಿಕೆ ಪ್ರತೀಕವೆಂದು ಹೇಳಲಾಗುತ್ತದೆ. ಕ್ಯಾಂಪ್‌ಗಳಲ್ಲಿಯೂ ಕೂಡ ಮೃತ ಲಾಮಾಗಳ ದೇಹವನ್ನು ಕಾಡಿನ ಮಧ್ಯೆ ಯಾವುದಾರೂ ಮರಕ್ಕೆ ಕಟ್ಟಿ ಬರುತ್ತಿದ್ದರು. ಇದು ಸ್ಥಳೀಯ ಜನರಿಗೆ ತೊಂದರೆಯುಂಟಾಗಿ ಸ್ಥಳೀಯರು ವಿರೋಧ ವ್ಯಕ್ತಪಡಿಸಿದಾಗ ಅಲ್ಲಿನ ಜಿಲ್ಲಾಧಿಕಾರಿಯು ಈ ರೀತಿಯ ಅಂತ್ಯಕ್ರಿಯೆಯನ್ನು ನಿಷೇಧಿಸಿದ್ದಾರೆ. ಹೀಗೆ ಕೆಲವು ಆಚರಣೆಗಳು ಸ್ಥಳೀಯ ಪರಿಸರದವರಿಗೆ ತೊಂದರೆ ಉಂಟುಮಾಡಿದಾಗ ಅವುಗಳನ್ನು ಬದಲಾಯಿಸಿಕೊಂಡಿರುವ ಉದಾಹರಣೆಗಳು ಸಿಗುತ್ತವೆ.

ಒಟ್ಟಾರೆಯಾಗಿ ಹೇಳುವುದಾದರೆ ಸಾಮಾಜಿಕವಾಗಿ ಕನ್ನಡ ಪರಿಸರದಲ್ಲಿ ಇರುವ ಇವರು ತಮ್ಮ ಭಾಷೆ ಮತ್ತು ತಮ್ಮದೇ ಭಾಷಿಕ ಸಮುದಾಯವನ್ನು ನಿರ್ಮಿಸಿಕೊಂಡು ಕ್ಯಾಂಪ್‌ಗಳಲ್ಲಿ ಜೀವಿಸುತ್ತಿರುವುದನ್ನು ಕಾಣಬಹುದಾಗಿದೆ. ಸಾಮಾನ್ಯ ಅಭಿಪ್ರಾಯದಲ್ಲಿ ಬಹುಪಾಲು ಭಾಷೆಗಳು ಮತ್ತು ಅವರ ಸಾಂಸ್ಕೃತಿಕ ಅಂಶಗಳು ಪಲ್ಲಟವಾಗುತ್ತವೆ ಎಂದು ತಿಳಿಯಲಾಗಿದೆ. ಆದರೆ ಟಿಬೆಟಿಯನ್ನರ ಈ ವಲಸೆಯಿಂದಾಗಿ ಭಾಷೆ ಮತ್ತು ಸಂಸ್ಕೃತಿಯಲ್ಲಿ ಯಾವುದೇ ಹೆಚ್ಚಿನ ಪಲ್ಲಟಗಳು ಆಗಿಲ್ಲ. ಈ ರೀತಿಯಾಗಿ ಬೇರೆ ಭಾಷಿಕ ಸಮುದಾಯದ ಮಧ್ಯೆ ವಾಸವಾಗಿರುವ ಇವರು ಇತರೆ ಭಾಷಿಕರಂತೆಯೇ ವಾಸವಾಗಿದ್ದು, ತಮ್ಮದೇ ಭಾಷೆ, ಧರ್ಮ, ಸಂಸ್ಕೃತಿ, ಶಿಕ್ಷಣಪದ್ಧತಿ, ಬರವಣಿಗೆಯನ್ನು ಮೌಖಿಕ ಮತ್ತು ಆಚರಣೆಯ ನೆಲೆಯಲ್ಲಿ ಸಂಗೋಪನೆ ಮಾಡುತ್ತಿದ್ದಾರೆ. ಈ ಎಲ್ಲಾ ಒಟ್ಟು ಸ್ವರೂಪದಲ್ಲಿ ಟಿಬೆಟ್ ನಿರಾಶ್ರಿತರ ಕ್ಯಾಂಪನ್ನು ಭಾಷಾದ್ವೀಪವಾಗಿ ಗುರುತಿಸಬಹುದು.

**ಬಂಗಾಳಿ ನಿರಾಶ್ರಿತರ ಕ್ಯಾಂಪ್‌ಗಳು**

ರಾಯಚೂರು ಜಿಲ್ಲೆಯ ಸಿಂಧನೂರು ತಾಲ್ಲೂಕಿನಲ್ಲಿರುವ ಈ ಕ್ಯಾಂಪ್‌ಗಳನ್ನು ಒಟ್ಟು ೮ ಸಣ್ಣ ಸಣ್ಣ ಕ್ಯಾಂಪ್‌ಗಳಾಗಿ ವಿಭಾಗಿಸಿ ಜನವಸತಿ ಪ್ರದೇಶಗಳನ್ನಾಗಿ ಮಾಡಲಾಗಿದೆ. ಇವುಗಳನ್ನು ಇಂದಿರಾ ಗಾಂಧಿ ನಿರಾಶ್ರಿತ ಕೇಂದ್ರಗಳು ಎಂದು ಕರೆಯುತ್ತಾರೆ.

ಬಂಗಾಳದ ವಿಭಜನೆಯ ಕಾರಣ ಮತ್ತು ಸನ್ನಿವೇಶವನ್ನು ಗಮನಿಸಿದರೆ ವಿಭಜನೆ ರಾಜಕೀಯಕ್ಕೆ ಕಾರಣ ತಿಳಿದುಬರುತ್ತದೆ. ಬ್ರಿಟಿಷ್ ವೈಸರಾಯ್ ಲಾರ್ಡ್ ಕರ್ಜನ್ ೧೯೦೫ರಲ್ಲಿ ಇದನ್ನು ಮೊದಲು ಮುನ್ನೆಲೆಗೆ ತರುತ್ತಾನೆ. ಇದು ನಂತರದ ಕಾಲಲಗಲಿ ವಿವಿಧ ಕಾರಣಗಳಿಗಾಗಿ ವಿಭಜನೆಯಾಗುವ ಆ ಮೂಲಕ ಭಾರತದ ಪಂಜಾಬ್, ಮುಂಬೈ ಪ್ರದೇಶಗಳಿಗೆ ಬಂಗಾಳದ ಜನರು ವಲಸೆ ಬಂದಿರುವುದನ್ನು ಗಮನಿಸಬಹುದು. ೧೯೦೫ರಲ್ಲಿ ಬಂಗಾಳವನ್ನು ಪೂರ್ವ ಬಂಗಾಳ ಮತ್ತು ಪಶ್ಚಿಮ ಬಂಗಾಳ ಎಂದು ವಿಭಜಿಸಬೇಕು. ಆ ಮೂಲಕ ಆಡಳಿತವನ್ನು ಸರಳೀಕರಣಗೊಳಿಸಬೇಕು ಎಂಬ ನಿರ್ಧಾರದಿಂದ ಇದನ್ನು ತಿಳಿಸಲಾಗುತ್ತದೆ. ಆದರೆ ಇಂದು ಪೂರ್ವ ಬಂಗಾಳ ಮತ್ತು ಪಶ್ಚಿಮ ಬಂಗಾಳವು ಹಿಂದೂ ಮುಸ್ಲಿಮರ ಪ್ರತ್ಯೇಕತೆಯನ್ನು ರೂಪಿಸುತ್ತಿರುವ ಭಾವನೆ ಹೆಚ್ಚುತ್ತದೆ. ಈವರೆಗೂ ಬ್ರಿಟಿಷ್‌ರ ವಿರುದ್ಧ ಬಂಗಾಳದ

ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದಾಗ ಈ ಎರಡೂ ಧರ್ಮಗಳಲ್ಲಿ ವಿಭಜನೆ ಇರಲಿಲ್ಲ. ಆದರೆ ಆಡಳಿತದ ಕಾರಣಕ್ಕಾಗಿ ಬಂಗಾಳವನ್ನು ವಿಭಜಿಸುವ ನಿರ್ಧಾರಕ್ಕೆ ಬರಲಾಯಿತು. ಇದನ್ನು ಬೇರೆ ರೀತಿಯಲ್ಲಿ ಉಪಯೋಗ ಪಡೆದುಕೊಂಡ ಕೆಲವರು ಹಿಂದೂ ಮತ್ತು ಮುಸಿಮರ ಯುದ್ಧದ ರೀತಿಯಲ್ಲಿ ಮತ್ತು ಹಿಂದೂಗಳಿಗೆ ಆಡಳಿತ ಸರ್ಕಾರಗಳು ಸರಿಯಾದ ರೀತಿಯಲ್ಲಿ ನಡೆಸಿಕೊಳ್ಳುತ್ತಿಲ್ಲ ಎಂಬ ಭಾವನೆಗಳನ್ನು ರೂಢಿಸಿದರು. ಇದು ಸ್ಥಳೀಯರ ಮನಸ್ಸಿನಲ್ಲಿ ವೈರತ್ವದ ಭಾವನೆ ಮೂಡಿಸಿತು. ಇದಕ್ಕೆ ಸರಿಯಾಗಿ ವಿಭಜನೆ ಕಾಲಕ್ಕೆ ಪಾಕಿಸ್ತಾನವು ತನ್ನ ಹಿತಾಸಕ್ತಿಯನ್ನು ತೋರಿತು. ಇದರೊಂದಿಗೆ ಹೈದರಾಬಾದಿನ ನಿಜಾಮನು ಬಂಗಾಳದ ವಿಭಜನೆಯನ್ನು ವಿರೋಧಿಸಿದ್ದನು. ಭಾರತವು ಬಂಗಾಳ ವಿಭಜನೆ ಕುರಿತು ಪ್ರಕ್ರಿಯೆ ನೀಡಿತು. ಅಂತಿಮವಾಗಿ ಬಂಗಾಳದ ವಿಭಜನೆಯ ನಂತರ ಜನಸಂಖ್ಯೆ ವರ್ಗಾವಣೆ ಹೆಚ್ಚುತ್ತದೆ. ಅಂದರೆ ಲಕ್ಷಾಂತರ ಹಿಂದೂಗಳು ಪೂರ್ವ ಬಂಗಾಳದಿಂದ ಭಾರತಕ್ಕೆ ವಲಸೆ ಬರುತ್ತಾರೆ. ಇವರಲ್ಲಿ ಬಹುಪಾಲು ಜನರು ಪಶ್ಚಿಮ ಬಂಗಾಳದಲ್ಲಿ ನೆಲೆಸಿದ್ದರು. ಇವರು ಭಾರತದ ಅಸ್ಸಾಂ, ತ್ರಿಪುರಾ ಮತ್ತು ಇತರೆ ರಾಜ್ಯಗಳಲ್ಲಿ ವಲಸೆ ಬಂದು ನೆಲೆಸುತ್ತಾರೆ. ಹೀಗೆ ಪಂಜಾಬಿನಲ್ಲಿ ನಿರಾಶ್ರಿತರ ಆಗಮನದಿಂದಾಗಿ ಬಿಕ್ಕಟ್ಟು ಉಂಟಾಗಿ ಕೋಮುಗಲಭೆಗಳು ಪ್ರಾರಂಭವಾಗುತ್ತವೆ. ಇದರಿಂದ ಪಂಜಾಬಿನಿಂದಲೂ ಜನರು ವಲಸೆ ಹೋಗುವುದು ಪ್ರಾರಂಭವಾಯಿತು. ಹೀಗೆ ಪರಸ್ಪರ ವಲಸೆ ಆರಂಭವಾಗಿ ಇಂದಿಗೂ ಈ ವಲಸೆಯು ನಿಂತಿಲ್ಲ. ಭಾರತವು ಬಾಂಗ್ಲಾದಿಂದ ಬರುವ ವಲಸಿಗರನ್ನು ಅಕ್ರಮ ವಲಸಿಗರು ಎಂದು ಗುರುತಿಸುತ್ತದೆ. ೧೯೫೧ರ ಜನಗಣತಿಯಂತೆ ಈಸ್ಟ್ ಬಂಗಾಳದಿಂದ ೨.೫೩ ಮಿಲಿಯನ್ ನಿರಾಶ್ರಿತರು ಬಂದಿರುವ ಕುರಿತು ತಿಳಿಸುತ್ತದೆ. ೧೯೭೩ರ ಹೊತ್ತಿಗೆ ಈ ವಲಸಿಗರ ಸಂಖ್ಯೆಯು ೬ ಮಿಲಿಯನ್‌ಗಿಂತಲೂ ಹೆಚ್ಚಾಗಿದೆ ಎಂದು ಇತಿಹಾಸಕಾರರು ಹೇಳುತ್ತಾರೆ.

**ಬಂಗಾಳಿ ನಿರಾಶ್ರಿತರ ಕ್ಯಾಂಪ್**

ಇವರು ೧೯೬೦ರಲ್ಲಿ ಬಂಗಾಳದಿಂದ ನಿರಾಶ್ರಿತರಾಗಿ ಭಾರತಕ್ಕೆ ಬಂದು ನೆಲೆಸಿದರು. ಈ ಸಮಯದಲ್ಲಿ ವಲಸಿಗರ ಸಂಖ್ಯೆಯು ೧೦,೦೦೦ ಜನ. ಪ್ರಸ್ತುತ ಅವರ ಜನಸಂಖ್ಯೆಯು ೨೫,೦೦೦ಕ್ಕೂ ಹೆಚ್ಚಿದೆ ಎಂದು ತಿಳಿಸುತ್ತಾರೆ. ಒಟ್ಟು ಈ ಕ್ಯಾಂಪ್‌ನಲ್ಲಿ ೧ರಿಂದ ೫ ನಂಬರ್ ಕ್ಯಾಂಪ್‌ಗಳಲ್ಲಿ ಜನರು ವಾಸವಾಗಿದ್ದಾರೆ. ಇವರು ಒಂದನೇ ಕ್ಯಾಂಪನ್ನು 'ಬರ್ಮಾ ಕ್ಯಾಂಪ್' ಎಂದು ಕರೆಯುತ್ತಾರೆ. ಇಲ್ಲಿ ತಮಿಳು ಭಾಷಿಕರು ವಾಸವಾಗಿದ್ದಾರೆ. ಇವರು ಶ್ರೀಲಂಕದಿಂದ ವಲಸೆ ಬಂದು ನೆಲೆಸಿರುವ ವಲಸಿಗರಾಗಿದ್ದಾರೆ. ಎರಡನೇ ಕ್ಯಾಂಪನ್ನು 'ಸರ್ವಜ್ಞಪುರ' ಎಂದು ಕರೆಯುತ್ತಾರೆ. ಇಲ್ಲಿ ಬಂಗಾಳಿ ಭಾಷಿಕರ ಜೊತೆಯಲ್ಲಿ ಕೆಲವು ಕನ್ನಡಿಗರು ವಾಸವಾಗಿದ್ದಾರೆ. ಮೂರನೇ ಕ್ಯಾಂಪನ್ನು 'ರವೀಂದ್ರ ನಗರ' ಎಂದು ಕರೆಯುತ್ತಾರೆ. ಬಂಗಾಳಿ ಭಾಷಿಕರು ವಾಸವಾಗಿದ್ದಾರೆ. ನಾಲ್ಕನೇ ಕ್ಯಾಂಪನ್ನು 'ವಿವೇಕಾನಂದ/ವಿವೇಕನಗರ' ಎಂದು ಕರೆಯುತ್ತಾರೆ. ಇಲ್ಲಿ ಬಂಗಾಳಿ ಭಾಷಿಕರು ವಾಸವಾಗಿದ್ದಾರೆ. ಐದನೇ ಕ್ಯಾಂಪನ್ನು ರಾಮಕೃಷ್ಣ ಪಲ್ಲಿ' ಎಂದು ಕರೆಯುತ್ತಾರೆ. ಇಲ್ಲಿ ಬಂಗಾಳಿಗರ ಜೊತೆಯಲ್ಲಿ ಆಂಧ್ರದಿಂದ ಬಂದಿರುವ ತೆಲುಗು ಭಾಷಿಕರು

ಸೇರಿದ್ದಾರೆ. ಈ ರೀತಿಯಾಗಿ ಪ್ರತಿ ಕ್ಯಾಂಪ್‌ಗೂ ತನ್ನದೇ ಹೆಸರಿಟ್ಟುಕೊಂಡಿರುವುದನ್ನು ಕಾಣಬಹುದು. ಇವರಿಗೆ ಭಾರತದ ಪೌರತ್ವವನ್ನು ನೀಡಲಾಗಿದೆ. ಇವರಿಗೆ ಚುನಾವಣೆ ಗುರುತಿನ ಚೀಟಿ, ಮತದಾನದ ಹಕ್ಕು ಹಾಗೂ ಭಾರತೀಯರಿಗೆ ನೀಡಿರುವ ಎಲ್ಲಾ ರೀತಿಯ ಸವಲತ್ತುಗಳನ್ನು ನೀಡಲಾಗಿದೆ.

* ಕ್ಯಾಂಪ್‌ನ ಪರಿಸರದಲ್ಲಿ ಬಂಗಾಳಿ ಭಾಷೆಯನ್ನು ಬಳಸುತ್ತಾರೆ. ಮನೆಯಲ್ಲಿನ ಮಹಿಳೆಯರು ಮತ್ತು ಹಿರಿಯ ವಯಸ್ಕರು ಬಂಗಾಳಿ ಭಾಷೆಯನ್ನು ಪೂರ್ಣ ಪ್ರಮಾಣದಲ್ಲಿ ಬಳಕೆ ಮಾಡುತ್ತಾರೆ.

* ಕ್ಯಾಂಪ್‌ನ ಹೊರವಲಯದಲ್ಲಿ ವ್ಯವಹಾರಕ್ಕಾಗಿ, ದುಡಿಮೆಗಾಗಿ ಇದರಲ್ಲಿ ದುಡಿಯುವಂತಹವರು ಹಾಗೂ ವ್ಯಾಪಾರ ಮಾಡುವಂತಹವರು ಕನ್ನಡ ಮಾತನಾಡುತ್ತಾರೆ. ಈ ಕನ್ನಡ ಭಾಷೆಯ ಉಚ್ಚಾರಣೆಯಲ್ಲಿ ಪೂರ್ಣರೂಪದ ಸ್ಪಷ್ಟತೆ ಇಲ್ಲದೇ ಹೋದರೂ ಅರ್ಥ ಮಾಡಿಕೊಳ್ಳಲು, ವ್ಯವಹರಿಸಲು ಯಾವುದೇ ಸಮಸ್ಯೆ ಕಂಡುಬರುವುದಿಲ್ಲ.

* ಮಾತಿನ ಮಧ್ಯೆ ಬಂಗಾಳಿ, ಹಿಂದಿ ಭಾಷೆಯ ಪದಗಳನ್ನು ಬಳಕೆ ಮಾಡುತ್ತಾರೆ. ಇದರಲ್ಲಿ ವಿಶೇಷವಾಗಿ ಸಾಂಸ್ಕೃತಿಕ ಪದಗಳನ್ನು ಬಳಸುತ್ತಾರೆ.

* ಕನ್ನಡದ ಪರಿಸರದಲ್ಲಿರುವ ಇವರುಗಳು ಸಾಮಾಜಿಕವಾಗಿ ಮತ್ತು ವ್ಯಾವಹಾರಿಕವಾಗಿ ಕನ್ನಡಿಗರೊಂದಿಗೆ ಬೆರತುಹೋಗಿದ್ದಾರೆ. ೧೯೬೦ರಲ್ಲಿ ಬಂದ ಮೊದಲ ತಲೆಮಾರಿನ ವ್ಯಕ್ತಿಗಳು ಮಾತ್ರ ಕನ್ನಡವನ್ನು ಹೆಚ್ಚು ಬಳಕೆ ಮಾಡುವುದಿಲ್ಲ. ಆದರೆ ಪ್ರಸ್ತುತ ಇರುವ ಎರಡು ಮತ್ತು ಮೂರನೇಚ ತಲೆಮಾರಿನ ಮಕ್ಕಳು ಕನ್ನಡದ ಪರಿಸರದೊಂದಿಗೆ ಬೆಳೆದು ಕನ್ನಡವನ್ನು ಮಾತನಾಡುತ್ತಾರೆ. ಆದರೆ ಇವರ ಕನ್ನಡವನ್ನು ನಿರರ್ಗಳವಾಗಿ ಮತ್ತು ಸ್ಪಷ್ಟವಾಗಿ ಮಾತನಾಡದೇ ಇರುವುದನ್ನು ಕಾಣಬಹುದು. ಇವರನ್ನು ಕನ್ನಡಿಗರ ಪರಿಸರದ ದೃಷ್ಟಿಯಿಂದ ನೋಡುವುದಾದರೆ; ಸಿಂಧನೂರು ಪ್ರದೇಶದ ಜನರು ಇವರನ್ನು ಬಂಗಾಳಿ ಜನರು, ಬಂಗಾಳಿಯವರು ಅಥವಾ ಕ್ಯಾಂಪ್‌ನವರು ಎಂದು ಗುರುತಿಸುತ್ತಾರೆ. ಇವರೊಂದಿಗೆ ಕನ್ನಡ ಮಾತನಾಡುತ್ತಾರೆ. ಅಲ್ಲದೇ ಬಂಗಾಳಿ ಕ್ಯಾಂಪಿನ ಜನರನ್ನು ಕನ್ನಡಿಗರ ಕೃಷಿ ಚಟುವಟಿಕೆಗಳಲ್ಲಿ, ಕಟ್ಟಡ ಕಟ್ಟುವಲ್ಲಿ ಇತರೆ ಸಾಮಾನ್ಯ ವ್ಯಾಪಾರ ಚಟುವಟಿಕೆಯಲ್ಲಿ ಕಾಣಬಹುದು. ಆದರೆ ಕ್ಯಾಂಪಿನ ಬಹುತೇಕ ಜನರು ವ್ಯಾಪಾರಕ್ಕಾಗಿ ಕರ್ನಾಟಕದ ಅಥವಾ ದಕ್ಷಿಣ ಭಾರತದ ಬೇರೆ ಬೇರೆ ಪ್ರದೇಶಗಳಿಗೆ ಹೋಗಿ ಬರುತ್ತಿರುತ್ತಾರೆ. ಆ ಮೂಲಕ ತಮ್ಮ ಆರ್ಥಿಕತೆಯನ್ನು ಕಂಡುಕೊಂಡಿದ್ದಾರೆ.

* ಬಂಗಾಳಿ ಕ್ಯಾಂಪಿನ ಮಕ್ಕಳು ಕನ್ನಡ ಮಾಧ್ಯಮ ಶಾಲೆಗಳಲ್ಲಿ ಓದುತ್ತಿದ್ದು, ಅವರು ಕನ್ನಡದಲ್ಲಿಯೇ ಉನ್ನತ ವಿದ್ಯಾಭ್ಯಾಸ ಮಾಡುತ್ತಿರುವುದನ್ನು ಕಾಣಬಹುದು. ಆದರೆ ಕ್ಯಾಂಪ್ ನಂಬರ್ ೪ರಲ್ಲಿ ಪ್ರಾಥಮಿಕ ಶಾಲೆಯ ಶಿಕ್ಷಕರ ಮಾಹಿತಿಯಂತೆ ಮಕ್ಕಳ ಕನ್ನಡ ಭಾಷೆಯ ಅಭ್ಯಾಸವು ೧ರಿಂದ ೫ನೇ ತರಗತಿಯವರೆಗೂ ಪೂರ್ಣ ಪ್ರಮಾಣದ ಕಲಿಕೆಯಾಗುವುದಿಲ್ಲ ಎನ್ನುತ್ತಾರೆ. ಇದಕ್ಕೆ ಕಾರಣ ಅವರು ಕೇವಲ ಅಧ್ಯಯನಕ್ಕಾಗಿ ಕನ್ನಡವನ್ನು ಕಲಿಯುವುದಾಗಿದೆ. ಆದರೆ ಮನೆಯಲ್ಲಿ ಮತ್ತು ಕ್ಯಾಂಪ್‌ನ ಆವರಣದಲ್ಲಿ ಕನ್ನಡವನ್ನು ಬಳಸುವುದಿಲ್ಲ. ಆದ್ದರಿಂದ ಅವರಿಗೆ ಕನ್ನಡ ಭಾಷೆಯ ಬಳಕೆ ಮತ್ತು ಕಲಿಕೆಯನ್ನು ಅಷ್ಟು ಬೇಗನೆ

ಗ್ರಹಿಸಲು ಸಾಧ್ಯವಾಗದು. ಆದರೆ ಹಿರಿಯ ಪ್ರಾಥಮಿಕ ಶಾಲೆ ಮತ್ತು ಪ್ರೌಢಶಾಲೆಗೆ ಸಿಂಧನೂರು ಮತ್ತು ಇತರೆಡೆಗಳಲ್ಲಿ ಹೋಗುವುದರಿಂದ ಪರಿಸರಕ್ಕೆ ತಕ್ಕಂತೆ ಕನ್ನಡವನ್ನು ಕಲಿಯುತ್ತಾರೆ. ಈ ಎಲ್ಲದರ ಮಧ್ಯೆ ಆ ಭಾಷಿಕರು ಸರ್ಕಾರದೊಂದಿಗೆ ಹೋರಾಟ ಮಾಡಿ ಬಂಗಾಳಿಯನ್ನು ಒಂದು ಭಾಷೆಯಾಗಿ ಕಲಿಸಲು ಶಾಲೆಗಳಲ್ಲಿ ಅವಕಾಶ ನೀಡುವಂತೆ ಸರ್ಕಾರದ ಮೇಲೆ ಒತ್ತಡ ಹೇರಿ ಯಶ ಕಂಡಿದ್ದಾರೆ. ಇದರಿಂದಾಗಿ ಕ್ಯಾಂಪ್‌ನ ಶಾಲೆಯಲ್ಲಿ ಬಂಗಾಳಿಯನ್ನು ಒಂದು ಭಾಷೆಯಾಗಿ ಕಲಿಯಲು ಇತ್ತೀಚೆಗೆ ಅವಕಾಶ ಸಿಕ್ಕಿದೆ.

* ದೈನಂದಿನ ಬದುಕಿನ ಕ್ರಮದಲ್ಲಿ ಕೃಷಿ, ಕೂಲಿ ಕೆಲಸ, ವ್ಯವಹಾರ ಮಾಡುವ ಇವರು ಬಿದಿರಿನಿಂದ ಮಾಡಿದ ಗುಡಿಸಿಲುಗಳಲ್ಲಿ ವಾಸವಾಗಿದ್ದಾರೆ.

* ನಿತ್ಯದ ಆಹಾರದಲ್ಲಿ ಮೀನು ಹೆಚ್ಚಾಗಿ ಸೇವಿಸುವ ಇವರು ಬಂಗಾಳದಲ್ಲಿ ಬಳಸುವ ರೀತಿಯಲ್ಲಿಯೇ ಆಹಾರಗಳನ್ನು ಬಳಕೆ ಮಾಡುತ್ತಿದ್ದಾರೆ. ಅವುಗಳ ರಸಗುಲ್ಲ, ಸಂದೇಶ್, ಮಿಸ್ಟಿದೋಯಿ(ಮಿಸ್ಟಿ ಎಂದರೆ ಸಿಹಿ, ದೋಯಿ ಎಂದರೆ ಮೊಸರು) ಹೀಗೆ ಇವರು ತಮ್ಮ ಆಹಾರ ಸಂಸ್ಕೃತಿಯನ್ನು ಹಾಗೆಯೇ ಉಳಿಸಿಕೊಂಡಿದ್ದಾರೆ.

* ದಿನನಿತ್ಯದ ಬದುಕಿನ ಕ್ರಮದಲ್ಲಿ ತೊಡುವ ಉಡುಪುಗಳನ್ನು ಗಮನಿಸಿದಾಗ ತಮ್ಮ ಆಚರಣೆಯನ್ನು ಉಳಿಸಿಕೊಂಡಿರುವುದು ಕಾಣಬಹುದು. ಪುರುಷರು ತೆಳುವಾದ ಬಿಳಿ ಬಣ್ಣದ ಬಟ್ಟೆಗಳನ್ನು ಹೆಚ್ಚಾಗಿ ಧರಿಸುತ್ತಾರೆ. ಸ್ತ್ರೀಯರು ಕರ್ನಾಟಕದಲ್ಲಿ ಬಳಸುವಂತೆ ಸೀರೆ ಮತ್ತು ರವಿಕೆ ಬಳಸುತ್ತಾರೆ. ಆದರೆ ಇವರಲ್ಲಿ ಮಹಿಳೆಯು ವಿವಾಹಿತಳು ಎಂದು ತಿಳಿಯಲು ಕೈಯಲ್ಲಿ ಬಿಳಿ ಬಣ್ಣದ ಬಳೆ ಧರಿಸಿರುತ್ತಾಳೆ. ಇದು ಅವರ ಗುರುತು. ವಿಧವೆಯಾಗಿದ್ದರೆ ಬಿಳಿ ವಸ್ತ್ರವನ್ನು ಧರಿಸಿರುತ್ತಾಳೆ. ವಿಧವೆಯು ಸಿಂಧೂರ, ಬಳೆಗಳನ್ನು ತೊಡುವುದಿಲ್ಲ. ಹೀಗೆ ಕೆಲವು ಆಚರಣೆಗಳನ್ನು ಗಮನಿಸಬಹುದು.

* ಕ್ಯಾಂಪ್‌ನಲ್ಲಿ ಬಳಸುವ ಭಾಷಾಂಶಗಳನ್ನು ಗಮನಿಸುವುದಾದರೆ ಸಂಬಂಧವಾಚಕಗಳನ್ನು ತಮ್ಮ ಬಂಗಾಳದಲ್ಲಿ ಬಳಸುವಂತೆಯೇ ಬಳಸುತ್ತಾರೆ.

ಉದಾಹರಣೆಗೆ

ತಾಯಿಗೆ – 'ಮಾ' ಎಂಬ ರೂಪವನ್ನು

ತಂದೆಗೆ – 'ಬಾಬ' ಎಂಬ ರೂಪವನ್ನು

ತಮ್ಮ – 'ಬಾಯಿ' ಎಂಬ ರೂಪವನ್ನು

ಅಣ್ಣ – 'ದಾದ' ಎಂಬ ರೂಪವನ್ನು

ತಂಗಿ – 'ಬೋನ್' ಎಂಬ ರೂಪವನ್ನು

ಅಕ್ಕ – 'ದೀದಿ' ಎಂಬ ರೂಪವನ್ನು

ಅತ್ತೆ – 'ಶಾಶುರಿ/ಶಶುಡಿ ಮಾ'(ಹೆಂಡತಿಯ ತಾಯಿ)

ತಂದೆಯ ತಂದೆಗೆ 'ಠಾಕೂರ್ ದಾದ' ಎಂಬ ರೂಪವನ್ನು

ಅಮ್ಮನ ತಂದೆಗೆ – 'ಅಜ, ಅಜಿ' ಎಂಬ ರೂಪವನ್ನು

ತಾಯಿಯ ತಂಗಿಗೆ – 'ಪಿಶಿಮ'(ಚಿಕ್ಕಮ್ಮ) ಎಂಬ ರೂಪವನ್ನು

ತಂದೆಯ ತಾಯಿಗೆ – 'ಶುಶುರಾಮಾಸಾಯಿ' ಎಂಬ ರೂಪವನ್ನು

ಹೀಗೆ ಬಳಕೆ ಮಾಡುವುದನ್ನು ಕಾಣಬಹುದು. ಇಲ್ಲಿ ಹಿಂದಿಯಲ್ಲಿ ಬಳಸುವಂತೆ ಕೆಲವು ಸಂಬಂಧವಾಚಕಗಳನ್ನು ಬಳಸುತ್ತಾರೆ. ಪಿಶಿಮ, ಶಾಶುರಿ/ಶಶುಡಿ ಎಂಬ ಕೆಲವು ರೂಪಗಳು ವಿಶೇಷವೆನಿಸುತ್ತವೆ.

* ಕ್ಯಾಂಪ್‌ನಲ್ಲಿರುವ ಬಂಗಾಳಿ ಭಾಷಿಕರ ನಾಮಪದಗಳ ಈ ರೀತಿಯಾಗಿವೆ. ಇವರಲ್ಲಿಯೂ ಕೂಡ ನಿರ್ದಿಷ್ಟ, ವಾರ್ಗಿಕ ರಚನೆಗಳಿರುವುದನ್ನು ಕಾಣಬಹುದು. ಮಂಡಲ, ವಿಶ್ವಾಸ, ರಾಯ, ಸನ, ಮುಖರ್ಜಿ, ಸರ್ಕಾರ, ಬೈರಾಗಿ, ಚಟರ್ಜಿ ಬಾರ್, ರಫ್ತಾನ್, ರಾಜಮಣಿ ಅಡ್ಡ ಹೆಸರುಗಳು(ಸರ್ ನೇಮ್) ಈಗಲೂ ಬಳಕೆಯಲ್ಲಿವೆ.

ಇವುಗಳಲ್ಲಿ ವಿಶೇಷವೆಂದರೆ ಬೈರಾಗಿ, ಬಸಾಳ್ ಎಂಬ ಅಡ್ಡಹೆಸರುಗಳು ಕ್ಷತ್ರಿಯರನ್ನು ಕುರಿತು. ಮುಖರ್ಜಿ, ಚಟರ್ಜಿ ಎಂಬ ಅಡ್ಡಹೆಸರುಗಳು ಬ್ರಾಹ್ಮಣರನ್ನು ಕುರಿತು ಹೆಸರುಗಳು ಸೂಚಿಸುತ್ತವೆ. ಇದು ನಾಮಪದಗಳಿಂದ ಅವರ ಜಾತಿಯನ್ನು ತಿಳಿಯುವುದು ರೂಢಿಯಲ್ಲಿದೆ.

**ವ್ಯಕ್ತಿನಾಮಗಳಿಗೆ ಉದಾಹರಣೆ**

ಸುಜೋರ್ಕಾಂತ(ಪು)

ಗೌರಪದೋ(ಪು)

ಕಾಲಿಮದೋಸಾನಾ(ಪು)

ಗ್ಯಾನೇಂದ್ರ ಮಂಡಲ(ಪು)

ದೇಬ್ರತೋ(ಪು)

ರಬಿನಗೋಲ್ದಾರ್(ಪು)

ಸಂಧ್ಯ ಭೈರಾಣಿ(ಸ್ತ್ರೀ)

ಅನ್ನಾ(ಸ್ತ್ರೀ)

ಪಾನ್ನಾ(ಸ್ತ್ರಿ)

ಮೈನಾವತಿ(ಸ್ತ್ರೀ)

ಬಿಪ್ಲಬ ಬೈರಾಗಿ(ಪು)

ಬಿದ್ಯಾದರ ಬಿಸ್ವಾಸ್(ಪು)



ಲೋತಿಕಾ ಸರ್ಕಾರ(ಸ್ತ್ರೀ)

ಹೀಗೆ ಕನ್ನಡಿಗರ ಪರಿಸರಕ್ಕಿಂತಲೂ ಭಿನ್ನವಾಗಿರುವ ಹೆಸರುಗಳನ್ನು ಇಲ್ಲಿ ಕಾಣಬಹುದು. ಹೀಗೆ ಇವರ ಮೂಲ ವ್ಯಕ್ತಿನಾಮಗಳನ್ನು ಇಂದಿಗೂ ಬಳಕೆ ಮಾಡುತ್ತಿರುವುದನ್ನು ಕಾಣಬಹುದು. ಆ ಮೂಲಕ ತಮ್ಮ ಭಾಷಿಕ ಅಂಶಗಳನ್ನು ಮತ್ತು ಸಾಂಸ್ಕೃತಿಕ ಅಂಶಗಳನ್ನು ಸಂಗೋಪನೆ ಮಾಡುವುದನ್ನು ಕಾಣಬಹುದು.

ಸಿಂಧನೂರು ಪ್ರದೇಶದಲ್ಲಿಯೇ ಬಂಗಾಳಿ ಕ್ಯಾಂಪ್‌ನ ಜನರು ಆಚರಿಸುವ ದುರ್ಗಾ ಪೂಜೆ ಹೆಚ್ಚು ಪ್ರಸಿದ್ಧಿಯನ್ನು ಪಡೆದಿದೆ. ಅಂದರೆ ಕರ್ನಾಟಕದಲ್ಲಿ ಆಚರಿಸುವ ದಸರಾ ಹಬ್ಬವನ್ನು ಇವರು ದುರ್ಗಾ ಪೂಜೆ ಎಂದು ಆಚರಿಸುತ್ತಾರೆ. ಇವರು ಸಹ ಒಂಬತ್ತು ದಿನಗಳ ಹಬ್ಬವನ್ನು ಆಚರಿಸುತ್ತಾರೆ. ಇಲ್ಲಿನ ವಿಶೇಷವೆಂದರೆ ಪ್ರತಿವರ್ಷವೂ ದೇವಿಯ ಮೂರ್ತಿಯನ್ನು ನಿರ್ಮಿಸುತ್ತಾರೆ. ಈ ವರ್ಷ ನಿರ್ಮಿಸಿದ ಮೂರ್ತಿಯನ್ನು ಮುಂದಿನ ವರ್ಷ ವಿಸರ್ಜಿಸುತ್ತಾರೆ. ಹೀಗೆ ಒಂಬತ್ತು ದಿನ ವಿಶೇಷ ಪೂಜೆ ಇರುತ್ತದೆ.

ಒಟ್ಟಾರೆ ಈ ಎಲ್ಲಾ ಅಂಶಗಳನ್ನು ಕೇಂದ್ರೀಕರಿಸಿ ಹೇಳುವುದಾದರೆ ಬಂಗಾಳಿ ಜನರು ತಮ್ಮ ಮೂಲಪ್ರದೇಶವನ್ನು ಬಿಟ್ಟು ಬಂದು ಬೇರೆ ಭಾಷಿಕ ಸಮುದಾಯದ ಮಧ್ಯೆ ವಾಸ ಮಾಡುತ್ತಿದ್ದಾರೆ. ಆದರೂ ತಮ್ಮ ಭಾಷೆ, ಸಂಸ್ಕೃತಿ, ಜೀವನಕ್ರಮವನ್ನು ಮೂಲದ ರೀತಿಯಲ್ಲಿಯೇ ಈಗಲೂ ಬದುಕುತ್ತಿದ್ದಾರೆ. ಅವರ ಸಮುದಾಯದ ಬಹುತೇಕ ಅಂಶಗಳ ದಾಖಲೀಕರಣವು ಬಂಗಾಳಿ ಭಾಷೆಯಲ್ಲಿಯೇ ನಡೆಯುತ್ತಿದೆ. ಹೀಗೆ ಈ ಕ್ಯಾಂಪ್‌ಗಳು ಭಾಷಾದ್ವೀಪದ ಸ್ವರೂಪವನ್ನು ಪಡೆದಿವೆ.

**೩.೨.೩. ಭಾಷಾದ್ವೀಪದ ಸ್ವರೂಪ**

ಭಾಷಾದ್ವೀಪಗಳು ಹೇಗೆ ರೂಪುಗೊಳ್ಳುತ್ತವೆ? ಅವುಗಳ ರಚನೆಯ ಹಿನ್ನೆಲೆಯಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ಕಾರಣಗಳು ಹೇಗೆ ಕೆಲಸ ಮಾಡುತ್ತವೆ ಎಂಬುದನ್ನು ಚರ್ಚಿಸಲಾಗಿದೆ. ಆದರೆ ಭಾಷಾದ್ವೀಪಗಳನ್ನು ಅವುಗಳ ರಚನೆ, ಭಾಷಾಬಳಕೆಯ ಹಿನ್ನೆಲೆ ಮತ್ತು ಭೌಗೋಳಿಕ ಹಿನ್ನೆಲೆಯಲ್ಲಿ ಸ್ವರೂಪವನ್ನು ತಿಳಿಯುವುದು ಅವಶ್ಯಕವಾಗಿದೆ. ಇದರಿಂದ ಭಾಷಾದ್ವೀಪಗಳ ನಿರ್ದಿಷ್ಟ ಸ್ವರೂಪವನ್ನು ಕಂಡುಕೊಳ್ಳಬಹುದು. ಈಗಾಗಲೇ ತಿಳಿದಿರುವಂತೆ ಭಾಷಾದ್ವೀಪಗಳು ಹಲವು ಕಾರಣಗಳಿಂದ ವಲಸೆ ಪ್ರಕ್ರಿಯೆಯಿಂದ ರೂಪುಗೊಳ್ಳುತ್ತವೆ. ಇಂತಹ ಭಾಷಾದ್ವೀಪಗಳು ಭಾಷಿಕವಾಗಿ ಹೇಗೆ ರಚನೆಗೊಂಡಿರುತ್ತವೆ? ಭಾಷಾದ್ವೀಪಗಳ ಭಾಷಿಕ ಬಳಕೆಯಲ್ಲಿ ಸಾಮಾಜಿಕ, ಬಾಹ್ಯ ಪರಿಸರದ ಅಧಿಕಾರಗಳು ಹೇಗೆ ಒತ್ತಡ ಏರುತ್ತವೆ? ಈ ಎಲ್ಲಾ ಅಂಶಗಳನ್ನು ಮೀರಿಯೂ ಭಾಷಾದ್ವೀಪಗಳಲ್ಲಿನ ಭಾಷಿಕರು ತಮ್ಮ ಭಾಷೆಯನ್ನು ಹೇಗೆ ಉಳಿಸಿಕೊಳ್ಳುತ್ತಾರೆ? ಅಲ್ಲದೆ ಭಾಷಾದ್ವೀಪಗಳಲ್ಲಿನ ಭಾಷಾ ಬಳಕೆಯ ಸಾಮಾಜಿಕ ಸಂದರ್ಭ, ಬಾಹ್ಯ ಪರಿಸರದೊಂದಿಗೆ ಭಾಷಾಬಳಕೆ, ಸಾಮಾಜಿಕ ಭಿನ್ನಾಂಶಗಳ ಮೂಲಕ ಭಾಷಾದ್ವೀಪಗಳಲ್ಲಿ ಭಾಷೆಯನ್ನು ಕಂಡುಕೊಳ್ಳುವುದು ಇಲ್ಲಿ ಮುಖ್ಯವಾಗಿದೆ.

**೩.೨.೩.ಅ. ಭಾಷಾಬಳಕೆಯ ಹಿನ್ನೆಲೆಯಲ್ಲಿ**

ಭಾಷಾಬಳಕೆಯ ಹಿನ್ನೆಲೆಯಲ್ಲಿ ಭಾಷಾದ್ವೀಪಗಳ ಸ್ವರೂಪವನ್ನು ಕಂಡುಕೊಳ್ಳುವುದು. ಅಂದರೆ ಕರ್ನಾಟಕದ ವಿವಿಧ ಭಾಗಗಳಲ್ಲಿ ಭಾಷಾದ್ವೀಪಗಳಲ್ಲಿ ನೆಲೆಸಿರುವವರು ಸಂಪರ್ಕಕ್ಕಾಗಿ ಯಾವ ಭಾಷೆಗಳನ್ನು ಬಳಸುತ್ತಾರೆ? ಭಾಷಾದ್ವೀಪಗಳಲ್ಲಿ ಭಾಷಾಬಳಕೆಯು ಏಕಭಾಷಿಕವಾಗಿರುತ್ತದೆಯೋ, ದ್ವಿಭಾಷಿಕವಾಗಿರುತ್ತದೆಯೋ

ಅಥವಾ ಬಹುಭಾಷಿಕವಾಗಿರುತ್ತದೆಯೋ ಎಂಬುದನ್ನು ಸಾಮಾಜಿಕ ಸಂದರ್ಭಗಳು, ಬಳಕೆಯ ನೆಲೆಗಳನ್ನು ಅನುಲಕ್ಷಿಸಿ ಚರ್ಚಿಸುವುದು. ಭಾಷಾದ್ವೀಪಗಳು ತಮ್ಮ ಮೂಲ ಭಾಷೆಯಲ್ಲಿಯೇ ಜೀವನ ಸಾಗಿಸುತ್ತವೆ. ಅವು ಬಾಹ್ಯಪರಿಸರದ ಒತ್ತಡಕ್ಕೆ ಒಳಗಾಗಿರುವುದಿಲ್ಲ ಎನ್ನುವುದು ಒಂದು ಸಂಗತಿಯಾದರೆ, ದ್ವೀಪಗಳಲ್ಲಿ ವಾಸಿಸುವ ಜನರು ತಮ್ಮ ಮೂಲಸ್ಥಳಗಳಲ್ಲಿ ಏಕಭಾಷೆಯನ್ನು ಕಲಿತಿರುತ್ತಾರೆಯೇ? ಅವರು ಪರಿಸರದ ಭಾಷೆಯನ್ನು ಬಿಟ್ಟು ಬೇರೆ ಭಾಷೆಗಳನ್ನು ಕಲಿಯುತ್ತಾರೆಯೇ? ಅದು ಯಾವ ಕಾರಣಕ್ಕಾಗಿ? ಎಂಬ ಭಾಷಿಕ ಮಾಹಿತಿಗಳನ್ನು ತಿಳಿಯುವ ಮೂಲಕ ಭಾಷಾದ್ವೀಪಗಳ ಭಾಷಾಬಳಕೆಯ ಹಿನ್ನೆಲೆಯಲ್ಲಿ ಸ್ವರೂಪವನ್ನು ತಿಳಿಯುವುದು.

### ೩.೨.೩.೮.೧. ಏಕಭಾಷೆ

ಭಾಷಾಧ್ಯಯನದ ಶಿಸ್ತಿನಲ್ಲಿ ಜನರು ಎಷ್ಟು ಭಾಷೆಗಳನ್ನು ಬಳಕೆ ಮಾಡುತ್ತಾರೆ ಎಂಬುದರ ಆಧಾರದ ಮೇಲೆ ಭಾಷಿಕರನ್ನು ವರ್ಗೀಕರಿಸಲಾಗುತ್ತದೆ. ಹಾಗೆಯೇ ಒಂದು ಭಾಷೆಯನ್ನು ಬಳಸುವವರಿಗೆ ಏಕಭಾಷಿಕರು ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಇವರು ಸಾಮಾಜಿಕ ಸಂದರ್ಭ ಮತ್ತು ಖಾಸಗಿ ಸಂದರ್ಭಗಳಲ್ಲಿ ಒಂದೇ ಭಾಷೆಯನ್ನು ಬಳಕೆ ಮಾಡುತ್ತಿರುತ್ತಾರೆ. ಪ್ರಸ್ತುತ ಏಕಭಾಷಿಕರು ಸಿಗುವುದು ಕಡಿಮೆಯಾಗಿದೆ. ಆಧುನಿಕತೆ, ವಲಸೆ, ಶಿಕ್ಷಣದ ಕಾರಣಕ್ಕಾಗಿ ಒಂದೇ ಪ್ರದೇಶದಲ್ಲಿ ಕನಿಷ್ಠ ಎರಡು ಅಥವಾ ಮೂರು ಭಾಷೆಗಳನ್ನು ಕಲಿಯು ಅವಕಾಶವಿದೆ. ಅದ್ದರಿಂದ ಏಕಭಾಷಿಕರಾಗಿ ಉಳಿಯುವುದು ಕಷ್ಟಸಾಧ್ಯವಾಗಿದೆ. ಆದರೂ ಕೆಲವೇ ಕೆಲವು ಸಂದರ್ಭಗಳಲ್ಲಿ ಏಕಭಾಷಿಕರಾಗಿ ಉಳಿದುಕೊಳ್ಳುವ ಸಮುದಾಯದ ಜನರನ್ನು ಕಾಣಬಹುದು. ಇದಕ್ಕೆ ಕಾರಣ ಇವರು ಬೇರೆ ಭಾಷಾಬಳಕೆ ಮಾಡಲು ಅಥವಾ ಕಲಿಯಲು ಸಾಮಾಜಿಕ ಒತ್ತಡಗಳು ಇಲ್ಲದೇ ಇರುವುದು. ಉದಾಹರಣೆಗೆ ಒಬ್ಬ ಮನುಷ್ಯನು ತಾನು ಹುಟ್ಟಿದ ಸ್ಥಳದಲ್ಲಿ ಒಂದು ಭಾಷೆಯನ್ನು ಕಲಿತು, ತನ್ನ ಎಲ್ಲಾ ಅಗತ್ಯಗಳನ್ನು ಅದೇ ಭಾಷೆಯಿಂದ ಪೂರೈಸಿಕೊಂಡರೆ ಅವನಿಗೆ ಇನ್ನೊಂದು ಭಾಷೆಯನ್ನು ಕಲಿಯುವ ಅವಶ್ಯಕತೆ ಬರುವುದಿಲ್ಲ. ಇನ್ನು ಕೆಲವು ಸಂದರ್ಭಗಳಲ್ಲಿ ಅವನಿರುವ ಸ್ಥಳಗಳಲ್ಲಿ ಬೇರೆ ಬೇರೆ ಭಾಷೆಯ ಸಂಪರ್ಕಗಳಿದ್ದು, ಅವುಗಳನ್ನು ಅನಿವಾರ್ಯವಾಗಿ ಸಂಪರ್ಕಿಸಲೇ ಬೇಕು ಎಂಬ ಒತ್ತಡಕ್ಕೆ ಸಿಲುಕಿದಾಗ ಆ ಭಾಷೆಯನ್ನು ಬಳಸಲೇ ಬೇಕಾಗುತ್ತದೆ. ಹೀಗೆ ಏಕಭಾಷಿಕರಾಗಿ ಉಳಿಯಲು ಬೇರೆ ಭಾಷೆಯ, ಸಮಾಜದ ಒತ್ತಡಗಳು ಇಲ್ಲದ ಕಾರಣಕ್ಕೆ ಮತ್ತು ಮತ್ತೊಂದು ಭಾಷೆಯ ಪರಿಸರದ ಸಂಪರ್ಕ ಇಲ್ಲದಿರುವುದೇ ಆಗಿದೆ.

ಈ ರೀತಿಯ ಭಾಷಿಕ ಸ್ವರೂಪ ಭಾಷಾದ್ವೀಪಗಳಲ್ಲಿ ಇರುವುದನ್ನು ಕಾಣಬಹುದು. ಅಂದರೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗಿ ನೆಲೆಸಿದ ನಂತರ ತಮ್ಮ ಸಂಸ್ಕೃತಿ ಮತ್ತು ಭಾಷೆಯನ್ನು ಕಟ್ಟಿಕೊಂಡು ಸಮುದಾಯವನ್ನು ಬೆಳೆಸುತ್ತಾರೆ. ಈ ಸಮುದಾಯದ ಬಹುತೇಕರು ಏಕಭಾಷಿಕರಾಗಿರುತ್ತಾರೆ. ಇನ್ನು ಕೆಲವರು ಬಾಹ್ಯ ಪರಿಸರದ ಸಂಪರ್ಕದಿಂದ ಸೌಲಭ್ಯಗಳನ್ನು ಮತ್ತು ಅವಕಾಶಗಳನ್ನು ಪಡೆಯುತ್ತಾರೆ. ಆದ್ದರಿಂದ ಏಕಭಾಷಿಕರಾಗಿ ಉಳಿದ ಜನರಿಗೆ ಬೇರೆ ಭಾಷೆಯ ಸಂಪರ್ಕಕ್ಕೆ

ಸಿಗದೇ ಹೋಗಿ ಅವರು ಏಕಭಾಷಿಕರಾಗಿ ಉಳಿಯುವ ಸಾಧ್ಯತೆಗಳಿವೆ. 'ಎರಡು ಭಾಷಿಕ ಸಮುದಾಯಗಳಲ್ಲಿ ಕೆಲವು ಮಂದಿ ಮಾತ್ರ ದ್ವಿಭಾಷಿಕರಾಗುತ್ತಾರೆ. ಉಳಿದವರಿಗೆ ದ್ವಿಭಾಷಿಕರಾಗುವ ಅವಶ್ಯಕತೆ ಇಲ್ಲವಾದರೆ, ಅಂಥ ಸಂದರ್ಭಗಳು ಒದಗಿ ಬಾರದಿದ್ದರೆ ಅವರು ಏಕಭಾಷಿಕರಾಗಿಯೇ ಉಳಿಯುತ್ತಾರೆ. ಸಾಮಾಜಿಕ ಸಂಪರ್ಕ ಕಡಿಮೆ ಇರುವ ಹೆಂಗಸರು, ಕಲಿಯುವ ಸಾಮರ್ಥ್ಯ ಮಾಸಿದ ವೃದ್ಧರು ಹೀಗೆ ಏಕಭಾಷಿಕರಾಗಿ ಉಳಿಯುವ ಸಂದರ್ಭಗಳು ಹೆಚ್ಚು'(ನಾರಾಯಣ ಕೆ. ವಿ., ದ್ವಿಭಾಷಿಕತೆ, ಪುಟ. ೩) ಎಂದು ಹೇಳುತ್ತಾರೆ.

'ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಹೆಚ್ಚು ತೆರೆದುಕೊಳ್ಳುವವರು ಪುರುಷರೇ. ಆದ್ದರಿಂದ ಇವರಲ್ಲಿ ತೆಲುಗು ಭಾಷೆಯನ್ನು ಉಳಿಸಿಕೊಂಡು ಬರುತ್ತಿರುವವರು ಮಹಿಳೆಯರೇ ಆಗಿದ್ದಾರೆ. ತೆಲುಗು ಏಕಭಾಷಿಕರು ಸಹ ಮಹಿಳೆಯರಲ್ಲೇ ಹೆಚ್ಚು. ಈ ಸಮುದಾಯದ ಮೊದಲ ತಲೆಮಾರುಗಳಲ್ಲಿ ಕಾಣುತ್ತಾರೆ. ವೈವಾಹಿಕ ಸಂಬಂಧದಿಂದ ಬಂದ ಮಹಿಳೆಯರಲ್ಲಿ ಹೆಚ್ಚಿನ ಕನ್ನಡದ ಸಾಮಾಜಿಕ ಸಂದರ್ಭಗಳಿಗೆ ಒಳಗಾಗದ ಮಹಿಳೆಯರು ತೆಲುಗು ಏಕಭಾಷಿಕರಿರುವುದನ್ನು ಕಾಣಲಾಗಿದೆ'(ಭಾಗ್ಯಲಕ್ಷ್ಮಿ ಎಂ., ಬಳ್ಳಾರಿ ಪರಿಸರದ ಕನ್ನಡ-ತೆಲುಗು ದ್ವಿಭಾಷಿಕತೆ: ಸಮಾಜೋಭಾಷಿಕ ಅಧ್ಯಯನ, ಪುಟ.೧೨೩)

ಈ ಹಿನ್ನೆಲೆಯಲ್ಲಿ ಭಾಷಾದ್ವೀಪಗಳಲ್ಲಿ ಏಕಭಾಷಿಕರಾಗಿ ಉಳಿಯುವ ಬಹುತೇಕರು ಮಹಿಳೆಯರೇ ಆಗಿರುತ್ತಾರೆ. ಅಲ್ಲದೆ ವೃದ್ಧರು, ವಲಸೆ ಬಂದ ಮೊದಲ ತಲೆಮಾರಿನವರು ಏಕಭಾಷಿಕರಾಗಿರುವುದನ್ನು ಕಾಣಬಹುದು. ಮಹಿಳೆಯರು ಏಕಭಾಷಿಕರಾಗಿ ಉಳಿದಿರುವುದಕ್ಕೆ ಖಾಸಗಿ ಆವರಣದಲ್ಲಿ ಭಾಷಾಬಳಕೆ, ಸಾಮಾಜಿಕವಾಗಿ ಭಾಷಾಬಳಕೆ ಮತ್ತು ವ್ಯಾವಹಾರಿಕ ಸಂದರ್ಭಗಳಲ್ಲಿ ಭಾಷಾಬಳಕೆಯನ್ನು ಗಮನಿಸಿದರೆ ತಿಳಿಯಬಹುದು.

ಭಾಷಾದ್ವೀಪಗಳಲ್ಲಿ ಏಕಭಾಷಿಕರಾಗಿರುವುದಕ್ಕೆ ಉದಾಹರಣೆಗಳನ್ನು ಗಮನಿಸುವುದಾದರೆ, ಉತ್ತರ ಭಾರತದಿಂದ ಬಂದಿರುವ ಶೇಟ್ ಸಮುದಾಯಗಳು ಕರ್ನಾಟಕದ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಗುಂಪು ಗುಂಪುಗಳಾಗಿ ವಾಸಿಸುತ್ತಿರುವುದನ್ನು ಕಾಣಬಹುದು. ಇವರು ವಾಸಿಸುವ ಪ್ರದೇಶಗಳಲ್ಲಿ ಶೇಟ್ ವ್ಯಾಪಾರಿ ಸಮುದಾಯಗಳು ವಾಸಿಸುತ್ತಾರೆ. ಇವರು ತಮ್ಮ ಮೂಲಭಾಷೆ, ಸಂಸ್ಕೃತಿ ಮತ್ತು ವ್ಯಾವಹಾರಿಕ ಸಂದರ್ಭಗಳನ್ನು ಸೃಷ್ಟಿಸಿಕೊಂಡಿರುತ್ತಾರೆ. ಆದ್ದರಿಂದ ಈ ಸಮುದಾಯದ ಮಹಿಳೆಯರು ಖಾಸಗೀ ಆವರಣದಲ್ಲಿ ತಮ್ಮ ಭಾಷೆಯಾದ ಹಿಂದಿ ಬಳಕೆ ಮಾಡುತ್ತಾರೆ. ನಂತರ ಸಾಮಾಜಿಕವಾಗಿ ದೇವಾಲಯಗಳಲ್ಲಿ, ಸಭೆ ಸಮಾರಂಭಗಳಲ್ಲಿ ಭಾಗವಹಿಸಿದಾಗ ಇವರ ಸಮುದಾಯದ ಜನರು ಹೆಚ್ಚು ಭಾಗವಹಿಸುವುದರಿಂದ ಇವರ ಭಾಷೆಯಲ್ಲೇ ಮಾತನಾಡುತ್ತಾರೆ. ಇನ್ನು ವ್ಯಾವಹಾರಿಕ ಸಂದರ್ಭಗಳಲ್ಲಿ ಇವರದೇ ವ್ಯಾಪಾರಿ ಅಂಗಡಿಗಳೊಂದಿಗೆ ಇವರು ವ್ಯವಹಾರ ನಡೆಸುವುದು ಹೆಚ್ಚು. ಆದ್ದರಿಂದ ಈ ಮೂರು ಸಂದರ್ಭಗಳಲ್ಲಿಯೂ ಈ ಸಮುದಾಯದ ಮಹಿಳೆಯರು ತಮ್ಮ ಮೂಲಭಾಷೆಯನ್ನೇ ಬಳಸುವುದು ಹೆಚ್ಚು. ಇವರು ಈ ಸಂದರ್ಭಗಳನ್ನು ಬಿಟ್ಟು ಬೇರೆ ಭಾಷಿಕರನ್ನು ಸಂಪರ್ಕಿಸುವ, ವ್ಯವಹರಿಸುವ ಸಂದರ್ಭಗಳು ದೊರಕದೆ ಇರುವುದರಿಂದ ಏಕಭಾಷಿಕರಾಗಿಯೇ ಉಳಿಯುತ್ತಾರೆ. ಇನ್ನು ಕೆಲವು ಸಂದರ್ಭಗಳಲ್ಲಿ ಕೆಲವು ಮಹಿಳೆಯರು ಅಧ್ಯಯನ

ಮತ್ತು ಸಾಮಾಜಿಕವಾಗಿ ಅಂಗಡಿಗಳಲ್ಲಿ ವ್ಯವಹಾರ ನಿರ್ವಹಿಸುವಾಗ ಹಿಂದಿ, ಅಲ್ಪಸ್ವಲ್ಪ ಕನ್ನಡ ಪದಗಳನ್ನು ಬಳಸಿ ವ್ಯವಹಾರ ಮಾಡುವುದನ್ನು ಕಾಣಬಹುದು.

ತಮಿಳು ಭಾಷಾದ್ವೀಪಗಳಲ್ಲಿ ಮಹಿಳೆಯರು ಮತ್ತು ವಯೋವೃದ್ಧರು ಸೇರಿದಂತೆ ಕೆಲವರು ಏಕಭಾಷಿಕರಾಗಿರುವುದನ್ನು ಕಾಣಬಹುದು. ಮಹಿಳೆಯರಲ್ಲಿ ಮೊದಲ ತಲೆಮಾರಿನ ಮಹಿಳೆಯರು ಮತ್ತು ಪ್ರಸ್ತುತ ತಮಿಳುನಾಡಿನಿಂದ ವೈವಾಹಿಕ ಸಂಬಂಧದಿಂದಾಗಿ ಇಲ್ಲಿಗೆ ಬಂದಿರುವವರು ತಮಿಳು ಭಾಷೆಯನ್ನು ಬಳಕೆ ಮಾಡುವ ಮೂಲಕ ಏಕಭಾಷಿಕರಾಗಿ ಉಳಿದಿರುವುದನ್ನು ಕಾಣಬಹುದು. ಇವರಿಗೆ ಕನ್ನಡ ಭಾಷೆಯನ್ನು ಕಲಿಯುವ ಮತ್ತು ಬಳಸುವ ಯಾವುದೇ ಒತ್ತಡಗಳಿಲ್ಲ. ಕಾರಣ ಇವರು ಸಾಮಾಜಿಕ ಕಾರ್ಯಗಳಲ್ಲಿ ಪಾಲ್ಗೊಳ್ಳುವುದು ತಮಿಳು ಭಾಷಿಕ ಆವರಣದಲ್ಲಿ ಮಾತ್ರ. ಕನ್ನಡಿಗರ ಪರಿಸರದಲ್ಲಿ ಪಾಲ್ಗೊಳ್ಳುವುದಿಲ್ಲ. ಅದರಲ್ಲಿ ಧಾರ್ಮಿಕ ಆವರಣದಲ್ಲಿ, ಹಬ್ಬ ಮತ್ತು ಸಾಂಸ್ಕೃತಿಕ ಆಚರಣೆಯಲ್ಲಿ, ವ್ಯಾವಹಾರಿಕ ಸಂದರ್ಭಗಳಲ್ಲಿ ತಮಿಳು ಭಾಷಿಕರ ಆವರಣದಲ್ಲಿ ತಮ್ಮ ಸೌಲಭ್ಯಗಳನ್ನು ಪಡೆಯುವುದು ಕಾಣಬಹುದು. ಇನ್ನು ಕೆಲವು ಮಹಿಳೆಯುರು ಹಿರಿಯೂರು ಪರಿಸರದಲ್ಲಿ ತೋಟದ ಮನೆಯಲ್ಲಿ ವಾಸವಾಗಿರುವುದರಿಂದ ಅವರು ಕನ್ನಡದ ಪರಿಸರದ ಸಂಪರ್ಕಕ್ಕೆ ಬರುವುದೇ ಇಲ್ಲ. ಈ ರೀತಿಯ ತೋಟದ ಮನೆಯಲ್ಲಿರುವ ಮಹಿಳೆಯರು ಮತ್ತು ಮಕ್ಕಳು ಏಕಭಾಷಿಕರಾಗಿ ಉಳಿದುಕೊಂಡಿದ್ದಾರೆ. ಇವರ ಬಹುತೇಕ ಅವಶ್ಯಕತೆಗಳನ್ನು ಮನೆಯ ಪುರುಷರು ಪೂರೈಸುತ್ತಾರೆ. ಆದ್ದರಿಂದ ಇವರು ಕನ್ನಡದ ಪರಿಸರಕ್ಕೆ ಬರುವುದು ಕಡಿಮೆ. ಕೆಲವೇ ಮಹಿಳೆಯರು ಮಾತ್ರ(ಕೃಷಿ ಉತ್ಪನ್ನ ಮಾರಲು) ಕನ್ನಡದ ಪರಿಸರದೊಂದಿಗೆ ವ್ಯವಹರಿಸುತ್ತಾರೆ. ಇವರು ಕನ್ನಡ ಮತ್ತು ತಮಿಳು ಭಾಷೆ ಬಳಕೆ ಮಾಡುವುದನ್ನು ಕಾಣಬಹುದು.

ಈ ರೀತಿಯ ಏಕಭಾಷಿಕರು ಬೇರೆ ಭಾಷೆಯನ್ನು ಏಕೆ ಕಲಿಯುವುದಿಲ್ಲ ಎಂಬ ಪ್ರಶ್ನೆ ಮೂಡುತ್ತದೆ. ಇವರು ತಮ್ಮ ಭಾಷೆಯಲ್ಲಿಯೇ ಎಲ್ಲಾ ಸೌಕರ್ಯಗಳನ್ನು ಪಡೆಯುವುದರಿಂದ ಬೇರೆ ಭಾಷೆಯ ಅವಶ್ಯಕತೆ ಇರುವುದಿಲ್ಲ. ಅಲ್ಲದೇ ಕರ್ನಾಟದಲ್ಲಿರುವ ಈ ಭಾಷಾದ್ವೀಪದಲ್ಲಿನ ಏಕಭಾಷಿಕರು ಸ್ಥಳೀಯ ಭಾಷೆಯಾದ ಕನ್ನಡವನ್ನು ಕಲಿಯುವುದರಿಂದ ಯಾವುದೇ ಸಾಮಾಜಿಕ ಅಥವಾ ವ್ಯಾವಹಾರಿಕ ಅನುಕೂಲಗಳನ್ನು ಪಡೆಯಬೇಕಾಗಿ ಇರುವುದಿಲ್ಲ. ಉದಾಹರಣೆಗೆ ಕನ್ನಡ ಭಾಷೆಯನ್ನು ಕಲಿತು ಪತ್ರಿಕೆ ಓದಿ ಸುದ್ದಿ ತಿಳಿಯಬೇಕು ಎಂಬುದೇನಿರುವುದಿಲ್ಲ. ಅವರದ್ದೇ ಭಾಷೆಯ ಪತ್ರಿಕೆಗಳನ್ನು ಪಡೆಯುವ ಮೂಲಕ, ದೂರದರ್ಶನದ ಮೂಲಕ ತಮಗೆ ಅಗತ್ಯವೆನಿಸಿದ ಸುದ್ದಿಗಳನ್ನು ಪಡೆಯುತ್ತಿರುತ್ತಾರೆ. ಇನ್ನು ಶಿಕ್ಷಣದ ವಿಷಯದಲ್ಲಿಯೂ ಇದೇ ಅಂಶವನ್ನು ಕಾಣಬಹುದು. ಹೀಗೆ ಇವರು ಬೇರೆ ಭಾಷೆಗಳನ್ನು ಕಲಿಯುವ ಯಾವುದೇ ಅವಶ್ಯಕತೆಗಳು ಕಂಡುಬರದಿದ್ದಾಗ ಏಕಭಾಷಿಕರಾಗಿ ಉಳಿಯುತ್ತಾರೆ.

**ತಮಿಳು ಭಾಷಾದ್ವೀಪದಲ್ಲಿ ಇರುವ ತಮಿಳು ಏಕಭಾಷಿಕರು**

| ಕ್ರಸಂ | ಏಕಭಾಷಿಕರು | ಒಟ್ಟು ಮಾಹಿತಿದಾರರ ಸಂಖ್ಯೆ | ಶೇಕಡವಾರು |
|---|---|---|---|
| ೦೧ | ತೋಟದ ಮನೆಗಳಲ್ಲಿ ವಾಸ ಮಾಡುವವರು | ೫೦ | ೬೦% |
| ೦೨ | ನಗರದ ಪ್ರದೇಶಗಳಲ್ಲಿ ಇರುವವರು | ೧೦೪ | ೩೦% |

ಇಲ್ಲಿ ತೋಟದ ಮನೆಗಳಲ್ಲಿ ವಾಸ ಮಾಡುವ ತಮಿಳು ಭಾಷಿಕರು ಒಟ್ಟು ಶೇ. ೬೦ರಷ್ಟು ಜನರು ತಮಿಳು ಭಾಷೆಯನ್ನು ಖಾಸಗಿ ಆವರಣದಲ್ಲಿ, ಸಾಮಾಜಿಕ ಮತ್ತು ವ್ಯಾವಹಾರಿಕ ಆವರಣದಲ್ಲಿ ಕನ್ನಡ ಭಾಷೆಯನ್ನು ಬಳಸುತ್ತೇವೆ ಎಂದು ತಿಳಿಸುತ್ತಾರೆ. ಹಿರಿಯೂರು ಪರಿಸರದಲ್ಲಿ ಹೆಚ್ಚು ತೋಟಗಳಲ್ಲಿ ವಾಸಿಸುವ ಕುಟುಂಬಗಳನ್ನು ಕಾಣಬಹುದು. ಹೊಸಪೇಟೆ ಪರಿಸರದ ತೋಟಗಳಲ್ಲಿ ವಾಸಿಸುವ ತಮಿಳು ಭಾಷಿಕರ ಕುಟುಂಬಗಳ ಸಂಖ್ಯೆ ಕಡಿಮೆ ಇದೆ. ಇವರು ನಗರ ಪ್ರದೇಶಗಳಲ್ಲಿ ವಾಸ ಮಾಡುತ್ತಿರುವುದನ್ನು ಕಾಣಬಹುದು.

**ತಮಿಳು ಭಾಷಾದ್ವೀಪಗಳಲ್ಲಿ ಲಿಂಗವಾರು ಏಕಭಾಷಿಕರಾಗಿರುವ ಸಂಖ್ಯೆ**

| ಕ್ರ.ಸಂ. | ಏಕಭಾಷಿಕರು | ಒಟ್ಟು ಮಾಹಿತಿದಾರರು | ಶೇಕಡವಾರು |
|---|---|---|---|
| ೦೧ | ಮಹಿಳೆಯರು | ೧೫೦ | ೫೫% |
| ೦೨ | ಪುರುಷರು | ೧೫೦ | ೨೮% |

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಪುರುಷರಿಗಿಂತ ಮಹಿಳೆಯರು ಏಕಭಾಷಿಕರಾಗಿರುವ ಅಂಶಗಳು ಹೆಚ್ಚಾಗಿ ಕಂಡುಬರುತ್ತವೆ. ಪುರುಷರು ವ್ಯಾವಹಾರಿಕ ಮತ್ತು ಸಾಮಾಜಿಕ ಸಂದರ್ಭಗಳಲ್ಲಿ ಕನ್ನಡಿಗರ ಪರಿಸರದಲ್ಲಿ ಭಾಗವಹಿಸುವುದರಿಂದ ಹೆಚ್ಚು ಜನರು ದ್ವಿಭಾಷಿಕರು ಮತ್ತು ಬಹುಭಾಷಿಕರಾಗಿರುವುದನ್ನು ಕಾಣಬಹುದು. ಪುರುಷರು ಏಕಭಾಷಿಕರಾಗಿರುವವರಲ್ಲಿ ಹೆಚ್ಚಾಗಿ ವಯಸ್ಸಾಗಿರುವವರಿದ್ದಾರೆ. ಇವರು ಎರಡನೇ ತಲೆಮಾರಿನವರಾಗಿದ್ದಾರೆ.

**೩.೨.೩.ಅ.೨. ದ್ವಿಭಾಷೆ**

'ಸ್ಥಳೀಯ ಭಾಷಿಕರಿಗಿರುವ ಎರಡು ಭಾಷೆಗಳ ಮೇಲಿನ ಪ್ರಭುತ್ವ'(ಬ್ಲೂಮ್ ಫೀಲ್ಡ್ ಎಲ್., ಲಾಂಗ್ವೇಜ್, ಪುಟ ೫೬) ದ್ವಿಭಾಷಿಕತೆ 'ಭಾಷೆಗಳ ಸಂಖ್ಯೆ ಎರಡಾದರೆ ಅದೊಂದು ದ್ವಿಭಾಷಿಕ ಸನ್ನಿವೇಶ. ಇಂಥ ಸನ್ನಿವೇಶಗಳಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿತು ಬಳಸಬೇಕಾದ ಅವಕಾಶ, ಒತ್ತಾಯಗಳು ಉಂಟಾಗುತ್ತವೆ. ಜನರು ಹೀಗೆ ಎರಡು ಭಾಷೆಗಳನ್ನು ಕಲಿತು ಬಳಸತೊಡಗಿದಾಗ ಆ ಪರಿಸರದಲ್ಲಿ ದ್ವಿಭಾಷಿಕತೆ ಇದೆ ಎನ್ನುತ್ತೇವೆ(ನಾರಾಯಣ ಕೆ.ವಿ., ದ್ವಿಭಾಷಿಕತೆ, ಪುಟ ೧) ಎಂದು ದ್ವಿಭಾಷಿಕತೆಯನ್ನು ವ್ಯಾಖ್ಯಾನಿಸಿರುವುದನ್ನು ಕಾಣಬಹುದು. ವ್ಯಕ್ತಿ ಎರಡು ಭಾಷೆಗಳನ್ನು ಬಳಕೆ ಮಾಡುವ ಸಾಮರ್ಥ್ಯಕ್ಕೆ ದ್ವಿಭಾಷಿಕತೆ ಎನ್ನಬಹುದು. ಈ ದ್ವಿಭಾಷಿಕತೆಯ ಕುರಿತು ಭಾಷಾಬಳಕೆಯ ಸಾಮರ್ಥ್ಯಕ್ಕೆ ತಕ್ಕಂತೆ ಬೇರೆ ಬೇರೆ ವಿಧಗಳನ್ನು ನಾರಾಯಣ ಕೆ. ವಿ. ಅವರು ದ್ವಿಭಾಷಿಕತೆಯಲ್ಲಿ ಚರ್ಚಿಸಿದ್ದಾರೆ. ಅರೆ ದ್ವಿಭಾಷಿಕತೆ, ಸಮುದಾಯ ದ್ವಿಭಾಷಿಕತೆ, ವ್ಯಕ್ತಿಗತ ದ್ವಿಭಾಷಿಕತೆ ಹೀಗೆ ಭಾಷಾಬಳಕೆಯ ಸಂದರ್ಭ, ಭಾಷಾಬಳಕೆಯ ಪ್ರಮಾಣಗಳನ್ನು(ಕೌಶಲ) ಆಧರಿಸಿ ವಿಭಾಗಿಸಿರುವುದು ಕಾಣಬಹುದು. ಈ ರೀತಿಯ ದ್ವಿಭಾಷಿಕತೆಯನ್ನು ಭಾಷಾದ್ವೀಪಗಳಲ್ಲಿ ಭಾಷಾಬಳಕೆಯ ಸಂದರ್ಭ ಮತು ಭಾಷಾಬಳಕೆಯ ಪ್ರಮಾಣವನ್ನು ಅನುಸರಿಸಿ ವಿಭಾಗಿಸಬಹುದು.

ಭಾಷಾದ್ವೀಪಗಳಲ್ಲಿ ವಿವಿಧ ಕಾರಣಕ್ಕೆ ದ್ವಿಭಾಷಿಕರನ್ನು ಕಾಣಬಹುದು. ಇವರು ಮೂಲಸ್ಥಳದಿಂದಲೂ ದ್ವಿಭಾಷಿಕರಾಗಿರುವುದು, ವಲಸೆ ಬಂದು ನೆಲೆಸುವ ಸಂದರ್ಭದಲ್ಲಿ ಬೇರೆ ಭಾಷೆಗಳನ್ನು ಕಲಿತು ದ್ವಿಭಾಷಿಕರಾಗಿರುವುದು, ಕೊನೆಯದಾಗಿ ಭಾಷಾದ್ವೀಪಗಳಲ್ಲಿ ನೆಲೆಸಿದ ನಂತರ ಸಾಮಾಜಿಕ, ಆರ್ಥಿಕ ಒತ್ತಡಕ್ಕೆ ಒಳಗಾಗಿ ದ್ವಿಭಾಷಿಕರಾಗಿರುವುದು, ಇನ್ನೊಂದು ಸ್ಥಳೀಯ ಪರಿಸರದಲ್ಲಿ ತಮ್ಮ ಸಂಪರ್ಕ, ಸಂಸ್ಕೃತಿಗಳನ್ನು ವಿಸ್ತರಿಸಿಕೊಂಡಾಗ ಇವರು ದ್ವಿಭಾಷಿಕರಾಗುವುದನ್ನು ಕಾಣಬಹುದು.

ಭಾಷಾದ್ವೀಪಗಳಲ್ಲಿನ ಭಾಷಿಕರು ಮಾರುಕಟ್ಟೆ, ವ್ಯಾಪಾರ ಸ್ಥಳಗಳಲ್ಲಿ, ಆಡಳಿತ ಕಛೇರಿಗಳಲ್ಲಿ, ಶಾಲಾ ಪರಿಸರಗಳಲ್ಲಿ ದ್ವಿಭಾಷಿಕರಾಗುವುದನ್ನು ಕಾಣಬಹುದು. ಇಲ್ಲಿ ಸ್ಥಳೀಯ ಭಾಷಿಕರೊಂದಿಗೆ ವ್ಯವಹರಿಸುವಾಗ ಮತ್ತೊಂದು ಭಾಷೆಯನ್ನು ಬಳಸಿ ಮಾತನಾಡುವುದನ್ನು ಕಾಣಬಹುದು.

ನಾರಾಯಣ ಕೆ. ವಿ. ಅವರು ಹೇಳಿರುವಂತೆ ವ್ಯಕ್ತಿಗತ ದ್ವಿಭಾಷಿಕರಾಗಿರುವುದು ಹೆಚ್ಚಾಗಿ ಕಂಡುಬರುತ್ತದೆ. ಕೆಲವು ಸಂದರ್ಭಗಳಲ್ಲಿ ಮಾತ್ರ ಸಮುದಾಯಗಳೇ ದ್ವಿಭಾಷಿಕರಾಗುವುದನ್ನು ಕಾಣಬಹುದು.

ಉದಾಹರಣೆಗೆ ಮೂಲದಲ್ಲಿಯೇ ದ್ವಿಭಾಷಿಕರಾಗಿರುವುದಕ್ಕೆ; ಬಂಗಾಳಿ ನಿರಾಶ್ರಿತ ಕ್ಯಾಂಪ್‌ಗಳಲ್ಲಿ ಭಾಷಿಕರು ಮೂಲತಃ ಬಂಗಾಳಿ ಭಾಷೆಯನ್ನು ಕಲಿತಿದ್ದು, ಭಾರತದಲ್ಲಿ ವ್ಯವಹರಿಸಲು ಹಿಂದಿಯನ್ನು ಕಲಿತಿದ್ದಾರೆ. ಇವರು ಮುಂಬೈ, ಕೋಲ್ಕತ್ತ ಪ್ರದೇಶಗಳಲ್ಲಿ ಕೆಲ ದಿನಗಳ ಕಾಲ ಇದ್ದುದ್ದರಿಂದಾಗಿ ಹಿಂದಿಯನ್ನು ಕಲಿತಿದ್ದಾರೆ. ಇದರಿಂದಾಗಿ ಇವರು ಎರಡು ಭಾಷೆಯನ್ನು ಬಳಸುವ ಮೂಲಕ ದ್ವಿಭಾಷಿಕರಾಗಿದ್ದಾರೆ.

ಭಾಷಾದ್ವೀಪಗಳಲ್ಲಿ ನೆಲೆಸಿದ ನಂತರ ಸಾಮಾಜಿಕ ಮತ್ತು ಆರ್ಥಿಕ ಕಾರಣಗಳಿಗಾಗಿ ಸ್ಥಳೀಯ ಪರಿಸರವನ್ನು ಸಂಪರ್ಕಿಸುವ, ವ್ಯವಹರಿಸುವ ಪ್ರಕ್ರಿಯೆಯಲ್ಲಿ ದ್ವಿಭಾಷಿಕರಾಗುವುದನ್ನು ಕಾಣಬಹುದು. ಉದಾಹರಣೆಗೆ ಹಿರಿಯೂರು ಮತ್ತು ಹೊಸಪೇಟೆ ಪರಿಸರದ ತಮಿಳು ಭಾಷಿಕರು ಮಾರುಕಟ್ಟೆ, ಆಡಳಿತ ಆವರಣಗಳಲ್ಲಿ ದ್ವಿಭಾಷಿಕರಾಗಿರುವುದನ್ನು ಕಾಣಬಹುದು. ಅಂದರೆ ಮಾರುಕಟ್ಟೆ ಆವರಣಗಳಾದ ತರಕಾರಿ ಮಾರುಕಟ್ಟೆ, ಹೂವಿನ ಮಾರುಕಟ್ಟೆಯಲ್ಲಿ ಮಹಿಳೆಯರು ಮತ್ತು ಪುರುಷರು ಕನ್ನಡ ಮತ್ತು ತಮಿಳನ್ನು ಬಳಸುವುದನ್ನು ಕಾಣಬಹುದು. ಇದರೊಂದಿಗೆ ಆಡಳಿತ ಕಛೇರಿಗಳಲ್ಲಿ ಕನ್ನಡ ಮತ್ತು ತಮಿಳನ್ನು ಬಳಸುವ ಮೂಲಕ ದ್ವಿಭಾಷಿಕರಾಗಿದ್ದಾರೆ. ಈ ರೀತಿಯ ದ್ವಿಭಾಷಿಕರಾಗಿ ರೂಪುಗೊಳ್ಳಲು ವ್ಯಾವಹಾರಿಕ ಮತ್ತು ಸಾಮಾಜಿಕ ಸಂದರ್ಭಗಳಲ್ಲಿ ಪಾಲ್ಗೊಳ್ಳುವಿಕೆಯೇ ಕಾರಣವಾಗಿದೆ. ತಮಿಳು ಭಾಷಿಕರಲ್ಲಿ ಯಾರು ಕನ್ನಡದ ಪರಿಸರದಲ್ಲಿ ಮುಕ್ತವಾಗಿ ತೆರೆದುಕೊಂಡಿದ್ದಾರೋ ಅವರು ಈ ಒತ್ತಡಗಳಿಗೆ ಒಳಗಾಗಿ ದ್ವಿಭಾಷಿಕರಾಗಿರುವುದನ್ನು ಕಾಣಬಹುದು.

ಹೀಗೆ ದ್ವಿಭಾಷಿಕತೆಯನ್ನು ಭಾಷಾದ್ವೀಪಗಳಲ್ಲಿ ಕಾಣಬಹುದು. ಹಿರಿಯೂರು ಪರಿಸರದಲ್ಲಿ ಕನ್ನಡ–ತಮಿಳು ಕಂಡರೆ, ಹೊಸಪೇಟೆ ಪರಿಸರದಲ್ಲಿ ತಮಿಳು–ತೆಲುಗು, ಕನ್ನಡ–ತಮಿಳು ದ್ವಿಭಾಷಿಕರನ್ನು ಕಾಣಬಹುದು. ಈ ರೀತಿಯ ದ್ವಿಭಾಷಿಕರು ಸ್ಥಳೀಯ ಭಾಷಿಕ ಪರಿಸರದೊಂದಿಗೆ ಮುಕ್ತವಾಗಿ ತೆರೆದುಕೊಂಡಿದ್ದಾರೆ.

೩.೨.೩.೮.೩. ಬಹುಭಾಷೆ

ಎರಡು ಅಥವಾ ಎರಡಕ್ಕಿಂತ ಹೆಚ್ಚಿನ ಭಾಷೆಗಳನ್ನು ಬಳಸುವವರಿಗೆ ಬಹುಭಾಷಿಕರು ಎಂದು ಕರೆಯಲಾಗುತ್ತದೆ. ಬಹುಭಾಷಿಕ ಪರಿಸ್ಥಿತಿಯನ್ನು ಭಾಷಾದ್ವೀಪಗಳಲ್ಲಿ ಕಾಣಬಹುದು. ಅನೇಕ ಕಾರಣಗಳಿಂದಾಗಿ ಬಹುಭಾಷಿಕತೆಯು ರೂಢಿಯಾಗಿರುತ್ತದೆ. ಅವುಗಳೆಂದರೆ,

೧. ಮೂಲತಃ ಭಾಷಿಕರು ಬಹುಭಾಷಿಕರಾಗಿರುತ್ತಾರೆ.

೨. ಒತ್ತಡಗಳಿಗೆ ಸಿಲುಕಿ ಭಾಷಿಕರು ಬಹುಭಾಷಿಕರಾಗುವುದು.

೩. ಶಿಕ್ಷಣ ಮತ್ತು ಸಾಮಾಜಿಕ ಪಾಲ್ಗೊಳ್ಳುವಿಕೆ ಮೂಲಕ ಬಹುಭಾಷಿಕರಾಗುವುದು.

ಹೀಗೆ ಮೂರು ಕಾರಣಗಳಿಗೆ ಬಹುಭಾಷಿಕರಾಗುವುದನ್ನು ಕಾಣಬಹುದು. ಮೂಲತಃ ಬಹುಭಾಷಿಕರಾಗಿರುವುದಕ್ಕೆ ಉದಾಹರಣೆ ಟಿಬೆಟ್ ನಿರಾಶ್ರಿತ ಕ್ಯಾಂಪ್‌ಗಳ ಜನರು ಟಿಬೆಟ್ ಭಾಷೆಯನ್ನು ಮೂಲಭಾಷೆಯಾಗಿ, ಹಿಂದಿಯನ್ನು ಸಂಪರ್ಕಭಾಷೆಯಾಗಿ ಕಲಿತು ಮತ್ತು ಇಂಗ್ಲಿಷ್ ಭಾಷೆಯನ್ನು ವ್ಯವಹಾರಕ್ಕೆ ಕಲಿತು ಬಹುಭಾಷಿಕರಾಗಿರುತ್ತಾರೆ. ಒತ್ತಡಗಳಿಗೆ ಸಿಲುಕಿ ಬಹುಭಾಷಿಕರಾಗುವುದಕ್ಕೆ ಉದಾಹರಣೆ ತಮಿಳು ಮತ್ತು ಬಂಗಾಳಿ ನಿರಾಶ್ರಿತರ ಕ್ಯಾಂಪ್‌ಗಳಲ್ಲಿ ವಾಸಿಸುವ ಭಾಷಿಕರು ತಮ್ಮ ಮೂಲಭಾಷೆಯ ಜೊತೆಗೆ ಸ್ಥಳೀಯ ಪರಿಸರದ ಬೇರೆ ಬೇರೆ ಸಂದರ್ಭದ ಎರಡು ಅಥವಾ ಅದಕ್ಕಿಂತ ಹೆಚ್ಚಿನ ಭಾಷೆಯನ್ನು ಕಲಿತಿರುತ್ತಾರೆ. ಅಂದರೆ ಹೊಸಪೇಟೆ ಪರಿಸರದಲ್ಲಿರುವ ತಮಿಳು ಭಾಷಿಕರು ತಮ್ಮ ಮೂಲಭಾಷೆಯಾಗಿ ತಮಿಳನ್ನು, ಪರಿಸರದ ಭಾಷೆಯಾಗಿ ಕನ್ನಡವನ್ನು ಹಾಗೂ ಇತರ ಭಾಷೆಯಾಗಿ ತೆಲುಗು ಭಾಷೆಯನ್ನು ಕಲಿತಿರುವುದನ್ನು ಕಾಣಬಹುದು. ಇವರು ಕನ್ನಡವನ್ನು ಪರಿಸರದ ಭಾಷೆಯಾಗಿ ಕಲಿಯುತ್ತಾರೆ. ಇದಕ್ಕೆ ಸಾಮಾಜಿಕ ಕಾರಣಗಳಿವೆ. ಅಂದರೆ ಕನ್ನಡದ ಪರಿಸರದಿಂದ ಸೌಲಭ್ಯಗಳನ್ನು ಪಡೆಯುವಾಗ, ಆಡಳಿತ ಕಛೇರಿಗಳಿಂದ ತಮ್ಮ ಕಾರ್ಯಗಳನ್ನು ಮಾಡಿಕೊಳ್ಳಲು ಕನ್ನಡವನ್ನು ಬಳಸುತ್ತಾರೆ. ಅದೇ ರೀತಿಯಲ್ಲಿ ಕರ್ನಾಟಕ ಆಂಧ್ರದ ಗಡಿಭಾಗವಾಗಿರುವ ಈ ಪ್ರದೇಶದಲ್ಲಿ ತಮಿಳು ಭಾಷಿಕರ ಹೇಗೆ ವಲಸೆ ಮೂಲಕ ಬಂದು ನೆಲೆಸಿದ್ದಾರು ಅದೇ ರೀತಿಯಲ್ಲಿ ತೆಲುಗು ಭಾಷಿಕರನ್ನು ಕಾಣಬಹುದು. ಆದ್ದರಿಂದ ಬಳ್ಳಾರಿಯ ಪರಿಸರದಲ್ಲಿ ಕನ್ನಡ ಭಾಷಾ ಬಳಕೆದಾರರಷ್ಟು ತೆಲುಗು ಭಾಷಿಕ ಬಳಕೆದಾರರನ್ನು ಕಾಣಬಹುದು. ಆದ್ದರಿಂದ ಇಲ್ಲಿ ತೆಲುಗು ಭಾಷೆಯೂ ಒಂದಲ್ಲ ಒಂದು ರೀತಿಯಲ್ಲಿ ಸಾಮಾಜಿಕವಾಗಿ ಬಳಕೆಯ ಸ್ಥಾನವನ್ನು ಪಡೆದುಕೊಂಡಿದೆ. ಇಲ್ಲಿ ತೆಲುಗು ಬಳಕೆಯ ಭಾಷೆಯಾಗಿಯೂ ರೂಢಿಗೊಂಡಿದೆ. ಸಾರ್ವಜನಿಕ ಸಂದರ್ಭಗಳಲ್ಲಿ ಕನ್ನಡ, ತೆಲುಗು, ತಮಿಳು ಭಾಷೆಗಳನ್ನು ಬಳಕೆ ಮಾಡುವುದನ್ನು ಕಾಣಬಹುದು.

ಶಿಕ್ಷಣ ಮತ್ತು ಸಾಮಾಜಿಕವಾಗಿ ಪಾಲ್ಗೊಳ್ಳುವ ಮೂಲಕ ಬಹುಭಾಷಿಕರಾಗುವುದು: ಭಾಷಾದ್ವೀಪಗಳಲ್ಲಿ ವಾಸಿಸುವ ಭಾಷಿಕರು ಅನೇಕ ಸಂದರ್ಭಗಳಲ್ಲಿ ಎರಡಕ್ಕಿಂತ ಹೆಚ್ಚಿನ ಭಾಷೆಗಳನ್ನು ಬಳಕೆ ಮಾಡುವುದನ್ನು ಕಾಣಬಹುದು. ಅದಕ್ಕೆ ಶಿಕ್ಷಣವೂ ಕಾರಣವಾಗಿದೆ. ಅಂದರೆ ಭಾಷಾದ್ವೀಪಗಳಲ್ಲಿ ವಾಸಿಸುವ ಭಾಷಿಕರ ಮಕ್ಕಳು ಮೂಲಭಾಷೆಯಾಗಿ ತಮಿಳು, ಸ್ಥಳೀಯ ಪರಿಸರದ ಭಾಷೆ ಕನ್ನಡ ಮತ್ತು ರಾಷ್ಟ್ರಭಾಷೆಯಾಗಿ ಹಿಂದಿಯನ್ನು ಕಲಿಯುತ್ತಾರೆ. ಇನ್ನು ಕೆಲವು ಸಂದರ್ಭಗಳಾದ ಇಂಗ್ಲಿಷ್ ಮಾಧ್ಯಮದ ಅಧ್ಯಯನದಲ್ಲಿ

ಇಂಗ್ಲಿಷ್, ತಮಿಳು, ಹಿಂದಿಯನ್ನು ಕಲಿಯುವುದು ಕಾಣಬಹುದು. ಈ ರೀತಿಯಾಗಿ ಮೂರು ಭಾಷೆಗಳನ್ನು ಒಂದೇ ರೀತಿ ಕಲಿಯುವ ಮಕ್ಕಳನ್ನು ಕಾಣಬಹುದು. ಇದು ಮುಂದುವರಿದು ಭಾಷಾದ್ವೀಪದಲ್ಲಿ ವಾಸಿಸುವ ಮಕ್ಕಳು ಬಹುಭಾಷಿಕರಾಗುತ್ತಾರೆ. ಟಿಬೆಟ್ ನಿರಾಶ್ರಿತರ ಪ್ರದೇಶಗಳಲ್ಲಿ ವಾಸಿಸುವ ಮಕ್ಕಳು ಸಹ ಶಿಕ್ಷಣದಲ್ಲಿ ಮಾಧ್ಯಮ ಭಾಷೆಯಾಗಿ ಟಿಬೆಟ್ಟನ್ನು, ಇಂಗ್ಲಿಷ್ ಭಾಷೆಯನ್ನು ಜಾಗತಿಕ ಭಾಷೆಯಾಗಿ, ಹಿಂದಿಯನ್ನು ಬಾಹ್ಯ ಪರಿಸರದ ಒತ್ತಡದಿಂದ ಕಲಿತಿರುವುದನ್ನು ಕಾಣಬಹುದು. ಇನ್ನು ಬಂಗಾಳಿ ನಿರಾಶ್ರಿತರ ಕ್ಯಾಂಪ್‌ಗಳ ಮಕ್ಕಳು ಶಿಕ್ಷಣದಿಂದಾಗಿ ಕನ್ನಡವನ್ನು ಮಾಧ್ಯಮ ಭಾಷೆಯಾಗಿ, ಇಂಗ್ಲಿಷನ್ನು ಎರಡನೇ ಭಾಷೆಯಾಗಿ, ಹಿಂದಿಯನ್ನು ಮೂರನೆಯ ಭಾಷೆಯಾಗಿ ಕಲಿಯುತ್ತಿದ್ದಾರೆ. ಇದರೊಂದಿಗೆ ಮನೆಮಾತಾಗಿ ಬಂಗಾಳಿಯನ್ನು ಕಲಿತಿರುತ್ತಾರೆ. ಹೀಗೆ ಇವರು ಬಹುಭಾಷಿಕರಾಗಿ ಬೆಳೆಯುವುದನ್ನು ಕಾಣಬಹುದು.

### ೩.೨.೩.ಆ. ಭೌಗೋಳಿಕ ಸನ್ನಿವೇಶಗಳನ್ನು ಆಧರಿಸಿ

ಭಾಷಾದ್ವೀಪಗಳ ಭೌಗೋಳಿಕ ಸ್ವರೂಪವನ್ನು ತಿಳಿದುಕೊಳ್ಳುವುದು ಅವಶ್ಯಕವಾಗಿದೆ. ಅಂದರೆ ಭಾಷಾದ್ವೀಪಗಳು ಒಂದು ಗುಂಪಿನಲ್ಲಿ ವಾಸವಾಗಿದ್ದರೂ, ಅವು ರಚನೆಯಲ್ಲಿ ಅನೇಕ ಸಾಮಾಜಿಕ ಮತ್ತು ಭೌಗೋಳಿಕ ಅಂಶಗಳು ಪಾತ್ರ ನಿರ್ವಹಿಸುತ್ತವೆ. ಅಂದರೆ ಭಾಷಾದ್ವೀಪಗಳ ರಚನೆಯಲ್ಲಿ ಸಾಮಾಜಿಕ ಭಿನ್ನಾಂಶಗಳು ಹೇಗೆ ಕಾರ್ಯ ನಿರ್ವಹಿಸುತ್ತವೆ? ಭೌಗೋಳಿಕವಾಗಿ ಭಾಷಾದ್ವೀಪಗಳು ನಗರ ಪರಿಸರದಲ್ಲಿ ಹೇಗೆ ತಮ್ಮ ನೆಲೆಯನ್ನು ಕಂಡುಕೊಂಡಿರುತ್ತವೆ? ತಮಿಳು ಭಾಷಾದ್ವೀಪಗಳು ಹೇಗೆ ತಮ್ಮ ಭೌಗೋಳಿಕ ಸ್ವರೂಪವನ್ನು ಹೊಂದಿವೆ ಎಂಬುದನ್ನು ತಿಳಿಯುವುದು. ಆ ಮೂಲಕ ಭಾಷಾದ್ವೀಪಗಳ ಭೌಗೋಳಿಕ ಸ್ವರೂಪವನ್ನು ನಿರ್ದಿಷ್ಟಪಡಿಸುವುದು.

#### ೩.೨.೩.ಆ.೧. ಗುಂಪಾಗಿರುವುದು

ಸಾಮಾನ್ಯವಾಗಿ ನಗರಗಳಿಗೆ ಹೊಸದಾಗಿ ವಲಸೆ ಬಂದು ಸೇರುವ ಸಮುದಾಯಗಳು ನಗರದ ಹೊರಭಾಗದಲ್ಲಿಯೋ ಅಥವಾ ನಗರದ ಸಾಮಾನ್ಯ ಪ್ರದೇಶಗಳಲ್ಲಿಯೋ ತಮ್ಮ ನೆಲೆಯನ್ನು ಕಂಡುಕೊಳ್ಳುವುದನ್ನು ಕಾಣಬಹುದು. ಇಂತಹ ಪ್ರದೇಶಗಳಿಗೆ ಸಾಮಾನ್ಯವಾಗಿ ಕ್ಯಾಂಪ್‌ಗಳು, ಪಾಳ್ಯ, ಹಟ್ಟಿ ಎಂದು ಕರೆಯುವುದನ್ನು ಕಾಣಬಹುದು. ಬ್ರಿಟಿಷರು ತಮ್ಮ ಆಡಳಿತ ಅವಧಿಯಲ್ಲಿ ಕಂಟೋನ್ಮೆಂಟ್ ಪ್ರದೇಶಗಳನ್ನು ಎಂದು ರಚಿಸಿದ್ದರು. ಅವು ಅಂದಿನ ಕಾಲದಲ್ಲಿ ಬೇರೊಂದು ಪ್ರದೇಶದಿಂದ ಬಂದ ಅಧಿಕಾರಿಗಳು, ಸಾಮಾನ್ಯ ಜನರು ಮತ್ತು ಅಪರಾಧಗಳಿಗೆ ಬಂಧಿತರಾದವರ ಪ್ರದೇಶಗಳಾಗಿದ್ದವು. ಈ ಪ್ರದೇಶಗಳು ಇಂದಿಗೂ ಇರುವುದನ್ನು ಕಾಣಬಹುದು. ಈ ರೀತಿ ವಲಸೆ ಬಂದು ನಗರದ ಒಂದು ಬದಿಯಲ್ಲಿ/ಒಂದು ಪ್ರದೇಶದಲ್ಲಿ ವಾಸವಾಗಿರುವುದು ಕಾಣಬಹುದು. ಉದಾಹರಣೆಗೆ ಬೆಂಗಳೂರು ನಗರದಲ್ಲಿ ಆಂಧ್ರ ಮತ್ತು ತಮಿಳು ನಾಡಿನಿಂದ ಬಂದು ನೆಲೆಸಿರುವ ಪೌರಕಾರ್ಮಿಕರು ಇಂದಿಗೂ ಗುಂಪು ಗುಂಪುಗಳಾಗಿ ಹಲವು ಪ್ರದೇಶಗಳಲ್ಲಿ ವಾಸವಾಗಿರುವುದನ್ನು ಕಾಣಬಹುದು. ಉದಾಹರಣೆಗೆ: ಜೆ.ಜೆ. ನಗರ, ನೀಲಸಂದ್ರ, ಆನೆಪಾಳ್ಯ, ಹಲಸೂರು ಹೀಗೆ ಹಲವು ಪ್ರದೇಶಗಳಲ್ಲಿ ಇವರು ಗುಂಪು ಗುಂಪಾಗಿರುವುದನ್ನು ಕಾಣಬಹುದು. ಹೊಸಪೇಟೆ ಪರಿಸರದಲ್ಲಿ ಸೇಟ್ ಸಮುದಾಯದ ಜನರು ಹಂಪಿ ರಸ್ತೆ ಮತ್ತು ವಡಕರಾಯನ ದೇವಾಲಯ ರಸ್ತೆಯಲ್ಲಿ ಗುಂಪುಗಳಾಗಿರುವುದನ್ನು ಕಾಣಬಹುದು. ಹೀಗೆ ಒಂದು ವಲಸೆಯಿಂದ ಬಂದ ಭಾಷಿಕರ ಗುಂಪು

ಒಂದು ನಿರ್ದಿಷ್ಟ ಪ್ರದೇಶದಲ್ಲಿ ವಾಸವಾಗಿರುವುದದನ್ನು ಕಾಣಬಹುದು. ಇದು ಬೇರೆ ಬೇರೆ ಕಾರಣಗಳಿಗೆ ಗುಂಪುಗಳಾಗಿರುವುದನ್ನು ಕಾಣಬಹುದು. ಅಂದರೆ ವಲಸೆಯಿಂದ ನೆಲೆಸಿದವರಾದ ಕಾರಣ ಇವರು ಬಾಹ್ಯ ಪರಿಸರದ ಅಧಿಕಾರ, ಪ್ರಭಾವಗಳನ್ನು ಎದುರಿಸಲು, ರಕ್ಷಣೆಯ ದೃಷ್ಟಿಯಿಂದ ಗುಂಪುಗಳಲ್ಲಿ ವಾಸ ಮಾಡುವುದನ್ನು ಕಾಣಬಹುದು.

ಗುಂಪುಗಳೊಂದಿಗೆ ವಾಸವಾಗಿರುವ ಈ ಸಮುದಾಯಗಳು ನಗರಗಳ ವಿಸ್ತಾರ, ಜನಸಂಖ್ಯೆ ಹೆಚ್ಚಿದಂತೆಲ್ಲ, ನಗರಕ್ಕೆ ಹೊಸದಾಗಿ ಬಂದು ಸೇರುವ ಅನ್ಯಭಾಷಿಕರು ಬೇರೆ ಬೇರೆ ಪ್ರದೇಶಗಳಲ್ಲಿ ವಾಸ ಮಾಡುವುದನ್ನು ಕಾಣಬಹುದು. ಹೀಗೆ ಭಾಷಾದ್ವೀಪಗಳು ಒಂದೇ ನಗರದಲ್ಲಿ ಗುಂಪು ಗುಂಪುಗಳಾಗಿದ್ದರೂ ನಗರ ಬೆಳೆದಂತೆಲ್ಲ ಅವರು ಒಂದೇ ನಗರದ ಬೇರೆ ಬೇರೆ ಪ್ರದೇಶಗಳಲ್ಲಿ ವಾಸವಾಗಿರುವುದನ್ನು ಕಾಣಬಹುದು.

**೩.೨.೩.೩. ವರ್ಗಗಳನ್ನಾಧರಿಸಿ**

**೩.೨.೩.೩.೧. ಸಾಮಾಜಿಕ ಮತ್ತು ಆರ್ಥಿಕ ಸ್ಥಾನವನ್ನು ಅನುಸರಿಸಿ ಗುಂಪುಗಳಾಗಿ ವಾಸವಾಗಿರುವುದು**

ಈ ಹಿಂದೆ ತಿಳಿದಿರುವಂತೆ ನಗರಗಳಲ್ಲಿ ಗಂಪು ಗುಂಪುಗಳಾಗಿ ಭಾಷಾದ್ವೀಪಗಳು ರಚನೆಯಾಗಿರುವುದನ್ನು ಕಾಣಬಹುದು. ಭಾಷಾದ್ವೀಪಗಳು ರಚನೆಯಾಗಲು ಸಾಮಾಜಿಕ ವರ್ಗ ಮತ್ತು ಜಾತಿ ಅಂಶಗಳು ಪ್ರಭಾವ ಬೀರಿರುವುದನ್ನು ಕಾಣಬಹುದು. ಅಂದರೆ ಭಾಷಾದ್ವೀಪಗಳ ರಚನೆಯ ಹಿನ್ನೆಲೆಯಲ್ಲಿ ಪ್ರಭಾವ ಬೀರುವ ಜಾತಿ ಮತ್ತು ವರ್ಗಗಳು ಈ ಸಾಮಾಜಿಕ ಭಿನ್ನಾಂಶಗಳನ್ನು ಅನುಸರಿಸಿ ಗುಂಪುಗಳಾಗಿ ರಚನೆಯಾಗುವುದನ್ನು ಕಾಣಬಹುದು. ಅಂದರೆ ಒಂದು ಭಾಷೆಯನ್ನಾಡುವ ಜನರು ಒಂದೇ ಗುಂಪಿನಲ್ಲಿ ವಾಸವಾಗಿದ್ದರೂ, ಆ ಗುಂಪಿನಲ್ಲಿ ಈ ಜಾತಿ ಮತ್ತು ವರ್ಗಗಳನ್ನು ಆಧರಿಸಿ ಉಪಗುಂಪುಗಳು ರಚನೆಯಾಗಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ಹಿರಿಯೂರು ನಗರ ಪರಿಸರದಲ್ಲಿರುವ ವಾಸವಾಗಿರುವ ತಮಿಳು ಭಾಷಿಕರ ನಗರಗಳನ್ನು ಕಾಣುತ್ತೇವೆ. ಅದರಲ್ಲಿ ಭಗವತಿಯಮ್ಮ ದೇವಾಲಯದ ಹತ್ತಿರ ಇರುವವರು ಬಹುತೇಕರು 'ಗೌಡ' ಜಾತಿಗೆ ಸೇರಿದವರಾಗಿದ್ದಾರೆ. ಅದೇ ರೀತಿಯಲ್ಲಿ ಹುಳಿಯಾರ್ ರಸ್ತೆಯಲ್ಲಿ ಗಣೇಶನ ಗುಡಿಯ ಹತ್ತಿರ ಇರುವ ತಮಿಳು ಭಾಷಿಕರು 'ಚಕ್ಕಳಿಯಾರ್' ಜಾತಿಗೆ ಸೇರಿದವರಾಗಿದ್ದಾರೆ. ವೇದಾವತಿ ನಗರದಲ್ಲಿರುವವರು 'ಆದಿ ದ್ರಾವಿಡ' ಜಾತಿಗೆ ಸೇರಿದವರಾಗಿದ್ದಾರೆ. ಹೀಗೆ ಹಿರಿಯೂರು ಪರಿಸರದಲ್ಲಿ ತಮಿಳು ಭಾಷಿಕರು ಗುಂಪುಗಳಾಗಿದ್ದರೂ, ಅದರಲ್ಲಿ ಮುಖ್ಯವಾಗಿ ಜಾತಿವಾರು ಗುಂಪುಗಳಿರುವುದನ್ನು ಕಾಣಬಹುದು. ಹೊಸಪೇಟೆ ಪರಿಸರದ ಟಿ. ಬಿ. ಡ್ಯಾಮ್‌ನ ಪರಿಸರದಲ್ಲಿ ಮೂರು ತಮಿಳು ಭಾಷಿಕರ ಕ್ಯಾಂಪ್‌ಗಳಿರುವುದನ್ನು ಕಾಣಬಹುದು. ಇವುಗಳಲ್ಲಿ ಪಬ್ಲಿಕ್ ಲೇಬರ್ ಕ್ಯಾಂಪ್, ಮಚಲಿ ಕ್ಯಾಂಪ್, ನಿಶಾನಿ ಕ್ಯಾಂಪ್ ಎಂಬ ಮೂರು ಗುಂಪುಗಳಿವೆ. ಇದರಲ್ಲಿ ನಿಶಾನಿ ಕ್ಯಾಂಪ್ ಪ್ರದೇಶದಲ್ಲಿ 'ಗೌಂಡರ್' ಜಾತಿಗೆ ಸೇರಿದ ಜನರು ಹೆಚ್ಚಿರುವುದನ್ನು ಕಾಣಬಹುದು. ಪಬ್ಲಿಕ್ ಲೇಬರ್ ಕ್ಯಾಂಪಿನಲ್ಲಿ 'ಆದಿ ದ್ರಾವಿಡರ್' ಮತ್ತು ಇತರ ಜಾತಿಯವರು ಇದ್ದಾರೆ. ಕಮಲಾಪುರದ ಕುಪ್ಪಯ್ಯ ಕ್ಯಾಂಪ್‌ನ ಮಟ್ಟಿ ಭಾಗದಲ್ಲಿ 'ವಡ್ಡಾರ್'(ಬೋವಿ)ಜಾತಿಯವರು ಇರುವುದನ್ನು ಕಾಣಬಹುದು. ಹೀಗೆ ಪ್ರತಿ ಭಾಷಾದ್ವೀಪಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಜಾತಿ ಆಧಾರದ ಮೇಲೆ ಗುಂಪುಗಳನ್ನು ಮರುವಿಂಗಡಣೆ ಮಾಡಿಕೊಂಡಿರುವುದನ್ನು ಕಾಣಬಹುದು. ಆ ಮೂಲಕ ಭಾಷಾದ್ವೀಪಗಳ ರಚನೆಯಲ್ಲಿಯೂ ಸಾಮಾಜಿಕ ಭಿನ್ನಾಂಶಗಳ ಪ್ರಭಾವವನ್ನು ಕಾಣಬಹುದು. ಹೀಗೆ ಭಾಷಾದ್ವೀಪಗಳ ರಚನೆಯಲ್ಲಿ ಭೌಗೋಳಿಕ ಮತ್ತು ಭಾಷಿಕ ಸ್ವರೂಪವನ್ನು ಹೊಂದಿರುವುದು ತಿಳಿದುಬರುತದೆ.

ಭಾಷಾದ್ವೀಪಗಳು ರಚನೆಯಲ್ಲಿ ಮಾನವರ ಚಲನಾತ್ಮಕ ಬದುಕು ಪ್ರಮುಖ ಪಾತ್ರವಹಿಸುತ್ತದೆ. ಅದರಲ್ಲೂ ಉದ್ಯೋಗ, ಆರ್ಥಿಕತೆ, ಸಾಮಾಜಿಕತೆಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗಿ ನೆಲೆ ಬೇರೊಂದು ಭಾಷಿಕ ಸಮುದಾಯದಲ್ಲಿ ತಮ್ಮ ಭಾಷೆ ಮತ್ತು ಸಂಸ್ಕೃತಿಯನ್ನು ಕಟ್ಟಿಕೊಂಡು ಭಾಷಾದ್ವೀಪಗಳು ರೂಪಗೊಳ್ಳುತ್ತವೆ. ಭಾಷಾದ್ವೀಪಗಳು ಕೇವಲ ಭಾಷೆಗೆ ಸೀಮಿತವಾಗದೆ ಆರ್ಥಿಕತೆ, ರಾಜಕೀಯ, ಧರ್ಮ, ಆಚರಣೆಗಳಿಗೂ ದ್ವೀಪಗಳಾಗಿ ಕೆಲವು ಸಂದರ್ಭಗಳಲ್ಲಿ ಕಂಡುಬರುತ್ತವೆ. ಇವುಗಳ ರಚನೆಯಲ್ಲಿಯೂ ಸಾಮಾಜಿಕ ಭಿನ್ನಾಂಶಗಳಾದ ಜಾತಿ, ಧರ್ಮ, ಆರ್ಥಿಕತೆಗಳು ಒತ್ತಡ ಏರುತ್ತವೆ. ಹೀಗೆ ಭಾಷಾದ್ವೀಪಗಳು ಮೇಲ್ನೋಟಕ್ಕೆ ಭಾಷಿಕ ಗುಂಪುಗಳಾಗಿ ಕಂಡರು ಅದರ ಆಂತರಿಕ ರಚನೆ, ಸಾಮಾಜಿಕತೆ, ಆರ್ಥಿಕತೆ, ಜನಜೀವನವು ಬಾಹ್ಯ ಪರಿಸರದ ಕೆಲವು ಒತ್ತಡಗಳಿಗೆ ಒಳಗಾಗಿರುತ್ತದೆ.

* * *

## ಅಧ್ಯಾಯ ನಾಲ್ಕು

# ಕರ್ನಾಟಕದಲ್ಲಿನ ತಮಿಳು ಭಾಷಾದ್ವೀಪಗಳು

೪.೧. ಕರ್ನಾಟಕಕ್ಕೆ ತಮಿಳರ ವಲಸೆ

ಪ್ರಾಚೀನ ಕಾಲದಲ್ಲಿ

ಸ್ವಾತಂತ್ರ್ಯ ಪೂರ್ವದಲ್ಲಿ

ಸ್ವಾತಂತ್ರ್ಯ ನಂತರದಲ್ಲಿ

೪.೨. ತಮಿಳು ಭಾಷಾದ್ವೀಪಗಳಲ್ಲಿ ಭಾಷಾಬಳಕೆಯ ಸ್ವರೂಪ

೪.೩. ತಮಿಳು ಭಾಷಾದ್ವೀಪಗಳ ಭೌಗೋಳಿಕ ಸ್ವರೂಪ

೪.೪. ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿರುವ ಭಾಷಾದ್ವೀಪಗಳ ಸಮೀಕ್ಷೆ

೪.೪.೧. ಹಿರಿಯೂರು:

೪.೪.೨. ಆದಿವಾಲ

೪.೪.೩. ಬಬ್ಬೂರ್ ಫಾರಂ

೪.೪.೪. ಮಸ್ಕಲ್

೪.೪.೫. ಮಾರಿಕಣಿವೆ

೪.೪.೬. ಆರನಕಟ್ಟೆ

೪.೪.೭. ಹೊಸಪೇಟೆ

೪.೪.೮. ನಿಶಾನಿಕ್ಯಾಂಪ್

೪.೪.೯. ಪಿಎಲ್ ಕ್ಯಾಂಪ್

೪.೪.೧೦. ಕಡ್ಡಿರಾಂಪುರ

೪.೪.೧೧. ಕಮಲಾಪುರ

೪.೪.೧೨. ವೆಂಕಟಾಪುರ

# ಅಧ್ಯಾಯ ನಾಲ್ಕು

# ಕರ್ನಾಟಕದಲ್ಲಿನ ತಮಿಳು ಭಾಷಾದ್ವೀಪಗಳು

ಭಾಷಾಬಳಕೆಯನ್ನು ಆಧರಿಸಿ ಭಾರತದ ರಾಜ್ಯಗಳನ್ನು ವಿಂಗಡಿಸಿದ ನಂತರದಲ್ಲಿ ಕರ್ನಾಟಕದ ಆಡಳಿತ ಮತ್ತು ಭಾಷೆಯನ್ನು ಅಧಿಕೃತಗೊಳಿಸಲಾಯಿತು. ಅದಕ್ಕಿಂತ ಹಿಂದಿನ ಕರ್ನಾಟಕವನ್ನು ಗಮನಿಸಿದರೆ ಭೌಗೋಳಿಕ ವ್ಯಾಪ್ತಿಯು ವಿಸ್ತರಿಸಿರುವುದನ್ನು ಕಾಣಬಹುದು. ಅಲ್ಲದೇ ಚಾರಿತ್ರಿಕವಾಗಿ ಗಮನಿಸಿದಾಗ ಕರ್ನಾಟಕವನ್ನು ಹಲವು ರಾಜವಂಶದವರು ಆಳ್ವಿಕೆ ಮಾಡಿರುವುದು ಚರಿತ್ರೆಯಿಂದ ತಿಳಿಯಬಹುದು. ಹೀಗೆ ಕರ್ನಾಟಕವು ಪ್ರಾಚೀನ ಕಾಲದಿಂದಲೂ ಹಲವು ಪ್ರದೇಶಗಳಿಂದ, ಹಲವು ಭಾಷೆಗಳಿಂದ ಕೂಡಿದ್ದುದನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ದಕ್ಷಿಣ ಭಾರತದ ಪ್ರಾಚೀನ ರಾಜಮನೆತನಗಳಾದ ಚೋಳರು, ಚೇರರು, ಪಾಂಡ್ಯರು, ಗಂಗರು, ಹೊಯ್ಸಳರು, ವಿಜಯನಗರ ಅರಸರು ಆಳ್ವಿಕೆ ಮಾಡಿದ್ದಾರೆ. ಈ ಸಮಯದಲ್ಲಿ ಈಗಿನ ತಮಿಳುನಾಡು, ಆಂಧ್ರಪ್ರದೇಶ, ಕರ್ನಾಟಕ, ಕೇರಳ ಪ್ರದೇಶಗಳನ್ನು ಪರಸ್ಪರರು ಆಕ್ರಮಿಸಿಕೊಂಡು ಆಳ್ವಿಕೆ ಮಾಡಿದ್ದಾರೆ. ರಾಜಪ್ರಭುತ್ವದ ಭಾಷೆಯು ಮತ್ತೊಂದು ಭಾಷಿಕ ಪರಿಸರದಲ್ಲಿ ಆಡಳಿತದ ಸ್ಥಾನವನ್ನು ಅಧಿಕಾರದ ಕಾರಣಕ್ಕೋ, ವಲಸೆಯ ಕಾರಣಕ್ಕೋ ಸ್ಥಾನವನ್ನು ಪಡೆದು ಅಲ್ಲಿಯೇ ಭಾಷಿಕ ಸಮುದಾಯಗಳನ್ನು ಕಟ್ಟಿಕೊಂಡಿರುವುದನ್ನು ಕಾಣಬಹುದು. ಇವರು ತಮ್ಮ ಮೂಲಭಾಷೆಯನ್ನು ಸಂಗೋಪನೆ ಮಾಡಿಕೊಂಡು ಸಮುದಾಯವನ್ನು ಕಟ್ಟಿಕೊಂಡಿದ್ದರೆ, ಇವು ಇಂದಿಗೂ ಭಾಷಾದ್ವೀಪವಾಗಿವೆ. ಈ ರೀತಿಯ ಸನ್ನಿವೇಶಗಳನ್ನು ಕರ್ನಾಟಕದಲ್ಲಿ ಕಾಣಬಹುದು. ಅಂದರೆ ತಮಿಳು ಭಾಷಿಕರು ಪ್ರಾಚೀನ ಕಾಲದಿಂದ ಒಂದಲ್ಲಾ ಒಂದು ಕಾರಣಕ್ಕೆ ಕನ್ನಡಿಗರೊಂದಿಗೆ ಸಂಬಂಧವನ್ನು ಹೊಂದಿ, ಕರ್ನಾಟಕದಲ್ಲಿ ತಮಿಳು ಭಾಷಿಕರಾಗಿ ನೆಲೆಯನ್ನು ಕಂಡುಕೊಂಡಿದ್ದಾರೆ.

ಹೀಗೆ ತಮಿಳು ಭಾಷಿಕರು ಕರ್ನಾಟಕದೊಂದಿಗೆ ನಂಟು ಹೊಂದಿರುವುದನ್ನು ನಾವು ಬಹು ಪ್ರಾಚೀನ ಕಾಲದಿಂದಲೂ ನೋಡಬಹುದು. ಅದರಲ್ಲೂ ರಾಜಕೀಯ ಆಡಳಿತದ ಕಾರಣಕ್ಕೆ ಇದು ಹೆಚ್ಚಾಗಿದೆ. ತಮಿಳುನಾಡಿನ ಗಡಿಯು ಕರ್ನಾಟಕಕ್ಕೆ ಹೊಂದಿಕೊಂಡಿರುವ ಕಾರಣ ದಕ್ಷಿಣ ಕರ್ನಾಟಕದ ಬೆಂಗಳೂರು, ರಾಮನಗರ, ಕೋಲಾರ, ಮೈಸೂರು ಜಿಲ್ಲೆಗಳ ಗಡಿ ಪ್ರದೇಶಗಳಲ್ಲಿ ತಮಿಳು ಭಾಷೆಯ ಪ್ರಭಾವ ಹೆಚ್ಚಿದೆ. ಬೆಂಗಳೂರು ನಗರವು ಜಾಗತಿಕ ಮನ್ನಣೆ ಪಡೆಯುತ್ತಿರುವುದರಿಂದ ಉದ್ಯೋಗ ಮತ್ತು ಜೀವನ ಆರ್ಥಿಕ ಮಟ್ಟ ಹೆಚ್ಚುತ್ತಿರುವುದರಿಂದಾಗಿ ತಮಿಳುನಾಡಿನ ಬಹುಭಾಗದಿಂದ ಇಲ್ಲಿಗೆ ಬಂದು

ನೆಲೆಸುತ್ತಿರುವುದನ್ನು ಕಾಣಬಹುದು. ಹೀಗೆ ತಮಿಳು ಭಾಷಿಕರು ಕರ್ನಾಟಕದೊಂದಿಗೆ ಸಾಮಾಜಿಕ ಸಂಬಂಧವನ್ನು ಹೊಂದಿರುವುದು ಕಾಣಬಹುದು.

**೪.೧. ಕರ್ನಾಟಕಕ್ಕೆ ತಮಿಳರ ವಲಸೆ**

ಕರ್ನಾಟಕಕ್ಕೆ ತಮಿಳು ಭಾಷಿಕರ ವಲಸೆಯನ್ನು ಮುಖ್ಯವಾಗಿ ಮೂರು ಕಾಲಘಟ್ಟಗಳಲ್ಲಿ ಗುರುತಿಸಬಹುದು.

೧. ಪ್ರಾಚೀನ ಕಾಲದಲ್ಲಿ

೨. ಸ್ವಾತಂತ್ರ್ಯಪೂರ್ವದಲ್ಲಿ

೩. ಸ್ವಾತಂತ್ರ್ಯ ನಂತರದಲ್ಲಿ

**೧. ಪ್ರಾಚೀನ ಕಾಲದಲ್ಲಿ:** ಪ್ರಾಚೀನ ಕಾಲದಲ್ಲಿ ಅಂದರೆ ದಕ್ಷಿಣ ಭಾರತವನ್ನು ಆಳಿದ ರಾಜಮನೆತನಗಳ ಇತಿಹಾಸ ಕಾಲದಿಂದಲೂ ಕಾಣಬಹುದು. ಚೋಳ ರಾಜರು ತಮ್ಮ ರಾಜ್ಯ ಆಳ್ವಿಕೆಯ ಸಮಯದಲ್ಲಿ ಕರ್ನಾಟಕವನ್ನು ಆಳ್ವಿಕೆ ಮಾಡಿದ್ದಾರೆ. 'ಚೋಳರ ರಾಜರಾಜನ ಮಗನಾದ ರಾಜೇಂದ್ರ ಚೋಳ ಕ್ರಿ.ಶ.೧೦೦೪ರಲ್ಲಿ ತಲಕಾಡನ್ನು ವಶಪಡಿಸಿಕೊಂಡನು. ನಂತರ ತಲಕಾಡನ್ನು ಚೋಳ ರಾಜರು 'ರಾಜಪುರಂ' ಎಂದು ಹೆಸರಿಸಿದರು. ತಲಕಾಡಿನ ಸುತ್ತಮುತ್ತಲಿನ ಪ್ರದೇಶಗಳನ್ನು 'ಮದಿಕೊಂಡ ಚೋಳ ಮಂಡಲ'ವೆಂದು ಕರೆದರು'(ಮಹಾಲಿಂಗಂ ಟಿ.ವಿ.,(ಸಂ), ೧೯೮೬, ಪ್ರಾಕ್ತನ, ಪುಟ ೨೦). ಪರಾಕ್ರಮಿ ರಾಜರಾಜನು ಚೋಳ ರಾಜ್ಯವನ್ನು ವಿಸ್ತರಿಸಿ ಸಾಮ್ರಾಜ್ಯವಾಗಿ ಪರಿವರ್ತಿಸಿದನು. ಮೂವತ್ತು ವರ್ಷಗಳ ಆಳ್ವಿಕೆಯಲ್ಲಿ ಚೋಳ ಸಾಮ್ರಾಜ್ಯ ಇಡೀ ತಮಿಳುನಾಡು ಹಾಗೂ ಇಂದಿನ ಆಂಧ್ರಪ್ರದೇಶ ಮತ್ತು ಕರ್ನಾಟಕದ ದಕ್ಷಿಣ ಭಾಗಗಳನ್ನು ಸಿಂಹಳ ಮತ್ತು ಮಾಲ್ಡೀವ್ ದ್ವೀಪಗಳನ್ನು ಒಳಗೊಂಡು ದಕ್ಷಿಣ ಭಾರತದಲ್ಲಿ ಅಜೇಯವಾದ ಸಾಮ್ರಾಜ್ಯವೆನಿಸಿತು. ರಾಜ್ಯವನ್ನು ವಿಸ್ತರಿಸಿದುದು ಮಾತ್ರವಲ್ಲದೆ ರಾಜರಾಜನು ಉತ್ತಮವಾದ ಆಡಳಿತವನ್ನು ಆಚರಣೆಗೆ ತಂದನು. ರಾಜರಾಜನು ಸಾಮ್ರಾಜ್ಯ ಸ್ಥಾಪನೆ ಹಾಗೂ ಉತ್ತಮ ಆಡಳಿತಗಾರನಾಗಿ ಪ್ರಾಚೀನ ಭಾರತದ ಶ್ರೇಷ್ಠ ಸಾಮ್ರಾಟರಲ್ಲೊಬ್ಬನಾಗಿದ್ದಾನೆ(ಷೇಕ್ ಅಲಿ ಬಿ., ರಂಗಸ್ವಾಮಿ ಜಿ. ಆರ್., ೧೯೮೪, ದಕ್ಷಿಣ ಭಾರತದ ಇತಿಹಾಸ, ಪುಟ ೩೮.). ಶಾಸನದಲ್ಲಿ ರಾಜೇಂದ್ರ ಚೋಳನು ತಲಕಾಡಿನ ಭಾಗದಲ್ಲಿ ತಮಿಳು ಬ್ರಾಹ್ಮಣರೊಂದಿಗೆ ಬಂದಿರುವುದನ್ನು ಹೀಗೆ ಉಲ್ಲೇಖಿಸಿದೆ; Rajendra after conquering Chengalva must have moved to the north of Talakkad and defeated the Ganga ruler. Kongudesarajakkal mentioning Rajaraja along with his queens making a number of grants of Chaturvedimangalams or the Brhamin settlements in and around talakkad suggests that he was personally present during the battle( EC, IX, Cp 130, 132, 133) Rajendra chola-I, 1012-1044 A. D.). he remainde in Karnataka and had his place in Vikramacholapuram

in the Chintamani taluk of the kolar district. It is from here he end to his home country to become the emperor. About sixty inscripations were issued during his time in which, half are in Kannada.(Usha R. Vikailakshmi, Tamilian Migration into Karnataka(The period of chola conquest of southern Karnataka and the consolidation of power from 850-1279 A. D., Page.243). After Rajaraja has 23rd regnal year, he did not make any conquests in this region. At the end of Rajaraja's reigon, the entire southern Karnataka comprising the modern districts Kolar, Bangalore, Mysore, Mandya, Tumkur and to some extent Coorg were firmly under Chola control.(Usha R. Vikailakshmi, Tamilian Migration into Karnataka(The period of chola conquest of southern Karnataka and the consolidation of power from 850-1279 A. D., Page 243). ಚೋಳ ರಾಜರು ದಕ್ಷಿಣ ಭಾರತದಲ್ಲಿ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿರುವುದು ಮತ್ತು ಆಡಳಿತ ನಡೆಸಿರುವುದನ್ನು ಉಲ್ಲೇಖಗಳಿಂದ ತಿಳಿಯಬಹುದು.

ತಮಿಳುನಾಡಿನ ರಾಜಕೀಯ ಮತ್ತು ಧಾರ್ಮಿಕ ಕಾರಣಕ್ಕಾಗಿ ವಲಸೆ ಬಂದು ನೆಲೆಸಿರುವ ಕುರಿತು 'ದಕ್ಷಿಣ ಭಾರತದ ಭಕ್ತಿಪಂಥದ ಚಳುವಳಿಯಲ್ಲಿ ಕಂಡುಬರುವ ಶ್ರೀರಾಮಾನುಜಾಚಾರ್ಯರು ತಮಿಳುನಾಡಿನಲ್ಲಿ ಜನಿಸಿ ಭಾರತದಾದ್ಯಂತ ಸಂಚರಿಸಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪಸರಿಸಿದವರು. ಇವರು ತಮ್ಮ ತತ್ವ ಮತ್ತು ಸಿದ್ಧಾಂತವನ್ನು ಪ್ರಚಾರ ಮಾಡಲು ಉತ್ತರ ಭಾರತದ ಶ್ರೀನಗರ, ಕಾಶಿ ಇತರೆ ಪ್ರದೇಶಗಳಲ್ಲಿ ಸಂಚರಿಸಿದವರು. ಹಾಗೆಯೇ ರಾಮಾನುಜಾಚಾರ್ಯರು ತಮ್ಮ ಭಾರತದ ಪ್ರವಾಸವನ್ನು ಮುಗಿಸಿ ಮತ್ತೆ ತಮಿಳುನಾಡಿಗೆ ಬಂದು ನೆಲೆಸಿದರು. ನಂತರ ವೈಷ್ಣವ ಒಮ್ಮತದ ಪ್ರಚಾರ ಮಾಡತೊಡಗಿದರು. ಇದರಿಂದ ರಾಮಾನುಜರ ಖ್ಯಾತಿ ಮುಗಿಲು ಮುಟ್ಟಿತು. ಆಗ ಚೋಳರಾಜನಾದ ಕುಲೋತ್ತುಂಗ ಚೋಳನು ಉತ್ಕಟ ಶೈವಭಕ್ತನಾಗಿದ್ದನು. ವೈಷ್ಣವ ಧರ್ಮದ ಪ್ರಚಾರವನ್ನು ಸಹಿಸದ ಅವನು ರಾಮಾನುಜ ಹಾಗೂ ಅವರ ಶಿಷ್ಯರಿಗೆ ಕಿರುಕುಳ ನೀಡಲಾರಂಭಿಸಿದ. ರಾಮಾನುಜರ ಶಿಷ್ಯರಲ್ಲಿ ಒಬ್ಬನಾದ ಕೂರೇಶನು ಶಿವಪಾರಮ್ಯ ಒಪ್ಪಲು ನಿರಾಕರಿಸಿದಾಗ ಅವನ ಎರಡು ಕಣ್ಣುಗಳನ್ನು ಕುಲೋತ್ತುಂಗ ಚೋಳ ಕೀಳಿಸಿದನೆಂದು ಪ್ರತೀತಿ ಇದೆ. ಈ ಕಾರಣದಿಂದ ಕೆಲವು ಶಿಷ್ಯರೊಡನೆ ರಾಮಾನುಜರು ಕರ್ನಾಟಕದ ದಕ್ಷಿಣ ಭಾಗವನ್ನು ಆಳುತ್ತಿದ್ದ ಹೊಯ್ಸಳ ರಾಜ್ಯಕ್ಕೆ ಬಂದರು. ಕ್ರಿ.ಶ. ೧೧೯೬ರಲ್ಲಿ ಚೋಳರಾಜನ ಕಿರುಕುಳವನ್ನು ತಪ್ಪಿಸಿಕೊಳ್ಳಲು ರಾಮಾನುಜರು ಮೈಸೂರಿಗೆ ಬಂದರೆಂದು ಗುರುಪರಂಪರೆಯಲ್ಲಿ ನಿರೂಪಿಸಿರುವ ಆಚಾರ್ಯರ ಜೀವನದಿಂದ ತಿಳಿದುಬರುತ್ತದೆ'(ಬಸವರಾಜ್ ಹೆಚ್. ಎಂ., ೨೦೦೫, ದಕ್ಷಿಣ ಭಾರತದ ಇತಿಹಾಸ, ಪುಟ-೪೨೭). 'ರಾಮಾನುಜರು ಕರ್ನಾಟಕಕ್ಕೆ ಬಂದು ೨೦ ವರ್ಷ ನೆಲೆಸಿದ್ದರು. ಶ್ರೀರಾಮಾನುಜಾಚಾರ್ಯರು ಕರ್ನಾಟಕದಲ್ಲಿ ಮತೋದ್ಧಾರ ಕೆಲಸವನ್ನು ಕೈಗೊಂಡಾಗ ಭಟ್ಟರು, ಹೆಬ್ಬಾರರು, ಹೆಮ್ಮಿಗೆಯರು, ಕದಂಬಿಯರು, ಕಂದಾಡೆಯರು,

ನಲ್ಲಾನ ಚಕ್ರವರ್ತಿ, ತಾತಾಚಾರ್ಯರು ಮತ್ತಿತರ ಧರ್ಮನಿಷ್ಠ ಮತ್ತು ಪಾಂಡಿತ್ಯದಿಂದ ಕೂಡಿದ ತಮಿಳು ಸಂಸಾರಗಳು ಹಾಗೂ ಅನೇಕ ಬ್ರಾಹ್ಮಣೇತರ ಜನಾಂಗದವರು ಕರ್ನಾಟಕದಲ್ಲಿ ಬಂದು ನೆಲಸಿದರು ಎಂಬುದಾಗಿ ಕಲ್ಚರಲ್ ಹೆರಿಟೇಜ್ ಆಫ್ ಇಂಡಿಯಾದಿಂದ ತಿಳಿದುಬರುತ್ತದೆ ಎಂದು ತಿಳಿಸುತ್ತಾರೆ (ಬಸವರಾಜ್ ಹೆಚ್. ಎಂ., ೨೦೦೫, ದಕ್ಷಿಣ ಭಾರತದ ಇತಿಹಾಸ, ಪುಟ-೪೨೮). ಹೀಗೆ ತಮ್ಮ ಧರ್ಮ ಮತ್ತು ಆಚರಣೆಗಳನ್ನು ಉಳಿಸಿಕೊಳ್ಳಲು ಮತ್ತು ರಾಜಪ್ರಭುತ್ವದ ಒತ್ತಡದಿಂದ ಪಾರಾಗಲು ರಾಮಾನುಜಾಚಾರ್ಯರು ತಮಿಳುನಾಡನ್ನು ಬಿಟ್ಟು ಕರ್ನಾಟಕದ ದಕ್ಷಿಣ ಭಾಗಕ್ಕೆ ವಲಸೆ ಬಂದು ನೆಲೆಸುತ್ತಾರೆ. ತಮ್ಮೊಂದಿಗೆ ತಮ್ಮ ಶಿಷ್ಯರನ್ನು, ಅನುಯಾಯಿಗಳನ್ನು ಕರೆತರುತ್ತಾರೆ. ಹೀಗೆ ಕರ್ನಾಟಕದ ದಕ್ಷಿಣ ಭಾಗಕ್ಕೆ ಬಂದ ಇವರು ತಮ್ಮ ಧರ್ಮ, ಸಿದ್ಧಾಂತಗಳನ್ನು ಪ್ರಚಾರ ಮಾಡಲು ಪ್ರಾರಂಭಿಸುತ್ತಾರೆ. ಈ ಭಾಗಗಳಲ್ಲಿ ತಮ್ಮ ಸಂಪ್ರದಾಯಗಳನ್ನು ಮುಂದುವರೆಸುತ್ತಾರೆ. 'ರಾಮಾನುಜಾಚಾರ್ಯರು ತಮಿಳು ನಾಡಿನಿಂದ ಕರ್ನಾಟಕದ ದಕ್ಷಿಣ ಭಾಗದಲ್ಲಿ ಹಲವು ದೇವಾಲಯಗಳ ನಿರ್ಮಾಣಕ್ಕೆ ಕಾರಣವಾಗುತ್ತಾರೆ. ಅವುಗಳಲ್ಲಿ ಮೇಲುಕೋಟೆಯಲ್ಲಿ ತಿರುನಾರಾಯಣ ದೇವಾಲಯವನ್ನು ಕಟ್ಟಿಸಿ, ಅಲ್ಲಿ ರಾಮಪ್ರಿಯ ಎಂಬ ವಿಷ್ಣುವಿನ ವಿಗ್ರಹವನ್ನು ಪ್ರತಿಷ್ಠಾಪಿಸಿದರು. ನಂತರ ವಿಷ್ಣುವರ್ಧನ ಮೇಲುಕೋಟೆಯಲ್ಲಿ ಯತಿರಾಜ ಮಠವನ್ನು ಸ್ಥಾಪಿಸಿ, ಅದರ ಪೋಷಣೆಗಾಗಿ ಅನೇಕ ಭೂಮಿಗಳನ್ನು ದತ್ತಿಯಾಗಿ ಬಿಟ್ಟುಕೊಟ್ಟರು. ಬೇಲೂರಿನಲ್ಲಿ ಚನ್ನಕೇಶವ ದೇವಾಲಯ, ತಲಕಾಡಿನಲ್ಲಿ ಕೀರ್ತಿನಾರಾಯಣ ದೇವಾಲಯ, 'ತೊಂಡನೂರು' ಮತ್ತು ಹರದನಹಳ್ಳಿಗಳಲ್ಲಿ ವಿಜಯನಾರಾಯಣ ದೇವಾಲಯಗಳ ನಿರ್ಮಾಣಕ್ಕೆ ಕಾರಣರಾದರು. ಈ ವೈಷ್ಣವ ಪುಣ್ಯಕ್ಷೇತ್ರಗಳ ಸ್ಥಾಪನೆಯಿಂದ ಕರ್ನಾಟಕದ ಶ್ರೀವೈಷ್ಣವ ಪಂಥಾವಲಂಬಿಗಳು ತಮಿಳುನಾಡಿನ ಯಾತ್ರಾಸ್ಥಳಗಳಿಗೂ ಮತ್ತು ತಮಿಳುನಾಡಿನಿಂದ ಭಕ್ತಾದಿಗಳು ಕರ್ನಾಟಕದ ಶ್ರೀವೈಷ್ಣವ ಕ್ಷೇತ್ರಗಳಿಗೂ ಯಾತ್ರಾರ್ಥಿಗಳಾಗಿ ಹೋಗಿ ಬರುವುದು ಆಚರಣೆಗೆ ಬಂದಿತು'(ಬಸವರಾಜ್ ಹೆಚ್. ಎಂ., ೨೦೦೫, ದಕ್ಷಿಣ ಭಾರತದ ಇತಿಹಾಸ, ಪುಟ ೪೩೧). ಹೀಗೆ ರಾಮಾನುಜಾಚಾರ್ಯರು ತಮ್ಮೊಂದಿಗೆ ಬಂದ ಅನುಯಾಯಿಗಳನ್ನು ಇಲ್ಲೆ ನೆಲೆಸುವಂತೆ ಮಾಡಿದರು. ಇದರೊಂದಿಗೆ ತಮಿಳುನಾಡಿಗೂ ಕರ್ನಾಟಕದ ಭಾಗಗಳಿಗೂ ಸಂಬಂಧ ಏರ್ಪಡುವಲ್ಲಿ ಪಾತ್ರ ವಹಿಸಿದರು. ಪ್ರಸ್ತುತ ದಕ್ಷಿಣ ಕರ್ನಾಟಕದ ಹಲವು ಭಾಗಗಳಲ್ಲಿ ಶ್ರೀವೈಷ್ಣವ ಆರಾಧನೆಯ ತಮಿಳು ಭಾಷಿಕರಿದ್ದಾರೆ. ಮೇಲುಕೋಟೆಯನ್ನು ಇದಕ್ಕೆ ಉದಾಹರಣೆಯಾಗಿ ನೀಡಬಹುದು. ಇಂದಿಗೂ ಇವರು ತಮ್ಮ ಧಾರ್ಮಿಕ ಆವರಣದಲ್ಲಿ ತಮಿಳು ಆಳ್ವಾರನ್ನು ತಮಿಳು ಭಾಷೆಯ ಶ್ಲೋಕಗಳ ಮೂಲಕ ನೆನೆಯುವುದನ್ನು ಕಾಣಬಹುದು. ಹೀಗೆ ಇವರು ತಮ್ಮ ಭಾಷೆಯನ್ನು ಕೆಲವೇ ಕೆಲವು ಸಂದರ್ಭಗಳಲ್ಲಿ ಉಳಿಸಿಕೊಂಡಿದ್ದಾರೆ.

ಶಾಸನಗಳಲ್ಲಿ ಉಲ್ಲೇಖವಿರುವಂತೆ ದಕ್ಷಿಣ ಕರ್ನಾಟಕದಲ್ಲಿ ತಮಿಳು ಭಾಷಿಕರು ನೆಲೆಸಿರುವ ಕುರಿತು ದಾಖಲೆಗಳು ದೊರಕುತ್ತವೆ. ಇದರಲ್ಲಿ ಮುಖ್ಯವಾಗಿ ತಮಿಳುನಾಡಿನ ಬ್ರಾಹ್ಮಣ ಸಮುದಾಯಗಳು ರಾಜರು ಆಳ್ವಿಕೆಯ ಸಮಯದಲ್ಲಿ ಬಂದು ದಕ್ಷಿಣ ಕರ್ನಾಟಕದಲ್ಲಿ ನೆಲೆಸಿದ್ದರ ಬಗ್ಗೆ ಶಾಸನಗಳ ಉಲ್ಲೇಖಗಳನ್ನು ಕಾಣಬಹುದು. ಅವುಗಳಲ್ಲಿ ಬ್ರಹ್ಮದೇಯ ಗ್ರಾಮಗಳು, ಚತುರ್ವೇದಿ ಗ್ರಾಮಗಳು ಹೇಗೆ

ರೂಪುಗೊಂಡವು ಎಂಬುದನ್ನು ತಿಳಿಸಿದ್ದಾರೆ. 'Brahamadeya villages of the chaturvedi managalams: The Cholas planted a number of Brahmin colonies in between agrarian settlements. This in a way, took care the royal interests in the remote parts. The beneficiaries, in this case, the Vedic Brahmis propagated religion, education and at the same time took care of Chola interests in the remote regions. A number of Tamil Brahmins migrated to southern Karnataka since they were the beneficiaries of such grants. There were Rajaraja chaturvedi mangalam, Rajendra simha chaturvedimangalam, Chola Maha Devi Chaturvedimangalam, Vanama Devi chaturvedimangalam etc.(EC, IX, Cp 88C). ಇದರೊಂದಿಗೆ ತಮಿಳು'ಪುರಂ'ಗಳು ಹೇಗೆ ರೂಪುಗೊಂಡವು ಎಂಬುದನ್ನು ಶಾಸನಗಳಲ್ಲಿ ತಿಳಿಸಿದೆ. The purams: These were the mercantile suburbs attached to the nadus. Thus there were Vikrama Cholapuram in kaivara nadu. Nigarili Cholapuram in Kilalai nadu, Vanapuram in Kukkanur nadu and Jagannatha puram in Idai nadu and Mudikonda Cholapuram in Padi nadu(Ibid., Cp-128, Ni-7a, EC X-K1-III & MAR. 1917. page-46). When Rajaraja first conquered Gangavadi he founded mercantile towns to facilitate trade and commerce in the region. This trend was continued during the time of Rajendra. The favourable condition attracted many individual merchants and merchant bodies from south who came and settled here and prospered. This led to a large group of Tamil Vishyas settling down in southern Karnataka.

In general, The survey of inscriptions of both Rajaraja and Rajendra show that a large number of Tamil population immigrated soon after the conquest and it comprised all sections of the society from bureaucrats, Brahmins, Vaishyas to labores and soldiers, They settled there permanently hoping to reap benefits from the fallout of the economic boom. (Usha R. Vikailakshmi, Tamilian Migration into Karnataka (The period of chola conquest of southern Karnataka and the consolidation of power from 850-1279 A. D., Page.246) The Tamil Population in Karnataka during the Chola period had spread to the whole of modern Kolar and Bangalore districts and also

in parts of southern Tumkur district like Kunigal, Madhugiri etc. In MysOre district except the western taluks comprising Heggadevanakote, Hunsur, priyapatan etc, the other areas had predominant Tamil population. (Usha R. Vikailakshmi, Tamilian Migration into Karnataka (The period of chola conquest of southern Karnataka and the consolidation of power from 850-1279 A. D., Page.246) The merchant guilds continued to operate under the Hoysalas and they got complete encouragement for their activities. The Tamil Nanadesis grew into very big organization during the time of the Hoysalas. The Tamilian migration also continued during this period and in fact till the time of Ballala II(1173-1220 A. D.) it was actively encouraged by the Hoysala rulers. This trend was reversed only during the time of Ballala III(1292-1342 A. D.). who not only discouraged Tamilian migration into Karnataka but also paved way for Kannadiga migration into Tamilnadu. (Usha R. Vikailakshmi, Tamilian Migration into Karnataka(The period of chola conquest of southern Karnataka and the consolidation of power from 850-1279 A. D., Page 250). ಹೀಗೆ ತಮಿಳುನಾಡಿನಿಂದ ಕರ್ನಾಟಕಕ್ಕೆ ಆಡಳಿತ, ಅಧಿಕಾರ, ಧಾರ್ಮಿಕ ಆಚರಣೆ, ವ್ಯವಹಾರ ಕಾರಣಗಳಿಗಾಗಿ ಬಂದು ಪುರಂ, ಚತುರ್ವೇದಿ ಮಂಗಳಂಗಳಾಗಿ ರೂಪಿಸಿಕೊಂಡು ಉಳಿಸಿಕೊಂಡಿದ್ದಾರೆ.

ಚಾರಿತ್ರಿಕವಾಗಿ ಚೋಳರನ್ನು ಗಂಗನಾಡಿನಿಂದ(ತಲಕಾಡಿನಿಂದ) ಹೊಯ್ಸಳರ ವಿಷ್ಣುವರ್ಧನನು ರಾಜಕೀಯವಾಗಿ ಸೋಲಿಸಿ ತಮಿಳುನಾಡಿನ ಭಾಗಕ್ಕೆ ಹಿಮ್ಮೆಟ್ಟಿಸುತ್ತಾನೆ. ಆದರೆ ಕರ್ನಾಟಕದ ಕೆಲವು ಭಾಗಗಳಲ್ಲಿ ಉಳಿದುಕೊಂಡಿದ್ದ ಭಾಷಿಕರು, ಅಧಿಕಾರಿಗಳು ಹಾಗೆ ಉಳಿದುಕೊಂಡು ಭಾಷೆ, ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಆದ್ದರಿಂದಾಗಿ ರಾಜಕೀಯವಾಗಿ ಚೋಳರು ಗಂಗರಾಜ್ಯವನ್ನು ಬಿಟ್ಟರೇ ಹೊರೆರತು, ಭಾಷೆ-ಸಮಾಜ-ಸಾಂಸ್ಕೃತಿಕವಾಗಿ ಹಾಗೆಯೇ ಉಳಿಸಿಕೊಂಡರು.

೨. **ಸ್ವಾತಂತ್ರ್ಯಪೂರ್ವದಲ್ಲಿ:** ಸ್ವಾತಂತ್ರ್ಯಪೂರ್ವ ಎಂದರೆ ವಿಜಯನಗರ ಅರಸರ ಅವನತಿಯಿಂದ ೧೯೪೭ಕ್ಕಿಂತಲೂ ಮುಂಚಿತವಾಗಿ ಕರ್ನಾಟಕಕ್ಕೆ ತಮಿಳುನಾಡಿನಿಂದ ವಲಸೆ ಬಂದು ನೆಲೆಸಿರುವವರು. ಈ ಕುರಿತು ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಇವರು ಕೆಲವು ತಮಿಳು ಭಾಷಿಕರ ಮಾಹಿತಿಯಂತೆ ಸುಮಾರು ೭೦ರಿಂದ ೧೩೦ ವರ್ಷಗಳ ಹಿಂದೆಯೇ ಹಿರಿಯರು ಈ ಪ್ರದೇಶಗಳಿಗೆ ವಲಸೆ ಬಂದಿರುವುದಾಗಿ ತಿಳಿಸುತ್ತಾರೆ. "ಆ ಸಮಯದಲ್ಲಿ ತಮಿಳುನಾಡಿನ ನಮ್ಮ ಭಾಗದಲ್ಲಿ ಬರಗಾಲವಿದ್ದ ಕಾರಣಕ್ಕೆ ನಾವು ಕಾವೇರಿ ನದಿಯ ಮೇಲ್ಭಾಗಕ್ಕೆ ವಲಸೆ ಬಂದೆವು" ಎಂದು ತಿಳಿಸುತ್ತಾರೆ. ಇನ್ನು ಕೆಲವರು ಹೊಸಪೇಟೆ

ಮತ್ತು ಕಡ್ಡಿರಾಂಪುರ ಪರಿಸರದ ತಮಿಳುಭಾಷಿಕರು ತುಂಗಭದ್ರಾ ನದಿಯ ದಡದಲ್ಲಿ ನೀರಾವರಿ ವ್ಯವಸ್ಥೆ ಇದ್ದುದರಿಂದ ತಮಿಳುನಾಡಿನಿಂದ ಸೇಲಂ ಬಾಳೆಯನ್ನು ಇಲ್ಲಿ ತಂದು ಬೆಳೆದೆವು ಎಂದು ಹೇಳುತ್ತಾರೆ. ಇನ್ನು ಕೆಲವರು ತಮಿಳುನಾಡಿನಿಂದ ಬಹು ಹಿಂದೆಯೇ ಹಿರಿಯೂರಿನಲ್ಲಿ ಕೃಷಿ, ಕೂಲಿ ಕೆಲಸಗಳಿಗೆ ಬಂದಿರುವುದಾಗಿ ಹೇಳುತ್ತಾರೆ. ಆದರೆ ಇವುಗಳಿಗೆ ಸರಿಯಾದ ಯಾವುದೇ ದಾಖಲೆಗಳು ಇಲ್ಲದಿರುವುದನ್ನು ಕಾಣಬಹುದು. ಆದರೆ ಇವರುಗಳು ಇಂದಿಗೂ ತಮಿಳು ಭಾಷೆಯನ್ನು ತಮ್ಮ ಮನೆಮಾತಾಗಿ ಬಳಕೆ ಮಾಡುತ್ತಾರೆ.

ಬ್ರಿಟಿಷ್ ಆಳ್ವಿಕೆಯ ಸಂದರ್ಭದಲ್ಲಿ ತಮಿಳು ಭಾಷಿಕರು ಅಧಿಕಾರಿಗಳಾಗಿ ಮತ್ತು ಸೇವಕರಾಗಿ ಕರ್ನಾಟಕಕ್ಕೆ ಬಂದಿರುವ ಕುರಿತು ಕೆಲವು ಆಧಾರಗಳಿವೆ. ತಮಿಳರ ವಲಸೆ ಕುರಿತು 'ರಾಜಕೀಯವಾಗಿ ಮೊದಲು ಫ್ರೆಂಚರು, ನಂತರ ಬ್ರಿಟಿಷರು ಬೆಂಗಳೂರಿನಲ್ಲಿ ತಮಿಳು ಬೇರೂರಲು ಕಾರಣರಾದರು.(ಫಾದರ್ ಚಸರಾ, ಕನ್ನಡ ಮೊಳೆತದ್ದು, ಚಿಗುರಿದ್ದು, ಜನಪರ ಮಾತುಕತೆ, ಮೇ ೨೦೧೭). ಇದೇ ರೀತಿಯಲ್ಲಿ ಮೈಸೂರು ದಿವಾನರ ಆಳ್ವಿಕೆಯ ಸಮಯದಲ್ಲಿ ತಮಿಳುನಾಡಿನ ಜನರನ್ನು ಕರೆತರಲಾಯಿತು ಎಂದು ತಿಳಿಸುತ್ತಾರೆ. ಆದರೆ ಇದಕ್ಕೆ ನಿರ್ದಿಷ್ಟವಾದ ಆಧಾರಗಳು ಸಿಗುವುದಿಲ್ಲ.

೧೯೦೦ರ ಆಸುಪಾಸಿನಲ್ಲಿ ಕರ್ನಾಟಕದಲ್ಲಿ ಆಳ್ವಿಕೆಯಲ್ಲಿದ್ದ ಮೈಸೂರು ದಿವಾನರು ಮತ್ತು ಬ್ರಿಟಿಷ್ ಅಧಿಕಾರಿಗಳು ಸಾರ್ವಜನಿಕ ಅನುಕೂಲಕ್ಕಾಗಿ ಹಲವು ಯೋಜನೆಗಳನ್ನು ಜಾರಿಗೆ ತರುತ್ತಾರೆ. ಅದರಲ್ಲಿ ಕಾರ್ಖಾನೆಗಳು, ಅಣೆಕಟ್ಟುಗಳ ನಿರ್ಮಾಣ ಸೇರಿದ್ದವು. ಹೀಗೆ ಅಣೆಕಟ್ಟುಗಳನ್ನು ನಿರ್ಮಾಣ ಮಾಡಲು ತಮಿಳುನಾಡಿನ ಜನರು ವಲಸೆ ಬಂದಿರುವ ಕುರಿತು ಮಾಹಿತಿ ನೀಡುತ್ತಾರೆ. ಅಣೆಕಟ್ಟು ನಿರ್ಮಾಣ ಮಾಡಲು ಕರೆತಂದ ತಮಿಳು ಭಾಷಿಕರ ಬಗ್ಗೆ ಯಾವುದೇ ಮಾಹಿತಿಗಳು ಅಧಿಕೃತ ಆಧಾರಗಳಾಗಿ ಸಿಗುವುದಿಲ್ಲ. ಆದರೆ ಕರ್ನಾಟಕದ ಚಿಕ್ಕಮಗಳೂರು, ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಲ್ಲಿ ವಾಸವಾಗಿರುವವದರಿಂದ ಮಾಹಿತಿಯನ್ನು ಸಂಗ್ರಹಿಸಿದಾಗ ನಾವು ಅಣೆಕಟ್ಟುಗಳ ನಿರ್ಮಾಣ ಸಮಯದಲ್ಲಿ ತಮಿಳುನಾಡಿನಿಂದ ಇಲ್ಲಿಗೆ ಬಂದಿರುವುದಾಗಿ ತಿಳಿಸುತ್ತಾರೆ. ಈ ಕುರಿತು ಗಮನಿಸಿದರೆ ಮೈಸೂರು ಆಳ್ವಿಕೆಯಲ್ಲಿ ೧೮೯೭ರಲ್ಲಿ ಹಿರಿಯೂರು ತಾಲ್ಲೂಕಿನ ಮಾರಿಕಣಿವೆ ಸ್ಥಳದಲ್ಲಿ ವೇದಾವತಿ ನದಿಗೆ ಅಣೆಕಟ್ಟು ನಿರ್ಮಾಣ ಮಾಡಲಾಗಿದೆ. ಈ ಸಮುದಾಯದಲ್ಲಿ ಹಿರಿಯೂರು ಮತ್ತು ಹೊಸದುರ್ಗ ತಾಲ್ಲೂಕುಗಳಲ್ಲಿ ವಾಸವಾಗಿರುವ ತಮಿಳು ಭಾಷಿಕರು ವಲಸೆ ಬಂದಿರುವುದಾಗಿ ತಿಳಿಸುತ್ತಾರೆ. ಇವರು ಹಿರಿಯೂರು ತಾಲ್ಲೂಕಿನಲ್ಲಿ ಹೆಚ್ಚಿರುವುದನ್ನು ಕಾಣಬಹುದು. ಹಿರಿಯೂರು ತಾಲ್ಲೂಕಿನಲ್ಲಿ ವಾಣಿವಿಲಾಸಪುರ, ಆದಿವಾಲ, ಹಿರಿಯೂರು ನಗರ, ಲಕ್ಕವಳ್ಳಿ, ಮಸ್ಕಲ್, ಬಬ್ಬೂರ್ ಫಾರಂನಲ್ಲಿ ಇವರು ವಾಸವಾಗಿದ್ದಾರೆ.

ಕೃಷ್ಣರಾಜಸಾಗರ ಅಣೆಕಟ್ಟು ಶ್ರೀರಂಗಪಟ್ಟಣದ ಹತ್ತಿರದಲ್ಲಿ ಕಾವೇರಿ ನದಿಗೆ ಕಟ್ಟಲಾಗಿದ್ದು, ಇದಕ್ಕೆ ೧೯೧೧ರಲ್ಲಿ ಮೊದಲು ಪ್ರಾರಂಭಗೊಂಡು ೧೯೩೨ರಲ್ಲಿ ಪೂರ್ಣಗೊಂಡಿದೆ ಆ ಸಮಯದಲ್ಲಿ ಅಣೆಕಟ್ಟು ಕಟ್ಟಲು ಕೂಲಿ ಕಾರ್ಮಿಕರಾಗಿ ತಮಿಳುನಾಡಿನಿಂದ ಜನರು ವಲಸೆ ಬಂದಿರುವುದಾಗಿ ತಿಳಿಸುತ್ತಾರೆ. ಇವರು ಮೈಸೂರು ಮತ್ತು ಕೆ.ಆರ್.ಎಸ್. ಸುತ್ತಲೂ ವಾಸವಾಗಿದ್ದಾರೆ.

ಮೈಸೂರು ದಿವಾನರ ಆಳ್ವಿಕೆಯ ಸಮಯದಲ್ಲಿ ವಿಶ್ವೇಶ್ವರಯ್ಯ ಅವರು ೧೯೧೮ರಲ್ಲಿ ಭದ್ರಾವತಿ ಕಬ್ಬಿಣ ಕಾರ್ಖಾನೆ, ಕಾಗದ ಕಾರ್ಖಾನೆಗಳನ್ನು ಪ್ರಾರಂಭಿಸಿದರು. ಈ ಕಾರ್ಖಾನೆಗಳಲ್ಲಿ ಕೆಲಸ ಮಾಡಲು ತಮಿಳು ಭಾಷಿಕರು ಕೆಲಸ ಮಾಡುತ್ತಿದ್ದಾರೆ. ಭದ್ರಾವತಿ ಕಾಗದ ನಗರ, ನ್ಯೂ ಟೌನ್, ವಿಶ್ವನಗರ, ಭದ್ರಾಕಾಲೋನಿ, ಅರಳಿಹಳ್ಳಿ, ಪಿಡಬ್ಲ್ಯೂ ಕಾಲೋನಿ, ಎನ್‌ಎಮ್‌ಸಿ ಕಾಲೋನಿ ಪ್ರದೇಶಗಳಲ್ಲಿ ವಾಸವಾಗಿದ್ದಾರೆ.

ಹೊಸಪೇಟೆಯ ತಾಲ್ಲೂಕಿನಲ್ಲಿ ತುಂಗಭದ್ರಾ ನದಿಗೆ ೨೮ ಫೆಬ್ರವರಿ ೧೯೪೫ರಲ್ಲಿ ಅಣೆಕಟ್ಟನ್ನು ನಿರ್ಮಿಸಲು ಪ್ರಾರಂಭಿಸಿದರು. ಆ ಕಾಲಕ್ಕೆ ಅಣೆಕಟ್ಟು ಕಟ್ಟಲು ಕೂಲಿ ಕಾರ್ಮಿಕರಾಗಿ ತಮಿಳುನಾಡಿನಿಂದ ಜನರು ವಲಸೆ ಬಂದು ಹೊಸಪೇಟೆ ತಾಲ್ಲೂಕು ಮತ್ತು ಬಳ್ಳಾರಿ ತಾಲ್ಲೂಕಿನಲ್ಲಿ ನೆಲೆಸಿದ್ದಾರೆ. ಹೆಚ್ಚಾಗಿ ಹೊಸಪೇಟೆಯಲ್ಲಿ ಟಿ.ಬಿ.ಡ್ಯಾಮ್‌ನ ನಿಶಾನಿ ಕ್ಯಾಂಪ್, ಮಚಲಿ ಕ್ಯಾಂಪ್, ಪಬ್ಲಿಕ್ ಲೇಬರ್ ಕ್ಯಾಂಪ್, ಕಮಲಾಪುರ, ಕಡ್ಡಿರಾಂಪುರ ಪ್ರದೇಶಗಳಲ್ಲಿ ಕಾಣಬಹುದು.

೧೯೪೭ರಲ್ಲಿ ಪ್ರಾರಂಭವಾದ ಭದ್ರಾ ಅಣೆಕಟ್ಟು ಶಿವಮೊಗ್ಗ ಜಿಲ್ಲೆಯ ಭದ್ರಾವತಿ ಮತ್ತು ತರೀಕೆರೆ ಗಡಿಭಾಗದಲ್ಲಿದೆ. ಈ ಅಣೆಕಟ್ಟನ್ನು ನಿರ್ಮಾಣ ಮಾಡಲು ತಮಿಳುನಾಡಿನಿಂದ ವಲಸೆ ಬಂದಿರುವ ಕುರಿತು ಮಾಹಿತಿ ನೀಡುತ್ತಾರೆ. ಇವರು ಹುಣಸೆಕಟ್ಟೆ ಜಂಕ್ಷನ್, ತಮ್ಮಡಿಹಳ್ಳಿ, ಕರಗಲಸರ, ಇಂದ್ರಾನಗರ, ಸಿಗನಹಳ್ಳಿ, ತಳವಾರಘಟ್ಟ, ಶಾಂತಿನಗರ, ಚಿನ್ನರಾಜ್ ಕ್ಯಾಂಪ್, ಚೌಡಿಕಟ್ಟೆ, ಲಕ್ಕಿಕೊಪ್ಪ, ಗೋಣಿಬೀಡು, ಮಾಲೇನಹಳ್ಳಿ ಕ್ಯಾಂಪ್, ಲಕ್ಕವಳ್ಳಿ, ಗ್ಯಾರೇಜ್ ಕ್ಯಾಂಪ್ ಪ್ರದೇಶಗಳಲ್ಲಿ ವಾಸವಾಗಿದ್ದಾರೆ.

ಒಟ್ಟಾರೆಯಾಗಿ ಸ್ವಾತಂತ್ರ್ಯಪೂರ್ವದಲ್ಲಿ ತಮಿಳುನಾಡಿನಿಂದ ಕರ್ನಾಟಕಕ್ಕೆ ವಲಸೆ ಬಂದಿರುವ ಇವರು ಕೌಶಲ್ಯಾಧಾರಿತ ಕೆಲಸದಲ್ಲಿ ಹೆಚ್ಚು ಪ್ರಾವೀಣ್ಯತೆಯನ್ನು ಹೊಂದಿದ್ದು ಬಹುತೇಕರು ಕಟ್ಟಡ ನಿರ್ಮಾಣ, ಕಾರ್ಖಾನೆಗಳಲ್ಲಿ ಕೆಲಸ ಮಾಡಲು ಬಂದಿರುವುದನ್ನು ತಿಳಿಯಬಹುದು. ಸುಮಾರು ೭೦ ರಿಂದ ೧೩೦ ವರ್ಷಗಳ ಹಿಂದೆಯೇ ಕರ್ನಾಟಕಕ್ಕೆ ಬಂದಿರುವ ಇವರು ಗುಂಪುಗಳಾಗಿ ವಾಸ ಮಾಡುವ ಮೂಲಕ ತಮ್ಮ ಭಾಷೆ ಮತ್ತು ಸಂಸ್ಕೃತಿಯನ್ನು ಉಳಿಸಿಕೊಂಡಿದ್ದಾರೆ. ಆ ಮೂಲಕ ಭಾಷಾದ್ವೀಪಗಳಾಗಿ ಉಳಿದುಕೊಂಡಿದ್ದಾರೆ.

೩. ಸ್ವಾತಂತ್ರ್ಯ ನಂತರದಲ್ಲಿ: ೧೯೪೭ರ ನಂತರದಲ್ಲಿ ರೈಲ್ವೆ, ರಸ್ತೆ ಸಾರಿಗೆಗಳು, ಉದ್ಯೋಗಗಳಲ್ಲಿ ಆದ ಬದಲಾವಣೆಯಿಂದಾಗಿ ತಮಿಳುನಾಡು ಪ್ರದೇಶದಿಂದ ಕರ್ನಾಟಕದ ವಿವಿಧ ಭಾಗಗಳಿಗೆ ವಲಸೆ ಬಂದಿರುವುದನ್ನು ಇಲ್ಲಿ ಗುರುತಿಸಬಹುದು. ಸ್ವಾತಂತ್ರ್ಯಪೂರ್ವದಲ್ಲಿ ಬಂದಿದ್ದ ತಮಿಳು ಭಾಷಿಕರ ಸಹಾಯದಿಂದಾಗಿ ಎರಡನೇ ಹಂತದಲ್ಲಿ ಕರ್ನಾಟಕಕ್ಕೆ ವಲಸೆ ಬಂದಿರುವುದನ್ನು ಕಾಣಬಹುದು. ಇವರಲ್ಲಿ ಬಹುತೇಕರು ಕೂಲಿ, ಕಟ್ಟಡ ಕಾರ್ಮಿಕರಾಗಿ, ವ್ಯಾಪಾರ ಮಾಡಲು, ಇತರೆ ಕಾರಣಗಳಿಗಾಗಿ ವಲಸೆ ಬಂದಿರುವುದನ್ನು ಕಾಣಬಹುದು. ಆದರೆ ಸ್ವಾತಂತ್ರ್ಯಪೂರ್ವದಲ್ಲಿ ಈ ರೀತಿಯಾಗಿ ೧೯೪೭ರ ನಂತರದಲ್ಲಿ ವಲಸೆ ಬಂದಿರುವವರ ಸಂಖ್ಯೆಯನ್ನು ಸ್ವಾತಂತ್ರ್ಯಪೂರ್ವಕ್ಕೆ ಹೋಲಿಸಿಕೊಂಡರೆ ಕಡಿಮೆ ಇದೆ.

ಒಟ್ಟಾರೆಯಾಗಿ ತಮಿಳು ಭಾಷಿಕರು ಕರ್ನಾಟಕಕ್ಕೆ ವಲಸೆ ಬಂದಿರುವುದನ್ನು ಈ ಮೂರು ರೀತಿಯಲ್ಲಿ ವರ್ಗೀಕರಿಸಿ ನೋಡಬಹುದು. ಇಂದಿಗೂ ಇವರು ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ

ವಾಸವಾಗಿದ್ದಾರೆ. ಬಹುತೇಕ ತಮಿಳು ಭಾಷಿಕರ ಗುಂಪುಗಳು ಭಾಷಾದ್ವೀಪಗಳ ರೂಪದಲ್ಲಿ ವಾಸವಾಗಿವೆ. ೧೯೯೧ರ ಜನಗಣತಿ ಆಧಾರದ ಮಾಹಿತಿಯಂತೆ ಒಟ್ಟು ೪,೮೦,೩೮೩ ಜನರುರಿದ್ದಾರೆ. ಗ್ರಾಮೀಣ ಪರಿಸರದಲ್ಲಿ ೨,೦೪,೫೭೫ ಜನರು ಮತ್ತು ನಗರ ಪ್ರದೇಶದಲ್ಲಿ ೨,೬೫,೯೮ ಜನರು ವಾಸವಾಗಿದ್ದಾರೆ. ಇದೇ ಜನಗಣತಿಯಲ್ಲಿ ವಲಸೆ ಬಂದಿರುವ ತಮಿಳು ಭಾಷಿಕರ ಕುರಿತು ಜಿಲ್ಲಾವಾರು ಮಾಹಿತಿ ಈ ಕೆಳಗಿನಂತಿದೆ.

| ಜಿಲ್ಲೆ | ಒಟ್ಟು–ಗ್ರಾಮೀಣ–ನಗರ | ಒಟ್ಟು ಜನಸಂಖ್ಯೆ |
|---|---|---|
| ಬೆಂಗಳೂರು | ಒಟ್ಟು | ೨,೮೬,೮೭೩ |
| | ಗ್ರಾಮೀಣ | ೧,೧೩,೩೭೪ |
| | ನಗರ | ೧,೬೫,೫೮೯ |
| ಬೆಂಗಳೂರು ಗ್ರಾಮಾಂತರ | ಒಟ್ಟು | ೮,೫೦೫ |
| | ಗ್ರಾಮೀಣ | ೪,೮೫೫ |
| | ನಗರ | ೩,೪೮೦ |
| ಬೆಳಗಾವಿ | ಒಟ್ಟು | ೨,೩೭೦ |
| | ಗ್ರಾಮೀಣ | ೭೧೦ |
| | ನಗರ | ೧,೬೩೦ |
| ಬಳ್ಳಾರಿ | ಒಟ್ಟು | ೬,೨೭೮ |
| | ಗ್ರಾಮೀಣ | ೨,೩೫೮ |
| | ನಗರ | ೩,೯೦೦ |
| ಬೀದರ | ಒಟ್ಟು | ೪೩೦ |
| | ಗ್ರಾಮೀಣ | ೧೩೦ |
| | ನಗರ | ೩೦೦ |
| ಬಿಜಾಪುರ | ಒಟ್ಟು | ೧೩೪೦ |
| | ಗ್ರಾಮೀಣ | ೪೩೦ |
| | ನಗರ | ೮೭೦ |
| ಚಿಕ್ಕಮಗಳೂರು | ಒಟ್ಟು | ೧೨೬೮೦ |
| | ಗ್ರಾಮೀಣ | ೬೯೯೦ |
| | ನಗರ | ೫೫೮೦ |
| ಚಿತ್ರದುರ್ಗ | ಒಟ್ಟು | ೬೯೦೯ |

| | | |
|---|---|---|
| | ಗ್ರಾಮೀಣ | ೩೧೬೦ |
| | ನಗರ | ೩೬೪೯ |
| ದಕ್ಷಿಣ ಕನ್ನಡ | ಒಟ್ಟು | ೧೨೧೪೫ |
| | ನಗರ | ೪೨೫೦ |
| | ಗ್ರಾಮೀಣ | ೭೭೦೫ |
| ಧಾರವಾಡ | ಒಟ್ಟು | ೪೬೦೦ |
| | ಗ್ರಾಮೀಣ | ೯೦೦ |
| | ನಗರ | ೩೬೧೦ |
| ಗುಲಬರ್ಗಾ | ಒಟ್ಟು | ೧೪೧೦ |
| | ಗ್ರಾಮೀಣ | ೬೪೦ |
| | ನಗರ | ೭೭೦ |
| ಹಾಸನ | ಒಟ್ಟು | ೭೧೨೮ |
| | ಗ್ರಾಮೀಣ | ೨೭೩೦ |
| | ನಗರ | ೪೩೩೮ |
| ಕೊಡಗು | ಒಟ್ಟು | ೧೪೬೪೬ |
| | ಗ್ರಾಮೀಣ | ೭೫೨೦ |
| | ನಗರ | ೭೦೩೬ |
| ಕೋಲಾರ | ಒಟ್ಟು | ೨೮೭೫೩ |
| | ಗ್ರಾಮೀಣ | ೧೫೨೭೩ |
| | ನಗರ | ೧೩೦೨೦ |
| ಮಂಡ್ಯ | ಒಟ್ಟು | ೧೨೭೦೦ |
| | ಗ್ರಾಮೀಣ | ೫೮೮೦ |
| | ನಗರ | ೬೬೬೦ |
| ಮೈಸೂರು | ಒಟ್ಟು | ೩೯೬೨೧ |
| | ಗ್ರಾಮೀಣ | ೧೯೮೬೦ |
| | ನಗರ | ೧೯೩೮೧ |
| ರಾಯಚೂರು | ಒಟ್ಟು | ೨೮೨೦ |
| | ಗ್ರಾಮೀಣ | ೧೦೯೦ |

| | | |
|---|---|---|
| | ನಗರ | ೧೬೮೦ |
| ಶಿವಮೊಗ್ಗ | ಒಟ್ಟು | ೨೨೬೫೫ |
| | ಗ್ರಾಮೀಣ | ೧೦೯೩೫ |
| | ನಗರ | ೧೧೫೬೦ |
| ತುಮಕೂರು | ಒಟ್ಟು | ೫೮೫೦ |
| | ಗ್ರಾಮೀಣ | ೨೪೧೦ |
| | ನಗರ | ೩೪೧೦ |
| ಉತ್ತರ ಕನ್ನಡ | ಒಟ್ಟು | ೨೬೭೦ |
| | ಗ್ರಾಮೀಣ | ೧೦೮೦ |
| | ನಗರ | ೧೫೩೦ |

(Migration Tables, Census of India, 1991, Seris-11-Karnataka, Part VA & VB-D Series, Directorate of Cemnsus Operations, Karnataka.)

**೪.೨. ತಮಿಳು ಭಾಷಾದ್ವೀಪಗಳಲ್ಲಿ ಭಾಷಾಬಳಕೆಯ ಸ್ವರೂಪ**

ಈಗಾಗಲೇ ಭಾಷಾದ್ವೀಪಗಳ ಸ್ವರೂಪದಲ್ಲಿ ತಿಳಿದಿರುವಂತೆ ಸ್ಥಳೀಯ ಪರಿಸರದ ಯಾವುದೇ ಸಾಮಾಜಿಕ ಸಂಪರ್ಕವನ್ನು ಹೊಂದದ ಮಹಿಳೆಯರು, ವಯೋವೃದ್ಧರು ಏಕಭಾಷಿಕರಾಗಿದ್ದಾರೆ. ಇದರೊಂದಿಗೆ ವೈವಾಹಿಕ ಸಂಬಂಧದಿಂದ ಕರ್ನಾಟಕಕ್ಕೆ ಬಂದಿರುವ ಮಹಿಳೆಯರು ಏಕಭಾಷಿಕರಾಗಿರುತ್ತಾರೆ. ಇನ್ನು ದ್ವಿಭಾಷಿಕರಾಗಿರುವವರು ಸ್ಥಳೀಯ ಕನ್ನಡಿಗರ ಪರಿಸರದಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ ಪಾಲ್ಗೊಂಡು ಕನ್ನಡ, ತಮಿಳನ್ನು ಬಳಸುತ್ತಾರೆ. ಇನ್ನು ಕೆಲವರು ತಮಿಳು, ತೆಲುಗು ಭಾಷೆಯನ್ನು ಬಳಸುತ್ತಾರೆ. ಈ ಭಾಷಾದ್ವೀಪಗಳಲ್ಲಿ ಬಹುಭಾಷಿಕರಾಗಿರುವವರ ಪ್ರಮಾಣ ಕಡಿಮೆ. ಆದರೆ ಇತ್ತೀಚೆಗೆ ಸ್ಥಳೀಯ ಪರಿಸರದಲ್ಲಿ ಶಿಕ್ಷಣ ಪಡೆಯುತ್ತಿರುವ ಮಕ್ಕಳು ಶಿಕ್ಷಣ ಮತ್ತು ಸಾಮಾಜಿಕವಾಗಿ ಕನ್ನಡಿಗರ ಪರಿಸರದಲ್ಲಿ ಪಾಲ್ಗೊಳ್ಳುತ್ತಿರುವ ಕಾರಣಕ್ಕೆ ತಮಿಳು ಮನೆಭಾಷೆಯಾಗಿ, ಕನ್ನಡ, ಇಂಗ್ಲಿಷ್, ಹಿಂದಿ ಭಾಷೆಗಳನ್ನು ಶಿಕ್ಷಣದ ಭಾಗವಾಗಿ ಕಲಿಯುತ್ತಿದ್ದಾರೆ. ಇದರಿಂದಾಗಿ ತಮಿಳು ಭಾಷಾದ್ವೀಪಗಳಲ್ಲಿ ವಾಸಿಸುತ್ತಿರುವ ಮೂರು ಮತ್ತು ನಾಲ್ಕನೇ ತಲೆಮಾರಿನವರು ಬಹುಭಾಷಿಕರಾಗಿದ್ದಾರೆ. ಇದರೊಂದಿಗೆ ವ್ಯಾಪಾರ ಕಾರಣಕ್ಕಾಗಿ ಬೇರೆ ಬೇರೆ ಭಾಷೆಯ ನಂಟನ್ನು ಹೊಂದಿರುವವರು ಬಹುಭಾಷಿಕರಾಗಿದ್ದಾರೆ.

**೪.೩. ತಮಿಳು ಭಾಷಾದ್ವೀಪಗಳ ಭೌಗೋಳಿಕ ಸ್ವರೂಪ**

ಕರ್ನಾಟಕದ ತಮಿಳು ಭಾಷಾದ್ವೀಪಗಳು ಒಂದೇ ನಗರದಲ್ಲಿ ಗುಂಪು ಗುಂಪುಗಳಾಗಿ ವಾಸ ಮಾಡುತ್ತಿರುವುದನ್ನು ಕಾಣಬಹುದು. ಅಲ್ಲದೇ ಇವುಗಳಲ್ಲಿ ಸಾಮಾಜಿಕ ಭಿನ್ನಾಂಶವಾದ ಜಾತಿ ಆಧರಿಸಿ ಗುಂಪುಗಳಾಗಿ ರಚನೆಯಾಗಿವೆ. ತಮಿಳು ಭಾಷಾದ್ವೀಪಗಳ ಭೌಗೋಳಿಕ ವಿಶೇಷವೆಂದರೆ ಇವು ನದಿ

ತೀರದಲ್ಲಿ ಅಥವಾ ಆಧುನಿಕ ಬೃಹತ್ ಕಟ್ಟಗಳ ನಿರ್ಮಾಣ ಪ್ರದೇಶದಲ್ಲಿ ಹೆಚ್ಚು ನೆಲೆಗೊಂಡಿವೆ. ಉದಾಹರಣೆಗೆ ಆಧುನಿಕ ಬೃಹತ್ ಕಟ್ಟಗಳ ನಿರ್ಮಾಣ ಪ್ರದೇಶಗಳಲ್ಲಿ ಗಮನಿಸುವುದಾದರೆ ಕೆಆರ್‌ಎಸ್ ಅಣೆಕಟ್ಟು ಪ್ರದೇಶದಲ್ಲಿ ತಮಿಳು ಭಾಷಿಕರು ಇರುವುದನ್ನು ಕಾಣುತ್ತೇವೆ. ತುಂಗಭದ್ರಾ ಅಣೆಕಟ್ಟು ಪ್ರದೇಶದಲ್ಲಿ ತಮಿಳು ಭಾಷಿಕರು ಇರುವುದನ್ನು ಕಾಣುತ್ತೇವೆ. ವಾಣಿವಿಲಾಸ ಅಣೆಕಟ್ಟು ಪ್ರದೇಶದಲ್ಲಿ ತಮಿಳು ಭಾಷಿಕರು ವಾಸವಾಗಿರುವುದನ್ನು ಕಾಣುತ್ತೇವೆ. ಹೀಗೆ ಆಧುನಿಕ ಬೃಹತ್ ಕಟ್ಟಡಗಳ ನಿರ್ಮಾಣಕ್ಕೆ ಬಂದ ಇವರು ಇಲ್ಲಿಯೇ ನೆಲೆಯನ್ನು ಕಂಡುಕೊಂಡಿದ್ದಾರೆ. ಈ ಪ್ರದೇಶಗಳು ನದಿ ತೀರದಲ್ಲಿದ್ದು, ಇವರು ಇಲ್ಲಿಯೇ ಕೃಷಿ ಚಟುವಟಿಕೆಯಲ್ಲಿ ಅಥವಾ ಕೃಷಿಯ ಕೂಲಿಕಾರ್ಮಿಕರಾಗಿ ದುಡಿಯುತ್ತಿದ್ದಾರೆ.

**೪.೪. ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿರುವ ತಮಿಳು ಭಾಷಾದ್ವೀಪಗಳ ಸಮೀಕ್ಷೆ**

**೪.೪.೧. ಹಿರಿಯೂರು**

ಇದು ಚಿತ್ರದುರ್ಗ ಜಿಲ್ಲೆಯ ತಾಲ್ಲೂಕು ಆಡಳಿತ ಕೇಂದ್ರವಾಗಿದೆ. ಈ ನಗರದಲ್ಲಿ ಕನ್ನಡ, ಹಿಂದಿ, ತೆಲುಗು, ತಮಿಳು, ಪಂಜಾಬಿ, ಲಂಬಾಣಿ, ಮರಾಠಿ ಇತರೆ ಭಾಷೆಗಳನ್ನಾಡುವ ಜನರು ವಾಸವಾಗಿದ್ದಾರೆ. ನಗರ ಪ್ರದೇಶದಲ್ಲಿ ಕನ್ನಡ ಮತ್ತು ತಮಿಳು ಮಾತನಾಡುವವರ ಸಂಖ್ಯೆ ಹೆಚ್ಚಿದೆ. ನಗರದ ಒಟ್ಟು ಜನಸಂಖ್ಯೆ ೫೬.೪೧೬(೨೦೧೧ರ ಜನಗಣತಿ). ನಗರ ಪ್ರದೇಶದಲ್ಲಿ ಭಗವತಿ ದೇವಸ್ಥಾನ ಹತ್ತಿರ, ತಿರುವಳ್ಳರ ಸ್ಟ್ರೀಟ್, ಠ್ಯಾಗೂರ್ ರಸ್ತೆ, ಕೆ.ಎಂ. ಕೊಟ್ಟಿಗೆ, ವೇದಾವತಿ ನಗರ, ಬೆಂಗಳೂರು ಬೈಪಾಸ್ ರಸ್ತೆಯಲ್ಲಿ ತಮಿಳು ಭಾಷಿಕರು ವಾಸವಾಗಿರುವುದನ್ನು ಕಾಣಬಹುದು. ಭಗವತಿ ದೇವಸ್ಥಾನದ ಹತ್ತಿರ ಗೌಡ ಸಮುದಾಯವು ವಾಸವಾಗಿದ್ದರೆ, ತಿರುವಳ್ಳರ ಸ್ಟ್ರೀಟ್ ಮತ್ತು ಠ್ಯಾಗೂರ್ ರಸ್ತೆಯಲ್ಲಿ ಚಕ್ಕಲಿಯಾರ್ ಸಮುದಾಯಗಳು ಗುಂಪು ಗುಂಪುಗಳಾಗಿವೆ. ವೇದಾವತಿ ನಗರದಲ್ಲಿ ಆದಿ ದ್ರಾವಿಡ ಸಮುದಾಯಕ್ಕೆ ಸೇರಿದವರು ಇದ್ದಾರೆ. ಬೆಂಗಳೂರು ಬೈಪಾಸ್ ರಸ್ತೆಯಲ್ಲಿ ತಮಿಳು ಭಾಷೆಯ ವ್ಯಾಪಾರಿಗಳಿದ್ದಾರೆ. ನಗರ ಪ್ರದೇಶದಲ್ಲಿ ಪ್ರಸ್ತುತ ತಮಿಳು ಮಾಧ್ಯಮ ಶಾಲೆ ಇದೆ. ಇದರಲ್ಲಿ ಒಟ್ಟು ೩೫ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದಾರೆ.

**೪.೪.೨. ಆದಿವಾಲ**

ಹಿರಿಯೂರು ತಾಲ್ಲೂಕು ಕೇಂದ್ರದಿಂದ ಪೂರ್ವಕ್ಕೆ ೬ ಕಿ.ಮೀ. ದೂರದಲ್ಲಿರುವ ಗ್ರಾಮವಿದ್ದು. ಗ್ರಾಮದ ಒಟ್ಟು ಜನಸಂಖ್ಯೆ ൭,೫೫೦. ಇವರು ಕನ್ನಡ ಮತ್ತು ತಮಿಳು ಭಾಷೆಯನ್ನು ಬಳಕೆ ಮಾಡುವುದನ್ನು ಕಾಣಬಹುದು. ಈ ಗ್ರಾಮದಲ್ಲಿ ಹೆಚ್ಚು ತಮಿಳು ಗೌಡ ಸಮುದಾಯದವರಿದ್ದಾರೆ. ಇವರ ವೃತ್ತಿ ಕೃಷಿ. ತೋಟಗಾರಿಕೆ ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಇಲ್ಲಿ ತಮಿಳು ಮಾಧ್ಯಮ ಶಾಲೆ ಚಾಲ್ತಿಯಲ್ಲಿದೆ.

**೪.೪.೩. ಬಬ್ಬೂರು ಫಾರಂ**

ಹಿರಿಯೂರು ತಾಲ್ಲೂಕು ಕೇಂದ್ರದಿಂದ ಪೂರ್ವಕ್ಕೆ ೪ ಕಿ.ಮೀ. ದೂರದಲ್ಲಿರುವ ಈ ಪ್ರದೇಶವು ತೋಟಗಾರಿಕೆ ಇಲಾಖೆಯ ಪ್ರದೇಶವಾಗಿದೆ. ಇದರ ಸುತ್ತಮುತ್ತ ತಮಿಳು ಭಾಷಿಕರು ತೋಟಗಳನ್ನು

ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಇವರು ಪೂರ್ಣಪ್ರಮಾಣದಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಇಲ್ಲಿನ ಬಹುತೇಕ ಜನರಿಗೆ ಕನ್ನಡ ಪರಿಸರದ ಸಂಪರ್ಕ ಕಡಿಮೆಯಿದೆ. ಕನ್ನಡಿಗರ ಪರಿಸರದೊಂದಿಗೆ ವ್ಯಾವಹಾರಿಕ ಸಂಬಂಧವನ್ನು ಹೊಂದಿರುವವರು ಮಾತ್ರ ಕನ್ನಡವನ್ನು ಮಾತನಾಡುತ್ತಾರೆ. ಇಲ್ಲಿ ಗುಂಪಾಗಿರುವುದಕ್ಕಿಂತ ತೋಟದ ಮನೆಗಳಲ್ಲಿ ಇರುವುದೇ ಹೆಚ್ಚು.

**೪.೪.೪. ಮಸ್ಕಲ್**

ಹಿರಿಯೂರು ತಾಲ್ಲೂಕು ಕೇಂದ್ರದಿಂದ ೧೨ ಕಿ.ಮೀ. ದೂರದಲ್ಲಿದೆ. ಒಟ್ಟು ಜನಸಂಖ್ಯೆ ೫,೭೮೨. ಇಲ್ಲಿ ತಮಿಳು ಭಾಷಿಕರು ಮಾತನಾಡುವ ಊರನ್ನು 'ಮಸ್ಕಲ್ ಮಟ್ಟಿ' ಎಂದು ಕರೆಯುತ್ತಾರೆ. ಇಲ್ಲಿ ಎಲ್ಲಾ ಮನೆಯವರು ತಮಿಳು ಭಾಷಿಕರಾಗಿದ್ದಾರೆ. ಗೌಡ, ವಡ್ಡಾರ್, ಚಕ್ಕಳಿಯಾರ್, ಪೆರಿಯಾರ್ ಸಕ್ಲಿ, ಪಲ್ಲವರ, ಪಿಳ್ಳೈಲೈ, ನಾಸರ್, ಆದಿದ್ರಾವಿಡ ಇತರೆ ಸಮುದಾಯಗಳು ವಾಸವಾಗಿವೆ. ಈ ಪರಿಸರದಲ್ಲಿ ತಮಿಳು ಭಾಷೆಯನ್ನು ಹೆಚ್ಚಾಗಿ ಬಳಕೆ ಮಾಡುವುದನ್ನು ಕಾಣಬಹುದು. ಮನೆ ಆವರಣದಲ್ಲಿ ಮತ್ತು ತಮಿಳು ಭಾಷಿಕರ ಹತ್ತಿರ ತಮಿಳು ಬಳಸಿ ಮಾತನಾಡುವ ಮತ್ತು ಕನ್ನಡಿಗರೊಂದಿಗೆ ಮಾತನಾಡುವಾಗ ಕನ್ನಡವನ್ನು ಬಳಕೆ ಮಾಡುತ್ತಾರೆ. ಇಲ್ಲಿನ ಮಕ್ಕಳು ಇಂಗ್ಲಿಷ್ ಮಾಧ್ಯಮ ಅಥವಾ ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಮಾಡುವುದನ್ನು ಕಾಣಬಹುದು.

**೪.೪.೫. ಮಾರಿಕಣಿವೆ**

ಹಿರಿಯೂರು ತಾಲ್ಲೂಕು ಕೇಂದ್ರದಿಂದ ಪಶ್ಚಿಮಕ್ಕೆ ೨೦ ಕಿ.ಮೀ. ದೂರದಲ್ಲಿದೆ. ಒಟ್ಟು ಜನಸಂಖ್ಯೆ: ೨,೫೪೯. ಈ ಗ್ರಾಮದ ಸ್ವಲ್ಪ ದೂರದಲ್ಲಿಯೇ ವೇದಾವತಿ ನದಿಗೆ ವಾಣಿವಿಲಾಸ ಅಣೆಕಟ್ಟನ್ನು ಕಟ್ಟಲಾಗಿದೆ. ಈ ಗ್ರಾಮವನ್ನು ವಾಣಿವಿಲಾಸಪುರ ಎಂದು ಕರೆಯುತ್ತಾರೆ. ಈ ಪ್ರದೇಶದಲ್ಲಿ ಮೊದಲು ತಮಿಳರಿದ್ದು ಇಂದು ಅವರ ಸಂಖ್ಯೆ ಕಡಿಮೆಯಾಗಿದೆ. ಇಲ್ಲಿ ಬೆಸ್ತ ಸಮುದಾಯದ ಜನರು ಹೆಚ್ಚಾಗಿದ್ದದರ ಬಗ್ಗೆ ತಿಳಿಯುತ್ತದೆ.

**೪.೪.೬. ಆರನಕಟ್ಟೆ**

ಹಿರಿಯೂರು ತಾಲ್ಲೂಕು ಕೇಂದ್ರದಿಂದ ಪೂರ್ವಕ್ಕೆ ೧೬ ಕಿ.ಮೀ. ದೂರದಲ್ಲಿದೆ. ಈ ಗ್ರಾಮದಲ್ಲಿ ಹೆಚ್ಚು ತಮಿಳು ಭಾಷಿಕರು ವಾಸ ಮಾಡುತ್ತಿದ್ದಾರೆ. ಇಲ್ಲಿ ತಮಿಳು ಮತ್ತು ಕನ್ನಡ ಭಾಷಿಕರು ವಾಸವಾಗಿದ್ದು, ತಮಿಳು ಭಾಷಿಕರು ಹೆಚ್ಚಾಗಿದ್ದಾರೆ. ಮನೆ ಮತ್ತು ಖಾಸಗಿ ಆವರಣದಲ್ಲಿ ತಮಿಳು ಭಾಷೆಯನ್ನು, ಸಾಮಾಜಿಕ ಮತ್ತು ಕನ್ನಡಿಗರೊಂದಿಗೆ ಕನ್ನಡ ಭಾಷೆಯನ್ನು ಬಳಸುತ್ತಾರೆ. ಈ ಗ್ರಾಮದಲ್ಲಿ ತಮಿಳು ಭಾಷಿಕರ ಮಕ್ಕಳು ಕನ್ನಡ ಮತ್ತು ಇಂಗ್ಲಿಷ್ ಮಾಧ್ಯಮದಲ್ಲಿ ಅಧ್ಯಯನ ಮಾಡುತ್ತಾರೆ. ಈ ಗ್ರಾಮದ ತಮಿಳು ಭಾಷಿಕರು ಕನ್ನಡ ಸಾಹಿತ್ಯದ ಕುರಿತು ಜ್ಞಾನ ಮತ್ತು ಅಭಿಮಾನವನ್ನು ಹೊಂದಿದ್ದಾರೆ.

**೪.೪.೭. ಹೊಸಪೇಟೆ**

ಬಳ್ಳಾರಿ ಜಿಲ್ಲೆಯ ತಾಲ್ಲೂಕು ಆಡಳಿತ ಕೇಂದ್ರವಾದ ಹೊಸಪೇಟೆಯಲ್ಲಿ ಕನ್ನಡ, ತಮಿಳು, ತೆಲುಗು, ಲಂಬಾಣಿ, ಹಿಂದಿ, ಮರಾಠಿ ಇತರೆ ಭಾಷೆಗಳನ್ನು ಬಳಕೆ ಮಾಡುತ್ತಾರೆ. ನಗರದ ಒಟ್ಟು

ಜನಸಂಖ್ಯೆ ೨೦೬,೧೬೭.(೨೦೧೧ರ ಜನಗಣತಿ). ಇಲ್ಲಿ ಕನ್ನಡ ಮತ್ತು ತೆಲುಗು ಮಾತನಾಡುವವರ ಸಂಖ್ಯೆ ಹೆಚ್ಚಿದೆ. ಆಂಧ್ರಪ್ರದೇಶದ ಗಡಿ ಭಾಗವಾದ್ದರಿಂದ ತೆಲುಗು ಭಾಷಿಕರ ಪ್ರಭಾವವನ್ನು ಕಾಣಬಹುದು. ತಮಿಳು ಭಾಷಿಕರು ವಿಜಯನಗರ ಅರಸರ ಕಾಲದಿಂದ, ಸ್ವಾತಂತ್ರ್ಯಪೂರ್ವ ಮತ್ತು ನಂತರದಲ್ಲಿಯೂ ಇಲ್ಲಿಗೆ ವಲಸೆ ಬಂದು ನೆಲೆಸಿದ್ದಾರೆ. ವಿಜಯನಗರ ಅರಸರ ಕಾಲದಲ್ಲಿ ಆಡಳಿತ ಕಾರಣದಿಂದ, ಸ್ವಾತಂತ್ರ್ಯ ಪೂರ್ವದಲ್ಲಿ ಅಣೆಕಟ್ಟು ನಿರ್ಮಾಣ ಮಾಡಲು, ಸ್ವಾತಂತ್ರ್ಯ ನಂತರದಲ್ಲಿ ವ್ಯಾಪಾರ, ಕೂಲಿಕಾರ್ಮಿಕರಾಗಿ ಇಲ್ಲಿಗೆ ಬಂದು ನೆಲೆಸಿದ್ದಾರೆ. ಹೊಸಪೇಟೆ ನಗರದ ಬಹುಭಾಗಗಳಲ್ಲಿ ತಮಿಳರಿರುವುದನ್ನು ಕಾಣಬಹುದು. ಆದರೆ ಪ್ರಮುಖವಾಗಿ ಹೊಸಪೇಟೆ ನಗರದಲ್ಲಿ ತುಂಗಭದ್ರಾ ಡ್ಯಾಮ್‌ನ ಮುಂಭಾಗದಲ್ಲಿ ಕ್ಯಾಂಪ್‌ಗಳಲ್ಲಿ ವಾಸವಾಗಿದ್ದಾರೆ. ಆ ಕ್ಯಾಂಪ್‌ಗಳು ಕೆಳಗಿನಂತಿವೆ.

**೪.೪.೮. ನಿಶಾನಿ ಕ್ಯಾಂಪ್**

ಹೊಸಪೇಟೆ ತಾಲ್ಲೂಕಿನ ತುಂಗಭದ್ರಾ ಡ್ಯಾಮ್‌ನ ಮುಂಭಾಗದಲ್ಲಿ ಇರುವ ಈ ಕ್ಯಾಂಪ್ ವಲಸಿಗ ತಮಿಳು ಭಾಷಿಕರಿಂದ ಕೂಡಿದೆ. ಇಲ್ಲಿ ಬಹುತೇಕ ತಮಿಳು ಗೌಂಡರ್ ಸಮುದಾಯದವರಾಗಿದ್ದು, ಇದರೊಂದಿಗೆ ತುಂಗಭದ್ರಾ ಡ್ಯಾಮ್ ಬೋರ್ಡ್‌ನಲ್ಲಿ ಕೆಲಸ ಮಾಡುವ ಇತರರು ಇದ್ದಾರೆ. ಆದರೆ ಈ ಕ್ಯಾಂಪ್‌ನಲ್ಲಿ ತಮಿಳು ಭಾಷಿಕರು ಹೆಚ್ಚಿರುವುದನ್ನು ಕಾಣಬಹುದು. ಸಾಮಾನ್ಯವಾಗಿ ಮನೆಯ ಆವರಣದಲ್ಲಿ ತಮಿಳು ಭಾಷೆಯನ್ನು ಹಾಗೂ ಸಾಮಾಜಿಕ ಆವರಣದಲ್ಲಿ ಕನ್ನಡ ಅಥವಾ ತೆಲುಗು ಭಾಷೆಯನ್ನು ಬಳಕೆ ಮಾಡುತ್ತಾರೆ. ಬಹುತೇಕರು ಕೃಷಿ ಕೆಲಸವನ್ನು ಮಾಡುತ್ತಾರೆ. ಇನ್ನುಳಿದವರು ಡ್ಯಾಮ್‌ನ, ಬೋರ್ಡ್‌ನ ಕೆಲಸಕ್ಕೆ ಹೋಗುತ್ತಾರೆ. ತಮಿಳು ಭಾಷಿಕರ ಮಕ್ಕಳು ಕನ್ನಡ ಅಥವಾ ಇಂಗ್ಲಿಷ್ ಭಾಷೆಯಲ್ಲಿ ಅಧ್ಯಯನ ಮಾಡುತ್ತಿರುವುದನ್ನು ಕಾಣಬಹುದು.

**೪.೪.೯. ಪಿ.ಎಲ್. ಕ್ಯಾಂಪ್(ಪಬ್ಲಿಕ್ ಲೇಬರ್ ಕ್ಯಾಂಪ್)**

ಹೊಸಪೇಟೆ ಡ್ಯಾಮ್‌ನ ಮುಂಭಾಗದಲ್ಲಿರುವ ಈ ಕ್ಯಾಂಪ್‌ನಲ್ಲಿ ೧೯೧೧ರಿಂದ ಬೇರೆ ಬೇರೆ ಭಾಷಿಕರಿಂದ ಕೂಡಿದೆ ಎಂದು ಮಾಹಿತಿ ನೀಡುತ್ತಾರೆ. 'ಪಿ.ಎಲ್.ಸಿ.' ಎಂದರೆ ಪಬ್ಲಿಕ್ ಲೇಬರ್ ಕ್ಯಾಂಪ್ ಎಂದು. ಅಣೆಕಟ್ಟು ಕಟ್ಟುವಾಗ ತಮಿಳುನಾಡಿನ ಕೆಲವು ಪ್ರದೇಶಗಳಿಂದ ಬಂದವರು ಇಲ್ಲಿಯೇ ವಾಸವಾಗಿದ್ದಾರೆ. ಈ ಕ್ಯಾಂಪ್‌ನ ಆವರಣದಲ್ಲಿ ಆದಿದ್ರಾವಿಡ, ಕ್ರಿಶ್ಚಿಯನ್, ನಾಯಕ, ಮೊದಲಿಯಾರ್ ಮುಂತಾದ ಸಮುದಾಯದವರು ಇದ್ದಾರೆ. ಇವರು ಮನೆಯ ಆವರಣದಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಇವರು ಸಾಮಾಜಿಕವಾಗಿ ಕನ್ನಡಿಗರ ಪರಿಸರದೊಂದಿಗೆ ಕನ್ನಡ ಭಾಷೆಯನ್ನು ಬಳಕೆ ಮಾಡುತ್ತಾರೆ. ಇದರೊಂದಿಗೆ ಈ ಕ್ಯಾಂಪಿನಲ್ಲಿ ಉತ್ತರ ಭಾರತದ ಹಿಂದಿ ಭಾಷೆಯನ್ನು ಬಳಕೆ ಮಾಡುವವರಿದ್ದಾರೆ.

**೪.೪.೧೦. ಕಡ್ಡಿರಾಂಪುರ**

ಹೊಸಪೇಟೆ ತಾಲ್ಲೂಕು ಕೇಂದ್ರದಿಂದ ಹಂಪಿ ದಾರಿಯಲ್ಲಿ ೧೦ ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಒಟ್ಟು ೧೩೩೯ ಜನಸಂಖ್ಯೆ(೨೦೧೧ರ ಜನಗಣತಿ) ಹೊಂದಿದೆ. ೨೬೪ ಕುಟುಂಬಗಳಿವೆ. ಈ

ಗ್ರಾಮದಲ್ಲಿ ಕನ್ನಡ, ತೆಲುಗು, ಲಂಬಾಣಿ ಮತ್ತು ತಮಿಳು ಮಾತನಾಡುವ ಭಾಷಿಕರು ವಾಸವಾಗಿದ್ದಾರೆ. ಕನ್ನಡ ಮತ್ತು ತೆಲುಗು ಭಾಷೆಯನ್ನು ನಾಯಕ ಜನಾಂಗದವರು ಬಳಕೆ ಮಾಡುತ್ತಾರೆ. ಲಂಬಾಣಿ ಭಾಷೆಯನ್ನು ಲಂಬಾಣಿ ಸಮುದಾಯದವರು ಬಳಸುತ್ತಾರೆ. ತಮಿಳು ಭಾಷೆಯನ್ನು ತಮಿಳುನಾಡಿನಿಂದ ವಲಸೆ ಬಂದಿರುವವರು ತಮ್ಮ ಮನೆ ಮತ್ತು ಖಾಸಗಿ ಆವರಣದಲ್ಲಿ ಬಳಕೆ ಮಾಡುತ್ತಾರೆ. ಈ ಗ್ರಾಮದಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡುವವರು ವಣ್ಣಿಗೌಂಡರ್ ಪಡ್ಯೆಸಿಗೌಂಡರ್, ಪಡೆಯಾಚ್ಚಿ, ಆದಿದ್ರಾವಿಡ, ಚಕ್ಕಳಿಯಾರ್ ಸಮುದಾಯಕ್ಕೆ ಸೇರಿದವರಿದ್ದಾರೆ. ತಮಿಳು ಭಾಷಿಕರ ಮಾಹಿತಿಯಂತೆ ಸುಮಾರು ೧೫೦ ವರ್ಷಗಳ ಹಿಂದಿನಿಂದಲೂ ಇಲ್ಲಿ ವಾಸವಾಗಿದ್ದೇವೆ ಎನ್ನುತ್ತಾರೆ. ಒಟ್ಟು ತಮಿಳು ಮಾತನಾಡುವ ೬೦ ಮನೆಗಳಿವೆ. ಈ ಗ್ರಾಮದಲ್ಲಿ ಸುಬ್ರಮಣ್ಯಸ್ವಾಮಿ ದೇವಸ್ಥಾನವಿದೆ. ಇದನ್ನು ಪಳನಿಸ್ವಾಮಿ, ಮುರುಗನ್ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಹೊಸಪೇಟೆ ಪರಿಸರದ ತಮಿಳು ಭಾಷಿಕರು ಮುರುಗನ್ ದೇವರ ಜಾತ್ರೆಯಂದು ಇಲ್ಲಿಗೆ ಬಂದು ಪೂಜೆ ಸಲ್ಲಿಸುತ್ತಾರೆ. ತಮಿಳುನಾಡಿನ ಪಳನಿ ಬೆಟ್ಟದ ಪ್ರತಿಕೃತಿಯನ್ನು ಇಲ್ಲಿ ನಿರ್ಮಿಸಲಾಗಿದೆ. ಈ ಗ್ರಾಮದಲ್ಲಿ ತಮಿಳು ಭಾಷಿಕ ಮಕ್ಕಳು ಕನ್ನಡ ಮಾಧ್ಯಮವನ್ನೇ ಅಧ್ಯಯನ ಮಾಡುತ್ತಾರೆ.

### ೪.೪.೧೧. ಕಮಲಾಪುರ

ಹೊಸಪೇಟೆ ಪರಿಸರದಿಂದ ಹಂಪಿಯ ದಾರಿಯಲ್ಲಿ ೧೨ ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಒಟ್ಟು ೨೫,೫೨೫ ಜನಸಂಖ್ಯೆ(೨೦೧೧ರ ಜನಗಣತಿ) ಹೊಂದಿದೆ. ಆಡಳಿತಾತ್ಮಕವಾಗಿ ೨೦ ವಾರ್ಡ್‌ಗಳನ್ನು ಹೊಂದಿದೆ. ಹಂಪಿಯು ವಿಶ್ವಮಟ್ಟದ ಪ್ರವಾಸಿ ತಾಣವಾಗಿರುವುದರಿಂದ ಕಮಲಾಪುರದಲ್ಲಿ ಭಾರತದ ಬೇರೆ ಬೇರೆ ಪ್ರದೇಶದ ಜನರು ವ್ಯಾಪಾರ ಕಾರಣಕ್ಕಾಗಿ ಬಂದು ನೆಲೆಸಿದ್ದಾರೆ. ಇವರಲ್ಲಿ ರಾಜಸ್ಥಾನಿಗಳು, ಪಂಜಾಬಿಗಳು, ಗುಜರಾತಿನ ವ್ಯಾಪಾರಿಗಳು ಇದ್ದಾರೆ. ಇದಲ್ಲದೆ ಹಿಂದೂ, ಕ್ರಿಶ್ಚಿಯನ್, ಮುಸ್ಲಿಮರು ಸೇರಿದಂತೆ ವಿವಿಧ ಧರ್ಮದವರು ಇದ್ದಾರೆ. ಕಮಲಾಪುರ ಪರಿಸರದಲ್ಲಿ ಮುಖ್ಯವಾಗಿ ಕನ್ನಡ, ತೆಲುಗು, ತಮಿಳು ಮತ್ತು ಉರ್ದು ಭಾಷಿಕರು ಹೆಚ್ಚಾಗಿರುವುದನ್ನು ಕಾಣಬಹುದು. ಇಲ್ಲಿ ಕನ್ನಡ ಮತ್ತು ತೆಲುಗು ಭಾಷೆಯನ್ನು ನಾಯಕ, ಬೋವಿ, ವಡ್ಡರ್ ಇತರೆ ಜನಾಂಗದವರು ಬಳಕೆ ಮಾಡುತ್ತಾರೆ. ತಮಿಳು ಭಾಷೆಯನ್ನು ಗೌಂಡರ್, ವಡ್ಡಾರ್, ಚಕ್ಕಳಿಯಾರ್, ಪಡೆಯಾಚಿ, ಸೆಂಬಡವರ್ ಇತರೆ ತಮಿಳುನಾಡಿನಿಂದ ವಲಸೆ ಬಂದು ನೆಲೆಸಿರುವ ಸಮುದಾಯದವರು ಬಳಕೆ ಮಾಡುತ್ತಾರೆ. ಉರ್ದುವನ್ನು ಮುಸ್ಲಿಂ ಸಮುದಾಯದವರು ಬಳಕೆ ಮಾಡುತ್ತಾರೆ. ತಮಿಳು ಭಾಷಿಕರು ಕಮಲಾಪುರದ ಎಚ್.ಪಿ.ಸಿ. 'ಹಂಪಿ ಪವರ್ ಕಾರ್ಪೊರೇಷನ್'(ಶ್ರೀಲಂಕ), ಕುಪ್ಪೈ ಕ್ಯಾಂಪ್(ಕುಪ್ಪೈಯನ ಕ್ಯಾಂಪ್). ಮುರುಗನ್ ದೇವಸ್ಥಾನದ ಹತ್ತಿರ ಪ್ರದೇಶಗಳಲ್ಲಿ ಹೆಚ್ಚಾಗಿ ವಾಸವಿರುವುದನ್ನು ಕಾಣಬಹುದು. ಇದರೊಂದಿಗೆ ಆದಿದ್ರಾವಿಡದಿಂದ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಂಡಿರುವ ಅನೇಕ ತಮಿಳು ಭಾಷಿಕರು ವಾಸವಾಗಿದ್ದಾರೆ. ಇದಲ್ಲದೆ ತಮಿಳು ಮನೆ ಭಾಷೆಯಾಗಿರುವ ಮುಸ್ಲಿಮರ ಲಬ್ಬೆ ಸಮುದಾಯವು ಇಲ್ಲಿ ವಾಸವಾಗಿದೆ.

### ೪.೪.೧೨. ವೆಂಕಟಾಪುರ

ಹೊಸಪೇಟೆ ತಾಲ್ಲೂಕು ಕೇಂದ್ರದಿಂದ ಕಂಪ್ಲಿ ರಸ್ತೆಯಲ್ಲಿ ೧೬ ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಒಟ್ಟು ೩೦೬೧ ಜನಸಂಖ್ಯೆ(೨೦೧೧ರ ಜನಗಣತಿ). ಹೊಂದಿದೆ. ಇಲ್ಲಿ ಕನ್ನಡ, ತೆಲುಗು ಮತ್ತು ತಮಿಳು ಭಾಷೆಯನ್ನು ಬಳಕೆ ಮಾಡುವುದನ್ನು ಕಾಣಬಹುದು. ಆಂಧ್ರದಿಂದ ಬಂದಿರುವವರು ಮತ್ತು ಕನ್ನಡಿಗರು ಕನ್ನಡ ಮತ್ತು ತೆಲುಗು ಭಾಷೆಯನ್ನು ಬಳಕೆ ಮಾಡುತ್ತಾರೆ. ತಮಿಳು ಭಾಷಿಕರು ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಇಲ್ಲಿರುವ ತಮಿಳು ಭಾಷಿಕರು ಕೂಲಿ ಮತ್ತು ವ್ಯಾಪಾರ ವೃತ್ತಿಯನ್ನು ಮಾಡುತ್ತಾರೆ. ಅಲ್ಲದೆ ಇವರಲ್ಲಿ ಕಾಲಕ್ಕೆ ತಕ್ಕಂತೆ ತಮಿಳುನಾಡಿಗೆ ಮರುವಲಸೆ ಹೋಗುವುದು ರೂಢಿಯಲ್ಲಿದೆ. ಅಂದರೆ ಇಲ್ಲಿ ಕೆಲಸಗಳು ಸಿಗುವ ಕಾಲಕ್ಕೆ ಕರ್ನಾಟಕದಲ್ಲಿ ಕೂಲಿ ಕೆಲಸ ಮಾಡುವುದು, ಮಿಕ್ಕ ಸಮಯದಲ್ಲಿ ತಮಿಳುನಾಡಿನ ತಮ್ಮ ಮೂಲ ನೆಲೆಗೆ ಹೋಗುವುದನ್ನು ಕಾಣಬಹುದು. ಇಲ್ಲಿನ ಕೆಲ ತಮಿಳು ಭಾಷಿಕರು ಕಡ್ಡಿ ಚಾಪೆಯನ್ನು ಸಿದ್ಧಪಡಿಸಿ ಅಥವಾ ತಮಿಳುನಾಡಿನಿಂದ ತಂದು ಇಲ್ಲಿ ಮಾರಾಟ ಮಾಡುತ್ತಾರೆ. ಇನ್ನು ಕೆಲವರು ಕೃಷಿ ಚಟುವಟಿಕೆಯಲ್ಲಿ ಕೂಲಿಕಾರ್ಮಿಕರಾಗಿ ದುಡಿಯುತ್ತಾರೆ. ಇವರ ಮಕ್ಕಳು ಕನ್ನಡ ಮಾಧ್ಯಮದ ಶಾಲೆಯಲ್ಲಿ ಅಧ್ಯಯನ ಮಾಡುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಭಾಷಾದ್ವೀಪಗಳು ಮಾನವರ ಚಲನಾತ್ಮಕ ಬದುಕಿನಿಂದ ರೂಪುಗೊಂಡರೂ ಅನೇಕ ಸಾಮಾಜಿಕ, ಆರ್ಥಿಕ, ರಾಜಕೀಯ ಕಾರಣಗಳಿಗಾಗಿ ಬೇರೊಂದು ಪ್ರದೇಶದಲ್ಲಿ ನೆಲೆಯನ್ನು ಕಂಡುಕೊಂಡಿರುತ್ತವೆ. ಇಂತಹ ಭಾಷಿಕ ಗುಂಪುಗಳು ಬಹುತೇಕ ಸಂದರ್ಭದಲ್ಲಿ ನಿರ್ದಿಷ್ಟವಾದ ಭಾಷಿಕ ಮತ್ತು ಭೌಗೋಳಿಕ ಲಕ್ಷಣಗಳನ್ನು ಹೊಂದಿರುತ್ತವೆ. ಈ ರೀತಿಯಾಗಿ ಬೇರೊಂದು ಪ್ರದೇಶದಲ್ಲಿ ನೆಲೆ ನಿಲ್ಲುವ ಆ ಮೂಲಕ ತಮ್ಮ ಭಾಷೆ ಸಂಸ್ಕೃತಿ ಸಮುದಾಯವನ್ನು ಸಂಗೋಪನೆ ಮಾಡುತ್ತವೆ. ಹೀಗೆ ತಮ್ಮ ಭಾಷೆ, ಸಂಸ್ಕೃತಿ, ಸಮುದಾಯವನ್ನು ಸಂಗೋಪನೆ ಮಾಡಲು ಬಾಹ್ಯ ಪರಿಸರದ ಯಾವುದೇ ಒತ್ತಡ ಇರುವುದಿಲ್ಲ ಎಂದಿಲ್ಲ. ಬಾಹ್ಯ ಪರಿಸರದ ಒತ್ತಡದ ನಡುವೆಯೂ ಭಾಷಾದ್ವೀಪಗಳ ಭಾಷಿಕರು ತಮ್ಮ ಅವಶ್ಯಕತೆಗಳನ್ನು ಮತ್ತು ಜೀವನವನ್ನು ತಮ್ಮದೇ ಭಾಷೆಯಲ್ಲಿ ರೂಪಿಸಿಕೊಂಡು ಬದುಕುತ್ತಿರುವುದು ಇಲ್ಲಿ ಮುಖ್ಯವಾಗಿರುತ್ತದೆ.

ಹೀಗೆ ತಮಿಳು ಭಾಷಾದ್ವೀಪಗಳು ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ನೆಲೆಯನ್ನು ಕಂಡುಕೊಂಡಿವೆ. ಇವರುಗಳು ಇಂದಿಗೂ ಕರ್ನಾಟಕದ ವಿವಿಧ ಭಾಗದಲ್ಲಿ ತಮ್ಮ ಭಾಷೆ, ಸಂಸ್ಕೃತಿ, ಸಮುದಾಯವನ್ನು ಸಂಗೋಪನೆ ಮಾಡಿಕೊಂಡು ಬರುತ್ತಿದ್ದಾರೆ. ಭಾಷಾದ್ವೀಪಗಳ ಆವರಣದಲ್ಲಿ ತಮ್ಮ ಮೂಲಭಾಷೆಯನ್ನು ಹಾಗೂ ಸಾಮಾಜಿಕ ಪರಿಸರದಲ್ಲಿ ಸ್ಥಳೀಯ ಪರಿಸರದ ಭಾಷೆಯಾದ ಕನ್ನಡ ಮತ್ತು ಇತರೆ ಭಾಷೆಗಳನ್ನು ಬಳಕೆ ಮಾಡಿಕೊಂಡು ಕೆಲವು ವಲಯಗಳಲ್ಲಿ ಮಾತ್ರ ಸ್ಥಳೀಯ ಪರಿಸರದ ಒತ್ತಡಕ್ಕೆ ಒಳಗಾಗಿರುವುದು ಕಾಣಬಹುದು. ಅಂದರೆ ಭಾಷಾದ್ವೀಪದ ಎರಡು ಮತ್ತು ಮೂರನೇ ತಲೆಮಾರಿನವರು ಸ್ಥಳೀಯ ಪರಿಸರದ ಭಾಷೆಯಲ್ಲಿ, ಸಂಸ್ಕೃತಿಯಲ್ಲಿ, ಸಮುದಾಯಗಳಲ್ಲಿ ವಿಲೀನಗೊಳ್ಳುತ್ತಿದ್ದಾರೆ. ಸ್ಥಳೀಯ

ಭಾಷೆಯನ್ನು ಕಲಿಕೆಯ ಭಾಷೆಯಾಗಿ ಕಲಿಯುವುದರಿಂದ ಭಾಷೆಯಲ್ಲಿ, ಸ್ಥಳೀಯ ಹಬ್ಬ, ಸಂಪ್ರದಾಯಗಳನ್ನು ಆಚರಿಸುವ ಮೂಲಕ ಸಂಸ್ಕೃತಿಯಲ್ಲಿ ಮತ್ತು ಸ್ಥಳೀಯ ಪರಿಸರದೊಂದಿಗೆ ವೈವಾಹಿಕ ಸಂಬಂಧ, ಆತ್ಮೀಯ ಸಂಬಂಧವನ್ನು ಹೊಂದುವ ಮೂಲಕ, ಒಂದೇ ಪ್ರದೇಶದಲ್ಲಿ ವಾಸಿಸುವ ಮೂಲಕ ಸಮುದಾಯಗಳಲ್ಲಿ ಬೆರೆತುಹೋಗುವುದನ್ನು ಕಾಣಬಹುದು. ಹೀಗೆ ಭಾಷಾದ್ವೀಪದ ಜನರು ಒಂದು ಹಂತದಲ್ಲಿ ತಮ್ಮ ಭಾಷೆಯನ್ನು, ಸಂಸ್ಕೃತಿಯನ್ನು, ಸಮುದಾಯವನ್ನು ಉಳಿಸಿಕೊಂಡು ಸಂಗೋಪನೆ ಮಾಡಿದರೆ, ಮತ್ತೊಂದು ಹಂತದಲ್ಲಿ ಸ್ಥಳೀಯ ಪರಿಸರದಲ್ಲಿ ವಿಲೀನಗೊಳ್ಳುತ್ತಿರುವುದನ್ನು ಕಾಣಬಹುದು.

* * *

# ಅಧ್ಯಾಯ: ಐದು

# ಭಾಷಾದ್ವೀಪಗಳ ಸಮಾಜೋಭಾಷಿಕ ಅಧ್ಯಯನ

ಅಧ್ಯಾಯ: ಐದು

# ಭಾಷಾದ್ವೀಪಗಳ ಸಮಾಜೋಭಾಷಿಕ ಅಧ್ಯಯನ

ಬೃಹತ್ ಭಾಷಿಕ ಪರಿಸರಗಳಲ್ಲಿ ಭಾಷಿಕ ವೈವಿಧ್ಯವಾಗಿ ಕಾಣುವ ಭಾಷಾದ್ವೀಪಗಳು ಏಕಭಾಷಿಕರಾಗಿ, ದ್ವಿಭಾಷಿಕರಾಗಿ ಮತ್ತು ಬಹುಭಾಷಿಕರಾಗಿರುವುದು ಕಾಣುತ್ತೇವೆ. ಭಾಷಾದ್ವೀಪದ ಜನರು ತಮ್ಮ ಮೂಲ ಭಾಷೆಯನ್ನು ಮನೆ ಮತ್ತು ಖಾಸಗಿ ಆವರಣದಲ್ಲಿ ಹೆಚ್ಚು ಬಳಕೆ ಮಾಡುತ್ತಾ, ಇನ್ನುಳಿದ ಆವರಣಗಳಲ್ಲಿ ಸ್ಥಳೀಯ ಪರಿಸರದ ಭಾಷೆ ಅಥವಾ ಪರಿಸರದ ಪ್ರಭಾವಿ ಭಾಷೆಯನ್ನು ಬಳಕೆ ಮಾಡುವುದು ಕಾಣುತ್ತೇವೆ. ಈ ಎರಡು ಭಾಷೆಗಳಲ್ಲಿ ಭಾಷಾದ್ವೀಪದ ಜನರು ಬದುಕನ್ನು ಕಟ್ಟಿಕೊಂಡಿರುತ್ತಾರೆ. ಇದರಿಂದಾಗಿ ಪರಸ್ಪರ ಭಾಷಿಕರ ಮೇಲಾಗಿರುವ ಭಾಷಿಕಪ್ರಭಾವ ಮತ್ತು ಪ್ರೇರಣೆಯನ್ನು ಇಲ್ಲಿ ಕಂಡುಕೊಳ್ಳುವುದು. ಒಟ್ಟಾರೆಯಾಗಿ ಬಹುಭಾಷಿಕ ಪರಿಸರದಲ್ಲಿ ಭಾಷಾದ್ವೀಪಗಳಲ್ಲಿನ ಜನರು ತಮ್ಮ ಭಾಷೆಯನ್ನು ಯಾವ ಆವರಣಗಳಲ್ಲಿ ಬಳಕೆ ಮಾಡಿಕೊಂಡು ಸಂಗೋಪನೆ ಮಾಡುತ್ತಾರೆ ಎಂಬುದನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳುವ ಉದ್ದೇಶವನ್ನು ಹೊಂದಿದೆ.

ವಿಶೇಷವಾಗಿ ಸಾಮಾಜಿಕ ಭಿನ್ನಾಂಶಗಳಾದ ಲಿಂಗ ಮತ್ತು ವರ್ಗಗಳ ಹಿನ್ನೆಲೆಯಲ್ಲಿ ಭಾಷಾ ಸಂಗೋಪನೆಯನ್ನು ಕಂಡುಕೊಳ್ಳುವ ಅಗತ್ಯವಿದೆ. ಅಂದರೆ ಭಾಷಾದ್ವೀಪಗಳಲ್ಲಿನ ಜನರಲ್ಲಿ ಪುರುಷರು ಅಥವಾ ಸ್ತ್ರೀಯರು ಯಾರು ಭಾಷಾಸಂಗೋಪನೆ ಮಾಡುವಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ. ಅದೇ ರೀತಿಯಲ್ಲಿ ಉನ್ನತ ವರ್ಗ ಮತ್ತು ಕೆಳವರ್ಗದವರಲ್ಲಿ ಯಾರು ತಮ್ಮ ಮೂಲಭಾಷೆಯನ್ನು ಬಳಕೆ ಮಾಡುತ್ತಾರೆ. ಅದಕ್ಕೆ ಕಾರಣಗಳೇನು? ಎಂಬ ಅಂಶಗಳನ್ನು ಕಂಡುಕೊಳ್ಳುವುದು ಈ ಅಧ್ಯಾಯದ ಉದ್ದೇಶವಾಗಿದೆ. ಇದರೊಂದಿಗೆ ತಮಿಳು ಮತ್ತು ಕನ್ನಡ ಭಾಷೆಯ ನಂಟು ಹೊಂದಿರುವ ದ್ವಿಭಾಷಿಕರು ತಮ್ಮ ಬಳಕೆಯ ಭಾಷೆಯನ್ನು ಯಾವ ಸಂದರ್ಭದಲ್ಲಿ, ಯಾವ ಭಾಷೆಯನ್ನು ಬಳಸುತ್ತಾರೆ? ಅದಕ್ಕೆ ಇರುವ ಕಾರಣಗಳೇನು? ಈ ಸಂದರ್ಭದಲ್ಲಿ ಬಳಕೆ ಮಾಡುವ ಭಾಷೆಯ ಸ್ವರೂಪವೇನು? ಯಾವ ಸ್ಥಳಗಳಲ್ಲಿ–ಪರಿಸರಗಳಲ್ಲಿ ಯಾವ ಭಾಷೆಯನ್ನು ಬಳಕೆ ಮಾಡುತ್ತಾರೆ ಎಂಬ ಕೆಲವು ಅಂಶಗಳನ್ನು ಮುಖ್ಯವಾಗಿರಿಸಿಕೊಂಡು ಈ ಅಧ್ಯಾಯದ ರಚನೆಯು ರೂಪುಗೊಂಡಿದೆ.

**೫.೧. ಕನ್ನಡದ ಪರಿಸರದಲ್ಲಿ ತಮಿಳು ಭಾಷಿಕರ ಸಾಮಾಜಿಕ ಸಂರಚನೆ**

ಭಾಷಾದ್ವೀಪಗಳಲ್ಲಿ ವಾಸಿಸುತ್ತಿರುವ ತಮಿಳು ಭಾಷಿಕರು ತಮ್ಮ ದಿನನಿತ್ಯದ ಕಾರ್ಯಗಳನ್ನು, ವ್ಯವಹಾರಗಳನ್ನು ಕನ್ನಡದ ಪರಿಸರದಲ್ಲಿಯೇ ನೆರವೇರಿಸಿಕೊಳ್ಳಬೇಕು. ಅಲ್ಲದೇ ತಮ್ಮ ಅಗತ್ಯತೆಗಳನ್ನು ಪೂರ್ಣ ಪ್ರಮಾಣದಲ್ಲಿ ಕನ್ನಡಿಗರಿಂದ ಪಡೆಯದಿದ್ದರೂ ಕೆಲವು ಅಗತ್ಯಗಳನ್ನು ಹೊಂದಾಣಿಕೆ ಮೇರೆಗೆ ಸೌಲಭ್ಯಗಳನ್ನು, ಅಗತ್ಯಗಳನ್ನು ಪಡೆಯುವುದು ಕಾಣಬಹುದು. ಇಲ್ಲಿ ಕನ್ನಡದ ಪರಿಸರ ಎಂದರೆ ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಬಳಕೆಯ ಭಾಷೆಯನ್ನು ಮುಖ್ಯವಾಗಿರಿಸಿಕೊಂಡು ಕನ್ನಡದ ಪರಿಸರ ಎಂದು ಗುರುತಿಸಿಕೊಳ್ಳಲಾಗಿದೆ. ಅಂದರೆ ವಲಸೆ ಪ್ರಕ್ರಿಯೆಯಿಂದ ಕನ್ನಡದ ಪರಿಸರದಲ್ಲಿ ನೆಲೆಸಿರುವ ತಮಿಳು ಭಾಷಿಕರು ತಮ್ಮ ಜೀವನ ನಿರ್ವಹಣೆಗಾಗಿ ಮತ್ತು ದಿನನಿತ್ಯದ ಅವಶ್ಯಕತೆಗಾಗಿ ಕನ್ನಡದ ಪರಿಸರದೊಂದಿಗೆ ಸಾಮಾಜಿಕವಾಗಿ ಹೊಂದಿಕೊಂಡಿರುವ ಮತ್ತು ಸಾಮಾಜಿಕವಾಗಿ ಕನ್ನಡಿಗರೊಂದಿಗೆ ಭಾಗವಹಿಸುವುದನ್ನು ಇಲ್ಲಿ ಸಾಮಾಜಿಕ ಸಂರಚನೆ ಎಂದು ಗುರುತಿಸಿಕೊಳ್ಳಲಾಗಿದೆ.

ಸುಮಾರು ೬೦ರಿಂದ ೭೦ವರ್ಷಗಳಿಂದ ಕನ್ನಡದ ಪರಿಸರದಲ್ಲಿ ನೆಲೆಯನ್ನು ಕಂಡುಕೊಂಡಿರುವ ತಮಿಳು ಭಾಷಿಕರು ಕನ್ನಡಿಗರು ಜೀವಿಸುವಂತೆ ತಮ್ಮ ಜೀವನವನ್ನು ಕಟ್ಟಿಕೊಂಡಿದ್ದಾರೆ. ಇವರು ಸಾಮಾಜಿಕವಾಗಿ ಅನೇಕ ಜಾತಿಗಳಿಂದ, ಆರ್ಥಿಕ ವರ್ಗಗಳಿಂದ, ವೃತ್ತಿಗಳಿಂದ ಕೂಡಿದ್ದಾರೆ. ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಬೇರೆ ಬೇರೆ ವೃತ್ತಿಗಳಲ್ಲಿ ಮತ್ತು ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದಾರೆ. ಇದರಿಂದಾಗಿ ಕನ್ನಡದ ಸಾಮಾಜಿಕ ಪರಿಸರದಲ್ಲಿ ಬೇರೆ ಬೇರೆ ಭಾಷಿಕರು ತಮ್ಮ ಆರ್ಥಿಕ ಚಟುವಟಿಕೆಗಳನ್ನು ಕಟ್ಟಿಕೊಂಡಿದ್ದಾರೆ. ಅದೇ ರೀತಿಯಲ್ಲಿ ತಮಿಳರು ಸಹ ತಮ್ಮ ಚಟುವಟಿಕೆಗಳನ್ನು ರೂಪಿಸಿಕೊಂಡು ಕನ್ನಡಿಗರಂತೆಯೇ ಹೊಂದಿಕೊಂಡಿದ್ದಾರೆ.

**ಹಿರಿಯೂರು ಪರಿಸರದಲ್ಲಿ ತಮಿಳು ಭಾಷಿಕರ ಸಾಮಾಜಿಕ ಸಂರಚನೆ:**

ಹಿರಿಯೂರು ಪರಿಸರದಲ್ಲಿ ತಮಿಳು ಭಾಷಿಕರು ಸ್ವಾತಂತ್ರ್ಯ ಪೂರ್ವದಲ್ಲಿಯೇ ಬಂದು ನೆಲೆಸಿರುವುದರ ಬಗ್ಗೆ ತಿಳಿಸುತ್ತಾರೆ. ಆದರೆ ಕೆಲವು ತಮಿಳು ರೈತ ಸಮುದಾಯಗಳು ಸ್ವಾತಂತ್ರ್ಯ ಪೂರ್ವಕ್ಕಿಂತಲೂ ಮುಂಚಿತವಾಗಿ ಕರ್ನಾಟಕಕ್ಕೆ ಬಂದಿರುವುದಾಗಿ ತಿಳಿಸುತ್ತಾರೆ. ಇನ್ನು ಕೆಲವರು ೧೯೬೦ರಲ್ಲಿ ಕಾವೇರಿ ತೀರದಲ್ಲಿ ಬರ ಬಂದ ಕಾರಣ ಅಲ್ಲಿನ ಅನೇಕ ರೈತರು ಕರ್ನಾಟಕದ ಮೇಲ್ಭಾಗಕ್ಕೆ(ದಕ್ಷಿಣ ಕರ್ನಾಟಕಕ್ಕೆ) ವಲಸೆ ಬಂದು ನೆಲೆಸಿದೆವು ಎಂದು ತಿಳಿಸುತ್ತಾರೆ. ಇನ್ನು ಕೆಲವರು ಇತ್ತೀಚಿಗೆ ಉದ್ಯೋಗ ಮತ್ತು ಇತರೆ ಕಾರಣಕ್ಕಾಗಿ ವಲಸೆ ಬಂದಿರುವುದಾಗಿ ತಿಳಿಸುತ್ತಾರೆ. ಹೀಗೆ ಹಿರಿಯೂರು ಪರಿಸರದಲ್ಲಿ ತಮಿಳರು ತಮ್ಮ ನೆಲೆಯನ್ನು ಕಂಡುಕೊಂಡು, ನಂತರ ವಾಣಿವಿಲಾಸ ಅಣೆಕಟ್ಟು ನಿರ್ಮಿಸಲು ಇನ್ನು ಹೆಚ್ಚಿನ ಜನರು ಬಂದರು ಎಂದು ತಿಳಿಸುತ್ತಾರೆ. ಇವರುಗಳು ಹಿರಿಯೂರು ನಗರದ ಗಣೇಶ ಗುಡಿಯ ಹತ್ತಿರ ಮೊದಲು ಗುಂಪಾಗಿ ನೆಲೆಯನ್ನು ಕಂಡುಕೊಂಡಿದ್ದರು. ನಂತರದಲ್ಲಿ ನಗರ ಬೆಳೆದಂತೆ ನಗರದ ವಿವಿಧೆಡೆಗಲ್ಲಿ ತಮ್ಮ ವಾಸಸ್ಥಳಗಳನ್ನು ನಿರ್ಮಿಸಿಕೊಂಡಿದ್ದಾರೆ. ಸಾಮಾನ್ಯವಾಗಿ ಹಿರಿಯೂರು ಪರಿಸರದ ತಮಿಳು ಭಾಷಿಕರಲ್ಲಿ ಹೆಚ್ಚಾಗಿ ಗೌಂಡರ್, ಮೊದಲಿಯಾರ್, ಚಕ್ಕಲಿಯಾರ್, ಆದಿದ್ರಾವಿಡರ್ ಜಾತಿಯವರು ಮತ್ತು ಮುಸ್ಲಿಂ,

ಕ್ರಿಶ್ಚಿಯನ್ ಧರ್ಮದವರು ವಾಸವಾಗಿದ್ದಾರೆ. ಇವರುಗಳೆಲ್ಲಾ ಚಿಕ್ಕ ಚಿಕ್ಕ ಗುಂಪುಗಳಾಗಿ ಹಿರಿಯೂರು ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ವಾಸವಾಗಿದ್ದಾರೆ. ಹಿರಿಯೂರು ತಾಲ್ಲೂಕಿನ ಆದಿವಲ ಗ್ರಾಮದಲ್ಲಿ ಗೌಂಡರ್ ಸಮುದಾಯದವರು ಹೆಚ್ಚಿದ್ದಾರೆ. ಇವರುಗಳು ಇಂದಿಗೂ ತೆಂಗಿನ ತೋಟಗಾರಿಕೆಯಲ್ಲಿ ತಮ್ಮ ಜೀವನವನ್ನು ತೊಡಗಿಸಿಕೊಂಡಿದ್ದಾರೆ. ಇವರು ಹೆಚ್ಚಾಗಿ ತಮಿಳು ಮೂಲದ ಸಂಸ್ಕೃತಿ ಮತ್ತು ಆಚರಣೆಗಳನ್ನು ಆಚರಿಸುತ್ತಾರೆ. ಕನ್ನಡಿಗರ ಪರಿಸರದಲ್ಲಿ ವ್ಯಾವಹಾರಕ್ಕಾಗಿ, ಶಿಕ್ಷಣಕ್ಕಾಗಿ ಕನ್ನಡ ಪರಿಸರದೊಂದಿಗೆ ಹೊಂದಿಕೊಂಡಿದ್ದಾರೆ. ಮನೆಯಲ್ಲಿ ತಮಿಳು ಭಾಷೆಯನ್ನು ಹೆಚ್ಚು ಬಳಕೆ ಮಾಡುತ್ತಾರೆ. ಬಾಹ್ಯ ಮತ್ತು ಸಾಮಾಜಿಕ ಪರಿಸರದಲ್ಲಿ ಕನ್ನಡವನ್ನು ಬಳಕೆ ಮಾಡುತ್ತಾರೆ. ಈ ಮನೆಯ ಮಕ್ಕಳು ಇಂಗ್ಲಿಷ್ ಮಾಧ್ಯಮದಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ.

ಹಿರಿಯೂರು ತಾಲ್ಲೂಕಿನ ಆರನಕಟ್ಟೆ, ದೊಡ್ಡಕಟ್ಟೆ, ಮಸ್ಕಲ್‌ಮಟ್ಟಿ ಗ್ರಾಮಗಳಲ್ಲಿ ಗೌಡ ಸಮುದಾಯದ ತಮಿಳು ಭಾಷಿಕರು ವಾಸವಾಗಿದ್ದಾರೆ. ಇವರುಗಳು ಹೇಳುವಂತೆ ಸ್ವಾತಂತ್ರ್ಯ ಪೂರ್ವದಲ್ಲಿಯೇ ಕೃಷಿ ಚಟುವಟಿಕೆಗಾಗಿ ತಮಿಳುನಾಡಿನಿಂದ ಕರ್ನಾಟಕಕ್ಕೆ ವಲಸೆ ಬಂದಿರುವುದಾಗಿ ತಿಳಿಸುತ್ತಾರೆ. ಇಲ್ಲಿನ ತಮಿಳು ಭಾಷಿಕರು ಕನ್ನಡವನ್ನು ಮತ್ತು ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಆದರೆ ಮನೆಯ ಆವರಣದಲ್ಲಿ ತಮಿಳು ಭಾಷೆ ಬಳಕೆ ಮಾಡುವುದು ಹೆಚ್ಚು. ತೆಂಗಿನ ತೋಟಗಾರಿಕೆ ಕೃಷಿ ಮಾಡಿಕೊಂಡಿದ್ದಾರೆ. ಮಸ್ಕಲ್ ಮಟ್ಟಿ ಗ್ರಾಮದಲ್ಲಿ ಚ(ಸ)ಕ್ಕಲಿಯಾರ್ ಜಾತಿಯ ಸಮುದಾಯದವರು ಒಂದು ಗುಂಪಾಗಿ ವಾಸ ಮಾಡುತ್ತಿದ್ದಾರೆ. ಕನ್ನಡದ ಮಾದಿಗ ಸಮುದಾಯಕ್ಕೆ ಇವರನ್ನು ಸಮಾನರೆಂದು ಗುರುತಿಸಲಾಗುತ್ತದೆ. ಇವರು ಮೂಲ ತಮಿಳು ನಾಡಿನಲ್ಲಿ ಕೃಷಿ ಕೂಲಿ ಕೆಲಸ ಮಾಡುತ್ತಿದ್ದವರು. ಇಂದು ಹಿರಿಯೂರು ಪರಿಸರದಲ್ಲಿ ತೆಂಗಿನ ಗರಿಯ ಚಾಪೆ ಹೆಣೆಯುವ ಕೆಲಸವನ್ನು ಮಾಡಿಕೊಂಡಿದ್ದಾರೆ. ಇದರೊಂದಿಗೆ ತೆಂಗಿನ ನಾರಿನಿಂದ ಹಗ್ಗವನ್ನು ಮಾಡುವ ಕೆಲಸ ಮಾಡಿಕೊಂಡಿದ್ದಾರೆ. ಈ ಸಮುದಾಯದವರು ಈಗಲೂ ಕೂಲಿ ಕೆಲಸವನ್ನು ಮಾಡಿಕೊಂಡು ಕನ್ನಡದ ಪರಿಸರದಲ್ಲಿ ತಮ್ಮ ಜೀವನವನ್ನು ನಿರ್ವಹಿಸುತ್ತಿದ್ದಾರೆ. ಇವರಿಗೆ ಕನ್ನಡದ ಪರಿಸರದ ವ್ಯಾವಹಾರಿಕ ಸಂದರ್ಭಗಳು ಸಿಗುವುದು ಕಡಿಮೆ. ಕಾರಣ ಇವರು ತಯಾರಿಸಿದ ತೆಂಗಿನ ಚಾಪೆ, ಹಗ್ಗ ಮತ್ತು ಕಡ್ಡಿ ಪೊರಕೆಯನ್ನು ಇದೇ ತಮಿಳು ಭಾಷಿಕರ ಇತರೆ ಸಮುದಾಯದವರು ಕೊಂಡು ಕನ್ನಡಿಗರ ಮಾರುಕಟ್ಟೆಗೆ ತಲುಪಿಸಿ ಮಾರಾಟ ಮಾಡುತ್ತಾರೆ. ಆದ್ದರಿಂದ ಇವರಿಗೆ ವಾಸಸ್ಥಳದಲ್ಲಿಯೂ ಕನ್ನಡಿಗರ ಸಂಪರ್ಕಕ್ಕೆ ಸಿಗುವುದು ಕಡಿಮೆ. ವ್ಯಾವಹಾರಿಕ ಸಮಯದಲ್ಲಿ ಕನ್ನಡಿಗರೊಂದಿಗೆ ಸಂಪರ್ಕಕ್ಕೆ ಸಿಗುವುದು ಕಡಿಮೆ. ಇವರಲ್ಲಿ ಶೈಕ್ಷಣಿಕ ಪ್ರಗತಿ ಕಡಿಮೆ ಇದೆ. ಇದಕ್ಕೆ ಸಾಮಾಜಿಕವಾಗಿ ಹಿಂದುಳಿದಿರುವುದು ಕಾರಣವಾಗಿದೆ. ಇತ್ತೀಚೆಗೆ ಮಕ್ಕಳನ್ನು ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಮಾಡಿಸುತ್ತಿರುವುದು ಕಾಣಬಹುದು. ಇವರಿಗೆ ಕನ್ನಡ ಪರಿಸರದಲ್ಲಿಯೂ ಜಾತಿಯ ನಿರ್ಬಂಧಗಳು ಆಚರಣೆಯಲ್ಲಿವೆ. ಕರ್ನಾಟಕದಲ್ಲಿ ಸಾಮಾಜಿಕವಾಗಿ ಮತ್ತು ಜಾತಿಯಿಂದ ಶೋಷಣೆಗೆ ಒಳಗಾಗಿರುವ 'ಮಾದಿಗ' ಇತರೆ ಸಮುದಾಯಗಳಂತೆ ತಮಿಳು ಭಾಷಿಕರಲ್ಲಿ ಸಕ್ಕಲಿಯಾರು ಸಮುದಾಯವನ್ನು ಗುರುತಿಸುತ್ತಾರೆ. ಇವರುಗಳನ್ನು ಇಂದಿಗೂ ತಮಿಳು ಭಾಷಿಕರಲ್ಲಿರುವ ಉನ್ನತ ವರ್ಗಗಳು ಇವರನ್ನು ಅಸ್ಪೃಶ್ಯರಂತೆ ನೋಡುತ್ತವೆ. ಇವರುಗಳನ್ನು ಮನೆಯ

ಪ್ರವೇಶಕ್ಕೆ ನಿರಾಕರಿಸಲಾಗುತ್ತದೆ. ಇದರಿಂದ ಪ್ರೇರಿತರಾದ ಕನ್ನಡದ ಕೆಲವು ಕುಟುಂಬಗಳು ತಮಿಳು ಭಾಷೆಯ ಸಕ್ಕಲಿಯಾರ್ ಕುಟುಂಬಗಳನ್ನು ಅಸ್ಪೃಶ್ಯರಂತೆ ನಡೆಸಿಕೊಳ್ಳುತ್ತಾರೆ. ಇದು ಸಾಮಾಜಿಕ ರೂಢಿಯಿಂದಾಗಿ ಹೆಚ್ಚು ಚಾಲ್ತಿಯಲ್ಲಿದೆ.

ಇನ್ನು ಹಿರಿಯೂರು ನಗರದಲ್ಲಿರುವ ತಮಿಳು ಭಾಷಿಕರು ನಗರದ ವಿವಿಧ ಭಾಗಗಳಲ್ಲಿ ನೆಲೆಯನ್ನು ಕಂಡುಕೊಂಡಿದ್ದಾರೆ. ಇದರಲ್ಲಿ ಮುಸ್ಲಿಂ, ಕ್ರಿಶ್ಚಿಯನ್, ಗೌಂಡರ್, ಮೊದಲಿಯಾರ್, ಚಕ್ಕಲಿಯಾರ್ ಇತರ ಸಮುದಾಯದವರು ವಾಸವಾಗಿದ್ದಾರೆ. ಹಿರಿಯೂರಿನ ವೇದಾವತಿ ನಗರದಲ್ಲಿರುವ ತಮಿಳು ಭಾಷಿಕರು ಆದಿದ್ರಾವಿಡರ್ ಸಮುದಾಯಕ್ಕೆ ಸೇರಿದವರೆಂದು ಹೇಳುತ್ತಾರೆ. ಇವರು ತಮಿಳುನಾಡಿನಲ್ಲಿ ಬರ ಬಂದಿದ್ದರಿಂದ ಕರ್ನಾಟಕಕ್ಕೆ ಬಂದವರಾಗಿದ್ದು, ಮೊದಲು ಹಿರಿಯೂರಿನ ನಗರದಲ್ಲಿ ವಾಸವಾಗಿದ್ದವರು. ಮೊದ ಮೊದಲು ಕಲ್ಲು ಹೊಡೆಯುವ ಕೆಲಸವನ್ನು ಮಾಡುತ್ತಿದ್ದರು. ಇಂದು ಇವರುಗಳು ಸಿಮೆಂಟ್ ಕಾಂಕ್ರಿಟ್ ಕೆಲಸಕ್ಕೆ ಕೂಲಿಗಳಾಗಿ ಹೋಗುತ್ತಾರೆ. ಇವರುಗಳು ತಮ್ಮ ಮನೆಯ ಆವರಣದಲ್ಲಿ ತಮಿಳನ್ನು ಹಾಗೂ ಬಾಹ್ಯ ಪರಿಸರದಲ್ಲಿ ಕನ್ನಡವನ್ನು ಬಳಕೆ ಮಾಡುತ್ತಾರೆ. ಆದರೆ ಕನ್ನಡ ಪರಿಸರದೊಂದಿಗೆ ಮಾರುಕಟ್ಟೆಗಳಲ್ಲಿ, ಕೂಲಿ ಸ್ಥಳಗಳಲ್ಲಿ ಸಂರಚನೆಗೊಂಡಿರುವುದು ಕಾಣಬಹುದು. ಇವರ ಮಕ್ಕಳು ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಮಾಡುತ್ತಿದ್ದಾರೆ. ಇದರೊಂದಿಗೆ ಕೆಲವು ಜನರು ಸಾಮಾನ್ಯ ವ್ಯಾಪಾರ ಮಾಡಿಕೊಂಡು ಜೀವನವನ್ನು ನಿರ್ವಹಣೆ ಮಾಡಿಕೊಂಡಿದ್ದಾರೆ.

ಹಿರಿಯೂರು ನಗರದ ಹುಳಿಯಾರ ರಸ್ತೆಯಲ್ಲಿರುವ ಭಗವತಿಯಮ್ಮನ್ ದೇವಾಲಯದ ಹತ್ತಿರ ಗುಂಪು ಗುಂಪಾಗಿ ಗೌಂಡರ್ ಸಮುದಾಯದವರು ವಾಸವಾಗಿದ್ದಾರೆ. ಇವರು ಹಿರಿಯೂರಿಗೆ ಬಹು ಹಿಂದೆಯೇ ವಲಸೆ ಬಂದಿರುವುದಾಗಿ ತಿಳಿಸುತ್ತಾರೆ. ಪ್ರಸ್ತುತ ಇವರುಗಳು ತೆಂಗಿನ ತೋಟಗಾರಿಕೆ ಕೃಷಿಯನ್ನು ಮಾಡಿಕೊಂಡು ತಮ್ಮ ಜೀವನವನ್ನು ನಿರ್ವಹಣೆ ಮಾಡುತ್ತಿದ್ದಾರೆ. ಇವರುಗಳು ಮನೆ ಆವರಣದಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಬಾಹ್ಯ ಆವರಣದಲ್ಲಿ ಕನ್ನಡವನ್ನು ಬಳಕೆ ಮಾಡುತ್ತಾರೆ. ಇವರ ಮಕ್ಕಳು ನಗರ ಪರಿಸರದಲ್ಲಿರುವ ಖಾಸಗಿ ಶಾಲೆಗಳಲ್ಲಿ ಇಂಗ್ಲಿಷ್ ಮಾಧ್ಯಮದಲ್ಲಿ ಅಧ್ಯಯನ ಮಾಡುತ್ತಾರೆ. ಅಲ್ಲದೇ ಗೌಂಡರ್ ಸಮುದಾಯದ ಅನೇಕ ಕುಟುಂಬಗಳು ಕಿರಾಣಿ ಅಂಗಡಿಗಳನ್ನು ನಿರ್ವಹಣೆ ಮಾಡುವ ಮೂಲಕ ಕನ್ನಡದ ಪರಿಸರದೊಂದಿಗೆ ಹೊಂದಿಕೊಂಡಿದ್ದಾರೆ. ಇನ್ನು ಇದೇ ನಗರ ಮುಂದುವರೆದ ಭಾಗದಲ್ಲಿ ಅಂದರೆ ಠಾಗೂರ್ ರಸ್ತೆಯಲ್ಲಿ ತಮಿಳಿನ ಚಕ್ಕಳಿಯಾರ್, ಮುಸ್ಲಿಂ, ಕ್ರಿಶ್ಚಿಯನ್ ಸಮುದಾಯದವರು ವಾಸವಾಗಿದ್ದಾರೆ. ಇವರುಗಳಲ್ಲಿ ಕೆಲವರು ಕೃಷಿ ಕೆಲಸದಲ್ಲಿ ದುಡಿಯುತ್ತಾರೆ. ಇನ್ನು ಕೆಲವರು ಕೂಲಿ ಕೆಲಸಗಳಿಗೆ ಹೋಗುತ್ತಾರೆ. ಇನ್ನು ಕೆಲವರು ಪಶುಸಂಗೋಪನೆ ಮಾಡುತ್ತಾರೆ. ಇನ್ನುಳಿದಂತೆ ಕೆಲವರು ವ್ಯಾವಹಾರಿಕ ಪರಿಸರದಲ್ಲಿ ತೊಡಗಿಕೊಂಡಿದ್ದಾರೆ. ಇನ್ನು ಕ್ರಿಶ್ಚಿಯನ್ ಸಮುದಾಯದವರು ಟ್ಯಾಂಕ್ ರಸ್ತೆಯಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡಿದ್ದು, ಇವರುಗಳು ಕನ್ನಡದ ಪರಿಸರದಲ್ಲಿ ಕೂಲಿ, ಖಾಸಗಿ ಕೆಲಸಗಳನ್ನು ಹಾಗೂ ಕ್ರಿಶ್ಚಿಯನ್ ವಿದ್ಯಾಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

ಹಿರಿಯೂರು ತಾಲ್ಲೂಕಿನಲ್ಲಿ ಲಕ್ಕವನಹಳ್ಳಿ ಮತ್ತು ಮಾರಿಕಣಿವೆ ಗ್ರಾಮಗಳಲ್ಲಿ ತಮಿಳು ಭಾಷಿಕರು ವಾಸವಾಗಿದ್ದರೆ. ಇವರುಗಳು ಗೌಂಡರ್ ಸಮುದಾಯಕ್ಕೆ, ಮೊದಲಿಯಾರ್ ಮತ್ತು ಇತರೆ ಸಮುದಾಯಕ್ಕೆ ಸೇರಿದವರು ವಾಸವಾಗಿದ್ದಾರೆ. ಇವರುಗಳು ಕೃಷಿ ಮತ್ತು ತೆಂಗಿನ ತೋಟಗಾರಿಕೆ ವೃತ್ತಿಯನ್ನು ಮಾಡಿಕೊಂಡಿದ್ದಾರೆ. ಆದರೆ ಕೂಲಿ ವರ್ಗದ ಜನರು ಕನ್ನಡ ಪರಿಸರದಲ್ಲಿ ಪಾಲ್ಗೊಳ್ಳುತ್ತಾರೆ. ಇವರುಗಳು ಕನ್ನಡವನ್ನು ಬಾಹ್ಯ ಪರಿಸರದಲ್ಲಿ ಬಳಕೆ ಮಾಡುತ್ತಾರೆ.

ಹೀಗೆ ಹಿರಿಯೂರು ನಗರ ಪ್ರದೇಶದಲ್ಲಿ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ತಮಿಳು ಭಾಷಿಕರು ವಾಸವಾಗಿರುವುದು ಕಾಣಬಹುದು. ಇವರು ಕನ್ನಡದ ಪರಿಸರದಲ್ಲಿ ವೃತ್ತಿ ಜೀವನಕ್ಕಾಗಿ ಮಾಡುತ್ತಿರುವ ಕೆಲಸವನ್ನು ಕಾಣಬಹುದು. ಹಾಗೂ ಬಳಕೆಯ ಭಾಷೆಯಿಂದ ಅವರುಗಳನ್ನು ತಮಿಳು ಭಾಷಿಕರು ಎಂದು ಗುರುತಿಸುತ್ತಾರೆ. ಇವುಗಳನ್ನು ಹೊರತುಪಡಿಸಿದಂತೆ ತಮಿಳರು ಸಾಮಾನ್ಯವಾಗಿ ಮಾರುಕಟ್ಟೆ ಅಂಗಡಿಗಳಲ್ಲಿ ಕೆಲಸ ಮಾಡುವುದರಿಂದ ಕನ್ನಡ ಪರಿಸರದಲ್ಲಿ ಬೇರೆತು ಹೋಗಿದ್ದಾರೆ. ಇನ್ನು ಕನ್ನಡ ಮಾಧ್ಯಮವನ್ನು ಅಧ್ಯಯನ ಮಾಡುವುದರಿಂದ ಇವರ ಮಕ್ಕಳು ಕನ್ನಡಿಗರ ಪರಿಸರದಲ್ಲಿ ಕಲಿಕೆಯನ್ನು ಕಾಣಬಹುದು. ಹೀಗೆ ಸಾಮಾಜಿಕವಾಗಿ ಹಿರಿಯೂರು ಪರಿಸರದಲ್ಲಿ ತಮಿಳು ಭಾಷಿಕರು ರಚನೆ ಹೊಂದಿರುವುದನ್ನು ಕಾಣಬಹುದು.

**ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರ ಸಾಮಾಜಿಕ ಸಂರಚನೆ:**

ಹೊಸಪೇಟೆ ತಾಲ್ಲೂಕು ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ತಮಿಳು ಭಾಷಿಕರು ವಾಸವಾಗಿದ್ದಾರೆ. ಇವರು ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ಸ್ವಾತಂತ್ರ್ಯ ನಂತರದಲ್ಲಿ ಇಲ್ಲಿಗೆ ವಲಸೆ ಬಂದವರಾಗಿದ್ದಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ತುಂಗಭದ್ರ ಅಣೆಕಟ್ಟು ನಿರ್ಮಾಣ ಮಾಡಲು ಬಂದವರು ಇಲ್ಲಿಯೇ ನೆಲೆಸಿದ್ದಾರೆ. ಇನ್ನು ಕೆಲವರು ಇತ್ತೀಚೆಗೆ ಉದ್ಯೋಗವನ್ನು ಅರಸಿ ತಮಿಳುನಾಡಿನಿಂದ ಇಲ್ಲಿಗೆ ಬಂದಿರುವವರು ಇದ್ದಾರೆ. ಹೊಸಪೇಟೆಯ ನಗರದಲ್ಲಿ ಮುಖ್ಯವಾಗಿ ಪಟೇಲ್‌ನಗರದಲ್ಲಿ ಹೆಚ್ಚು ತಮಿಳು ಭಾಷಿಕರು ಇದ್ದಾರೆ. ಇದನ್ನು ಹೊರತುಪಡಿಸಿದರೆ ತುಂಗಭದ್ರಾ ಅಣೆಕಟ್ಟಿನ ಸಮೀಪ ಇರುವ ನಿಶಾನಿ ಕ್ಯಾಂಪ್ ಮತ್ತು ಪಿ.ಎಲ್.ಸಿ. ಕ್ಯಾಂಪ್‌ಗಳಲ್ಲಿ ತಮಿಳು ಭಾಷಿಕರು ವಾಸವಾಗಿರುವುದು ಕಾಣಬಹುದು. ಇವರಲ್ಲಿ ಗೌಂಡರ್, ಮೊದಲಿಯಾರ್, ಚಕ್ಕಳಿಯಾರ್, ಸೆಂಬೆಡವಾರ್, ಆದಿದ್ರಾವಿಡರ್, ವಡ್ಡಾರ್ ಇತರ ಸಮುದಾಯದವರು ಇದ್ದಾರೆ. ಪಿ.ಎಲ್.ಸಿ (ಪಬ್ಲಿಕ್ ಲೇಬರ್ ಕ್ಯಾಂಪ್)ನಲ್ಲಿರುವ ಆದಿದ್ರಾವಿಡರು, ಕ್ರಿಶ್ಚಿಯನ್, ಮುಸ್ಲಿಂ ಸಮುದಾಯದವರು ಅಣೆಕಟ್ಟು ಮತ್ತು ವಿದ್ಯುತ್ ಉತ್ಪಾದನ ಘಟಕಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಅಲ್ಲದೆ ಮೀನುಗಾರಿಕೆ ಇಲಾಖೆಯಲ್ಲಿ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಾರೆ. ಇನ್ನು ನಿಶಾನಿ ಕ್ಯಾಂಪ್‌ನಲ್ಲಿರುವ ಗೌಂಡರ್ ಸಮುದಾಯದವರು ಕೃಷಿ ಕೆಲಸದಲ್ಲಿ ತೊಡಗಿಕೊಂಡಿದ್ದಾರೆ. ಇದನ್ನು ಹೊರತುಪಡಿಸಿದರೆ ಕನ್ನಡದ ಪರಿಸರದಲ್ಲಿ ಅನೇಕ ಕೂಲಿ ಕೆಲಸಗಳನ್ನು ಖಾಸಗಿ ಅವರ ಅಡಿಯಲ್ಲಿ ದಿನಗೂಲಿ ಕೆಲಸಗಾರರಾಗಿ ದುಡಿಯುತ್ತಿದ್ದಾರೆ. ನಗರ ಪ್ರದೇಶದಲ್ಲಿ ವಾಸವಾಗಿರುವ ತಮಿಳು ಭಾಷಿಕರು ಮೊದಲನೇ ತಲೆಮಾರಿನವರು ಪೂರ್ಣ ಪ್ರಮಾಣದಲ್ಲಿ

ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಎರಡು, ಮೂರು, ನಾಲ್ಕನೇ ತಲೆಮಾರಿನವರು ಕನ್ನಡದ ಪರಿಸರದಲ್ಲಿ ಬೆಳೆದಿರುವುದರಿಂದ ಇವರುಗಳು ಕನ್ನಡವನ್ನು ಒಂದು ಭಾಷೆಯಾಗಿ ಕಲಿತು ಮನೆ ಆವರಣದಲ್ಲಿ ತಮಿಳು ಭಾಷೆಯನ್ನು ಮತ್ತು ಬಾಹ್ಯ ಆವರಣದಲ್ಲಿ ಕನ್ನಡವನ್ನು ಬಳಕೆ ಮಾಡುತ್ತಾರೆ. ನಗರ ಪ್ರದೇಶದಲ್ಲಿನ ಆದಿದ್ರಾವಿಡರ್, ಚಕ್ಕಲಿಯಾರ್ ಮತ್ತು ವಡ್ಡಾರ್ ಸಮುದಾಯದವರು ಕೂಲಿ ಕೆಲಸಗಳಲ್ಲಿ ಪಾಲ್ಗೊಳ್ಳುತ್ತಾರೆ. ಹಿರಿಯೂರು ಪರಿಸರದಲ್ಲಿ ಇರುವಂತೆ ತಮಿಳು ಭಾಷಿಕರು ಮಾರುಕಟ್ಟೆಗಳಲ್ಲಿ ವ್ಯಾವಹಾರಿಕವಾಗಿ ಭಾಗಿ ಮತ್ತು ಪ್ರಾಬಲ್ಯವನ್ನು ಹೊಂದಿರುವಂತೆ ಹೊಸಪೇಟೆ ಪರಿಸರದಲ್ಲಿ ತರಕಾರಿ ಮಾರುಕಟ್ಟೆ ಮತ್ತು ಹೂವಿನ ಮಾರುಕಟ್ಟೆಯಲ್ಲಿ ತೆಲುಗು ಭಾಷಿಕರು ಪ್ರಾಬಲ್ಯವನ್ನು ಹೊಂದಿರುವುದು ಕಾಣಬಹುದು. ಇಲ್ಲಿ ತಮಿಳು ಭಾಷಿಕರು ಗುಂಪುಗಳಾಗಿ ವಾಸಮಾಡಿದರು, ಗಮನಿಸಬಹುದಾದ ಅಂಶವೆಂದರೆ ವ್ಯಾವಹಾರಿಕ ಸ್ಥಳಗಳಲ್ಲಿ ಪ್ರಾಬಲ್ಯವನ್ನು ಹೊಂದಿರುವುದಿಲ್ಲ. ಆದರೆ ಕನ್ನಡಿಗರಂತೆಯೇ ಈ ಪರಿಸರದಲ್ಲಿ ಕೂಲಿ ಕಾರ್ಮಿಕರಾಗಿ ದುಡಿಯುವುದು ಕಾಣಬಹುದು.

ಹೊಸಪೇಟೆಯ ಗ್ರಾಮಾಂತರ ಪ್ರದೇಶಗಳಾದ ಕಡ್ಡಿರಾಂಪುರ ಗ್ರಾಮದಲ್ಲಿ ತಮಿಳು ಭಾಷಿಕರು ವಾಸವಾಗಿದ್ದಾರೆ. ಇವರುಗಳು ಗೌಂಡರ್, ಆದಿದ್ರಾವಿಡರ್, ವಡ್ಡಾರ್ ಸಮುದಾಯಗಳು ಹೆಚ್ಚು ವಾಸವಾಗಿರುವುದು ಕಾಣಬಹುದು. ಮಾಹಿತಿದಾರರು ಹೇಳುವಂತೆ ಹೊಸಪೇಟೆ ಪರಿಸರದಲ್ಲಿಯೇ ಮೊದಲು ವಲಸೆ ಬಂದು ನೆಲೆಸಿದವರು ಎಂದು ತಿಳಿಸುತ್ತಾರೆ. ಇವರುಗಳು ಸೇಲಂನಿಂದ ಇಲ್ಲಿ ಬಾಳೆ ಮತ್ತು ಕಬ್ಬು ಬೆಳೆಯನ್ನು ಬೆಳೆಯಲು ಬಂದು ನೆಲೆಸಿದವರು ಎಂದು ತಿಳಿಸುತ್ತಾರೆ. ಅಲ್ಲದೇ ಕಡ್ಡಿರಾಂಪುರದಲ್ಲಿಯೇ ಮೊದಲು ಮುರುಗನ್ ದೇವಾಲಯವನ್ನು ನಿರ್ಮಿಸಲಾಗಿದೆ ಎಂದು ತಿಳಿಸುತ್ತಾರೆ. ಇಡೀ ತಾಲ್ಲೂಕಿನ ಜನರು ಮುರುಗನ್ ದೇವಾಲಯಕ್ಕೆ ಬರುತ್ತಾರೆ. ಇತ್ತೀಚೆಗೆ ಕಮಲಾಪುರ ಮತ್ತು ಹೊಸಪೇಟೆಯ ನಗರಗಳಲ್ಲಿ ಮುರುಗನ್ ದೇವಾಲಯಗಳು ನಿರ್ಮಾಣಗೊಂಡಿವೆ. ಇಲ್ಲಿನ ಬಹುತೇಕ ಜನರು ಕೃಷಿ ಚಟುವಟಿಕೆಯಲ್ಲಿ ತಮ್ಮ ವೃತ್ತಿಯನ್ನು ಕಂಡುಕೊಂಡಿದ್ದಾರೆ. ಇಂದಿಗೂ ಕಬ್ಬು ಮತ್ತು ಬಾಳೆ ಕೃಷಿ ಮಾಡುವುದು ನೋಡಬಹುದು. ಇತ್ತೀಚೆಗೆ ಜನಸಂಖ್ಯೆ ಬೆಳೆದಂತೆ ಇಲ್ಲಿನ ಜನರು ಕೃಷಿ ಕೆಲಸದ ದಿನಗೂಲಿಗಳಾಗಿ ಮತ್ತು ವಿದ್ಯಾವಂತ ಯುವಕರು ಹೊಸಪೇಟೆ ನಗರದ ಹಲವು ಖಾಸಗಿ ಕೆಲಸಗಳಲ್ಲಿ ತೊಡಗಿಕೊಂಡಿದ್ದಾರೆ. ಇವರುಗಳು ಸಾಮಾನ್ಯವಾಗಿ ಮನೆಯ ಆವರಣದಲ್ಲಿ ತಮಿಳನ್ನು ಮತ್ತು ಬಾಹ್ಯ ಪರಿಸರದಲ್ಲಿ ಕನ್ನಡವನ್ನು ಬಳಕೆ ಮಾಡುತ್ತಾರೆ. ಮೊದಲ ಎರಡು ತಲೆಮಾರಿನವರು ತಮಿಳನ್ನು ಪೂರ್ಣ ಪ್ರಮಾಣದಲ್ಲಿ ಬಳಕೆ ಮಾಡುತ್ತಾರೆ. ನಂತರದ ಎರಡು ತಲೆಮಾರಿನವರು ಕನ್ನಡ ಮತ್ತು ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಇವರುಗಳು ಕನ್ನಡ ಮಾಧ್ಯಮದಲ್ಲಿ ಶಿಕ್ಷಣವನ್ನು ಪಡೆದಿದ್ದಾರೆ.

ಹೊಸಪೇಟೆ ತಾಲ್ಲೂಕಿನ ಕಮಲಾಪುರ ಪಟ್ಟಣದಲ್ಲಿ ತಮಿಳು ಭಾಷಿಕರು ವಾಸವಾಗಿದ್ದಾರೆ. ಇವರುಗಳು ತುಂಗಭದ್ರಾ ಅಣೆಕಟ್ಟು ನಿರ್ಮಿಸುವಾಗ ಬಂದು ನೆಲೆಸಿದವರು ಎಂದು ತಿಳಿಸುತ್ತಾರೆ. ಇವರುಗಳಲ್ಲಿ ಗೌಂಡರ್ ವಡ್ಡಾರ್, ಚಕ್ಕಲಿಯಾರ್, ಕ್ರಿಶ್ಚಿಯನ್, ಮುಸ್ಲಿಂ, ಆದಿದ್ರಾವಿಡರ್, ವಿಶ್ವಕರ್ಮ ಸಮುದಾಯದವರು ವಾಸವಾಗಿದ್ದಾರೆ. ಕಮಲಾಪುರದ 'ಹೆಚ್.ಪಿ.ಸಿ.'(ಹೈಡ್ರೋ ಪವರ್ ಕಾರ್ಪೋರೇಷನ್)ಯಲ್ಲಿ ತಮಿಳು

ಭಾಷಿಕರು ಗುಂಪು ಗುಂಪಾಗಿ ವಾಸವಾಗಿದ್ದಾರೆ. ಇವರುಗಳು ಇಂದಿಗೂ ಕೂಲಿ ಕೆಲಸ ಮತ್ತು ಇತರೆ ಕೆಲಸಗಳನ್ನು ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಇನ್ನು ಕನ್ನಡ ವಿಶ್ವವಿದ್ಯಾಲಯದ ರಸ್ತೆಯ 'ಕುಪ್ಪೈಯ ಕ್ಯಾಂಪ್' ಭಾಗದಲ್ಲಿ ವಡ್ಡಾರ್ ಸಮುದಾಯದ ಜನರು ವಾಸವಾಗಿದ್ದಾರೆ. ಇವರುಗಳು ಕೃಷಿ ಕೂಲಿ ಕಾರ್ಮಿಕರಾಗಿ ಬದುಕುತ್ತಿದ್ದಾರೆ. ಇನ್ನು ಮುರುಗನ್ ದೇವಾಲಯದ ಸಮೀಪದಲ್ಲಿ ಕೆಲವು ಗೌಂಡರ್ ಸಮುದಾಯದವರು ವಾಸವಾಗಿದ್ದಾರೆ. ಇವರು ಕೃಷಿ, ಖಾಸಗೀ ವ್ಯವಹಾರಗಳನ್ನು ಮಾಡುತ್ತಾರೆ. ಇವರು ಮನೆಯ ಆವರಣದಲ್ಲಿ ತಮಿಳನ್ನು ಬಳಕೆ ಮಾಡುತ್ತಾರೆ. ಬಾಹ್ಯ ಆವರಣದಲ್ಲಿ ಕನ್ನಡ ಮತ್ತು ತೆಲುಗು ಭಾಷೆಯನ್ನು ಬಳಕೆ ಮಾಡುವುದು ಕಂಡುಬಂದಿದೆ. ಇವರ ಮಕ್ಕಳು ಕನ್ನಡ ಮಾಧ್ಯಮ ದಲ್ಲಿ ಅಧ್ಯಯನ ಮಾಡುತ್ತಿದ್ದಾರೆ. ಗೌಂಡರ್ ಸಮುದಾಯದ ಪುರುಷರು ಕನ್ನಡ ಪರಿಸರದಲ್ಲಿ ಬೇರೆ ಬೇರೆ ವಾಣಿಜ್ಯ ಚಟುವಟಿಕೆಯಲ್ಲಿ ಪಾಲ್ಗೊಂಡಿರುವುದರಿಂದ ಕನ್ನಡವನ್ನು ಸ್ಪಷ್ಟವಾಗಿ ಮಾತನಾಡುತ್ತಾರೆ.

ಇನ್ನು ಹೊಸಪೇಟೆ ತಾಲ್ಲೂಕಿನ ಗ್ರಾಮೀಣ ಭಾಗವಾದ ವೆಂಕಟಾಪುರ, ಎಂ.ಪಿ. ಪ್ರಕಾಶ ನಗರ ಇತರೆಡೆಗಳಲ್ಲಿ ಸಣ್ಣ ಸಣ್ಣ ಗುಂಪುಗಳಾಗಿ ತಮಿಳು ಭಾಷಿಕರು ವಾಸಮಾಡುತ್ತಿದ್ದಾರೆ. ಇವರುಗಳು ಮನೆಯಲ್ಲಿ ತಮಿಳನ್ನು ಮತ್ತು ಬಾಹ್ಯ ಪರಿಸರದಲ್ಲಿ ಕನ್ನಡವನ್ನು ಬಳಕೆ ಮಾಡುತ್ತಾರೆ. ಇದರೊಂದಿಗೆ ಕನ್ನಡದ ಪರಿಸರದಲ್ಲಿ ತಮ್ಮ ಜೀವನ ನಿರ್ವಹಣೆಗಾಗಿ ಕೆಲವರು ಮೀನುಗಾರಿಕೆ ವೃತ್ತಿಯನ್ನು ಮಾಡಿದರೆ, ಇನ್ನು ಕೆಲವರು ತಮಿಳುನಾಡಿನಿಂದ ತಯಾರಿಸಿ ತಂದ ಕಡ್ಡಿಚಾಪೆ, ಕಡ್ಡಿಪೊರಕೆಗಳನ್ನು ವ್ಯಾಪಾರ ಮಾಡುವ ವೃತ್ತಿಯಲ್ಲಿ ತೊಡಗಿದ್ದಾರೆ. ಇದಲ್ಲದೆ ಇಲ್ಲಿನ ಮೀನುಗಾರರು ಕಾಲಕ್ಕೆ ತಕ್ಕಂತೆ ಮರುವಲಸೆ ಹೋಗುತ್ತಾರೆ. ಮೀನುಗಾರಿಕೆ ವೃತ್ತಿ ಕಡಿತಗೊಂಡಾಗ ಇವರು ತಮಿಳುನಾಡಿಗೆ ಹೋಗುತ್ತಾರೆ. ಮತ್ತೆ ಮೀನುಗಾರಿಕೆ ವೃತ್ತಿ ಪ್ರಾರಂಭಗೊಂಡಾಗ ಇವರು ಕರ್ನಾಟಕಕ್ಕೆ ಬರುತ್ತಾರೆ. ಹೀಗೆ ಇವರು 'ಸೀಜನಲ್ ವಲಸೆ' ಪ್ರಕ್ರಿಯೆಯಲ್ಲಿ ಬದುಕುತ್ತಾರೆ.

ತಮಿಳು ಭಾಷಿಕರ ಸುಮಾರು ೬೦-೭೦ವರ್ಷಗಳಿಂದ ನೆಲೆಸಿರುವ ಇವರುಗಳ ಮೂರು ಮತ್ತು ನಾಲ್ಕನೇ ತಲೆಮಾರಿನ ಮಕ್ಕಳು ಕನ್ನಡದಲ್ಲಿ ಅಧ್ಯಯನ ಮಾಡಿ ಬಹುತೇಕರು ಉನ್ನತ ಹುದ್ದೆಗಳಿಗೆ ಹೋಗಿದ್ದಾರೆ. ಕೆಲವರು ಸರ್ಕಾರಿ ನೌಕರರಾಗಿ ದುಡಿಯುತ್ತಿದ್ದಾರೆ. ಇನ್ನು ಕೆಲವರು ರಾಜಕೀಯ, ಆರ್ಥಿಕ, ಧಾರ್ಮಿಕ ಕಾರಣಕ್ಕಾಗಿ ಉನ್ನತ ಸ್ಥಾನದಲ್ಲಿ ಇದ್ದಾರೆ. ಹೀಗೆ ಹೊಸಪೇಟೆ ತಾಲ್ಲೂಕಿನಲ್ಲಿರುವ ವಿವಿಧ ಗ್ರಾಮದ ತಮಿಳು ಭಾಷಿಕರು ತಮ್ಮ ವೃತ್ತಿ ಮತ್ತು ಜೀವನದಿಂದಾಗಿ ಕನ್ನಡದ ಪರಿಸರದಲ್ಲಿ ಸಾಮಾಜಿಕ ರಚನೆಯನ್ನು ಹೊಂದಿದ್ದಾರೆ.

**೫.೩. ಕರ್ನಾಟಕದಲ್ಲಿ ತಮಿಳು ಭಾಷಿಕರ ಸಾಮಾಜಿಕ ಸ್ಥಾನ**

ಒಂದು ಬೃಹತ್ ಭಾಷಿಕ ಪರಿಸರದಲ್ಲಿ ವಲಸೆಯ ಮೂಲಕ ಮತ್ತೊಂದು ಅಪರಿಚಿತ ಭಾಷಿಕರು ಬಂದು ನೆಲೆಸಿದರೆ ಬೇರೆ ಬೇರೆ ಕಾರಣಗಳಿಗೆ ಪರ ಮತ್ತು ವಿರೋಧಗಳು ಅಂಶಗಳು ಬರುವುದು ಕಾಣುತ್ತೇವೆ. ಇಲ್ಲಿ ಪರ ಅಂಶಗಳಾಗಿ ವಲಸಿಗ ಭಾಷಿಕರನ್ನು ಅನುಕಂಪದ ನೆಲೆಯಿಂದ ನೋಡುವುದು, ಅವರು ವಲಸಿಗರಾಗಿರುವ ಕಾರಣ ಅವಶ್ಯಕತೆಗಳನ್ನು ಗಳಿಸಿಕೊಳ್ಳುವಲ್ಲಿ ಸಹಕರಿಸುವುದು ಅಥವಾ ಪೂರೈಸುವುದು.

ಇನ್ನು ವಿರೋಧಗಳು ಎಂದರೆ ಅವರು ವಲಸಿಗರಾಗಿರುವ ಕಾರಣ ಮತ್ತು ಅವರು ಅಪರಿಚಿತರಾದ ಕಾರಣಕ್ಕೆ ಅವರ ಸಾಮಾಜಿಕ ನಡವಳಿಕೆಯ ಕುರಿತು, ಜೀವನದ ಕ್ರಮ ಕುರಿತು ಅನುಮಾನದಿಂದ ಕಾಣುವುದು. ಆ ಸ್ಥಳಗಳಲ್ಲಿ ಆಗುವ ಕೆಲವು ಘಟನೆಗಳಿಗೆ ಇವರನ್ನು ಕಾರಣ ಎಂದು ದೂರುವುದು ಕಾಣುತ್ತೇವೆ. ಸಂದರ್ಭಗಳಲ್ಲಿ ವಲಸಿಗರು ಬಂದು ತಲೆಮಾರುಗಳು ಕಳೆದುರು ಅವರನ್ನು ಬೃಹತ್ ಭಾಷಿಕ ಪರಿಸರದವರು ಸಾಮಾಜಿಕ ಗೌರವ ಮತ್ತು ಜೀವನ ಕ್ರಮಗಳಿಂದ ದೂರವಿಡುವುದು ಕಾಣುತ್ತೇವೆ. ಇದಕ್ಕೆ ಸಾಮಾಜಿಕವಾಗಿ ರೂಢಿಗೊಂಡಿರುವ ಕೆಲವು ಆಪಾದನೆಯ ಅಂಶಗಳು ಇದಕ್ಕೆ ಕಾರಣವಾಗಿರಬಹುದು. ಇದೇ ರೀತಿಯಲ್ಲಿ ಕನ್ನಡದ ಬೃಹತ್ ಭಾಷಿಕ ಪರಿಸರದಲ್ಲಿ ವಲಸೆಯ ಮೂಲಕ ಬಂದು ನೆಲೆಸಿರುವ ತಮಿಳು ಭಾಷಿಕರು ಕನ್ನಡದ ಪರಿಸರದಲ್ಲಿ ಸಾಮಾಜಿಕವಾಗಿ ಭಾಗವಹಿಸುವಿಕೆ, ರಾಜಕೀಯವಾಗಿ ಸ್ಥಾನಮಾನ ಗಳಿಸಿಕೊಳ್ಳುವುದು. ಧಾರ್ಮಿಕವಾಗಿ ಇತರೆ ಚಟುವಟಿಕೆಗಳಲ್ಲಿ ಸ್ಥಾನಮಾನವನ್ನು ಕಂಡುಕೊಳ್ಳುವುದು. ಅನ್ಯಭಾಷಿಕರಾದ ಕಾರಣಕ್ಕೆ ಇವರನ್ನು ಸಾಮಾಜಿಕ ಸ್ಥಾನಮಾನದಿಂದ ದೂರವಿಡಲಾಗಿದೆಯೇ. ಭಾಷೆಯು ಇವರನ್ನು ಕನ್ನಡ ಭಾಷಿಕರಿಂದ ವಿಭಾಗಿಸಲ್ಪಟ್ಟಿದಿಯೇ ಎಂಬ ಅಂಶಗಳನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳುವುದಾಗಿದೆ.

ಕನ್ನಡ ಪರಿಸರದಲ್ಲಿ ಸಾಮಾಜಿಕವಾಗಿ ಪಾಲ್ಗೊಂಡಿರುವ ತಮಿಳು ಭಾಷಿಕರು ಭಾಷಿಕ ಕಾರಣಕ್ಕೇನಾದರೂ ಅಪಮಾನಗಳನ್ನು ಅನುಭವಿಸುತ್ತಾರೆಯೇ? ಅವುಗಳ ಹಿಂದಿರುವ ಸಾಮಾಜಿಕ ಕಾರಣಗಳನ್ನು ಕಂಡುಕೊಳ್ಳುವುದು. ಕನ್ನಡ ಮತ್ತು ತಮಿಳು ಭಾಷಿಕರು ಪರಸ್ಪರ ಹೊಂದಿಕೊಂಡು ಗೌರವಿಸುವ ಅಂಶಗಳನ್ನು ಇಲ್ಲಿ ಕಂಡುಕೊಳ್ಳುವುದು. ಈ ಎಲ್ಲಾ ಅಂಶಗಳಿಗೆ ಭಾಷೆ ಹೇಗೆ ಸಹಕಾರಿಯಾಗಿದೆ ಎಂಬುದನ್ನು ತಿಳಿಯುವುದಾಗಿದೆ.

ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರು ಕನ್ನಡಿಗರ ಪರಿಸರದಲ್ಲಿ ಯಾವ ರೀತಿಯ ಸ್ಥಾನಮಾನವನ್ನು ಪಡೆದಿದ್ದಾರೆ ಎಂಬುದನ್ನು ಮುಖ್ಯವಾಗಿ ಎರಡು ಅಂಶಗಳನ್ನು ಆಧರಿಸಿ ಗಮನಿಸಬಹುದು. ೧. ರಾಜಕೀಯವಾಗಿ ಭಾಗವಹಿಸುವಿಕೆ. ೨. ಧಾರ್ಮಿಕವಾಗಿ ಭಾಗವಹಿಸುವಿಕೆ. ಅಂದರೆ ಅನ್ಯಭಾಷಿಕರಾದ ತಮಿಳರು ಕನ್ನಡ ಪರಿಸರದಲ್ಲಿ ರಾಜಕೀಯವಾಗಿ ಮತ್ತು ಧಾರ್ಮಿಕವಾಗಿ ಭಾಗವಹಿಸಲು ಸಾಧ್ಯವೇ, ಅವರು ಈ ಅಂಗಳದಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದಾರೆಯೇ ಎಂಬುದನ್ನು ಗಮನಿಸುವ ಮೂಲಕ ಕರ್ನಾಟಕದಲ್ಲಿ ತಮಿಳು ಭಾಷಿಕರ ಸ್ಥಾನಮಾನವನ್ನು ಕಂಡುಕೊಳ್ಳುವುದಾಗಿದೆ.

**ರಾಜಕೀಯವಾಗಿ**

ಕನ್ನಡದ ಪರಿಸರದಲ್ಲಿ ತಮಿಳುನಾಡಿನಿಂದ ವಲಸೆ ಬಂದು ನೆಲೆಸಿರುವ ತಮಿಳು ಭಾಷಿಕ ಸಮುದಾಯಗಳು ಒಂದು ರೀತಿಯಲ್ಲಿ ಕನ್ನಡಿಗರೊಂದಿಗೆ ಹೊಂದಿಕೊಂಡು ಸಾಮಾಜಿಕವಾಗಿ ಜೀವನವನ್ನು ನಡೆಸುತ್ತಿದ್ದಾರೆ. ಭಾರತದ ಸಂವಿಧಾನದಿಂದ ಪ್ರತಿ ಭಾರತೀಯರಿಗೂ ಕೊಡಲ್ಪಟ್ಟಿರುವಂತೆ ಭಾರತದಲ್ಲಿ ಎಲ್ಲಿಯಾದರೂ ವಾಸಿಸುವ ಹಕ್ಕು, ಮತದಾನ ಹಕ್ಕು, ಚುನಾವಣೆಗೆ ಸ್ಪರ್ಧಿಸುವ ಅವಕಾಶ, ಸರ್ಕಾರಿ ಸೌಲಭ್ಯಗಳಾದ ವಸತಿ, ಮೂಲಭೂತ ಸೌಕರ್ಯಗಳನ್ನು ಪಡೆಯುವ ಹಕ್ಕು, ಭಾರತದ ಸಂವಿಧಾನದ ೧೫ನೇ ವಿಧಿಯಂತೆ ಜಾತಿ, ಧರ್ಮ, ಜನಾಂಗದ ಆಧಾರದ ಮೇಲೆ ತಾರತಮ್ಯ ಮಾಡುವಂತಿಲ್ಲ. ಮತ್ತು ೧೯ನೇ ವಿಧಿಯಂತೆ ವಾಕ್‌ಸ್ವಾತಂತ್ರ್ಯ, ಸಭೆ ಸೇರುವ ಸ್ವಾತಂತ್ರ್ಯ, ಸಂಘ ಕಟ್ಟುವ ಸ್ವಾತಂತ್ರ್ಯ, ಸಂಚರಿಸುವ ಸ್ವಾತಂತ್ರ್ಯ, ವಾಸಿಸುವ, ಉದ್ಯೋಗ ಸ್ವಾತಂತ್ರ್ಯವನ್ನು ಪಡೆದಿರುತ್ತಾರೆ. ಹೀಗೆ ಸಂವಿಧಾನದಲ್ಲಿ ಕೊಟ್ಟಿರುವ ಹಕ್ಕು ಮತ್ತು

ಸ್ವಾತಂತ್ರ್ಯವನ್ನು ಕನ್ನಡ ಪರಿಸರದಲ್ಲಿ ತಮಿಳರಿಗೆ ನೀಡಲಾಗಿದೆ. ಇವುಗಳನ್ನು ತಮಿಳು ಭಾಷಿಕರು ಪಡೆಯಲು ಬೇರೆ ಭಾಷಿಕ ಪರಿಸರದಿಂದ ನಿಯಂತ್ರಿಸಲಾಗುತ್ತಿದೆ. ಒಟ್ಟಾರೆಯಾಗಿ ಕನ್ನಡದ ಪರಿಸರದಲ್ಲಿ ಭಾರತದ ಸಂವಿಧಾನ ಬದ್ಧವಾಗಿ ಕೊಡಲ್ಪಟ್ಟಿರುವ ಹಕ್ಕುಗಳನ್ನು ತಮಿಳು ಭಾಷಿಕರಿಗೆ ನೀಡಿ ಅವರನ್ನು ಸಮಾನರು ಎಂದು ಕಾಣಲಾಗುತ್ತದೆಯೇ? ಅವರ ಒಟ್ಟಾರೆ ರಾಜಕೀಯ ಸ್ಥಾನವನ್ನು ತಿಳಿಯುವುದು ಈ ಉಪಘಟಕದ ಉದ್ದೇಶವಾಗಿದೆ.

ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮ್ಮ ವಾಸದ ನೆಲೆಯನ್ನು ಕಂಡುಕೊಂಡಿರುವ ತಮಿಳು ಭಾಷಿಕರು ಹೆಚ್ಚಾಗಿರು ಉದ್ಯೋಗವನ್ನು ಅರಸಿ ಬಂದವರಾಗಿದ್ದಾರೆ. ಅವರಲ್ಲಿ ಕೆಲವೇ ಕೆಲವರು ಮಾತ್ರ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಉತ್ತಮ ಸ್ಥಿತಿಯನ್ನು ಹೊಂದಿದವರಾಗಿದ್ದಾರೆ. ಹೀಗೆ ಬಂದವರು ಕನ್ನಡ ಪರಿಸರದಲ್ಲಿ ಅನ್ಯಭಾಷಿಕರಾಗಿ ಗುರುತಿಸಿಕೊಳ್ಳುತ್ತಾರೆ. ಅಲ್ಲದೇ ತಮಿಳು ಭಾಷಿಕರು ಸ್ವಾತಂತ್ರ್ಯ ಪೂರ್ವದಲ್ಲಿ ಕರ್ನಾಟಕಕ್ಕೆ ಬಂದರೂ ಅವರನ್ನು ಕೌಶಲ್ಯಾಧಾರಿತ ಕೆಲಸಗಾರರು ಎಂದು ಕಂಡುಕೊಳ್ಳಲಾಗಿದೆ. ಅಂದರೆ ಅಣೆಕಟ್ಟು ಕಟ್ಟಲು, ಅದಕ್ಕೆ ಬೇಕಾದ ಸಾಮಗ್ರಿಗಳನ್ನು ಸಿದ್ಧಪಡಿಸಲು, ಕಲ್ಲು ಹೊಡೆಯಲು ಇವರನ್ನು ಮುಖ್ಯವಾಗಿ ಆಧರಿಸಲಾಗಿತ್ತು. ಇವತ್ತು ಇವರಲ್ಲಿ ಅನೇಕರು ಕರ್ನಾಟಕಕ್ಕೆ ಬಂದಾಗ ಅಣೆಕಟ್ಟು ಕೆಲಸದಲ್ಲಿ ಕಲ್ಲು ಹೊಡೆಯುವ ಮತ್ತು ಕಾಂಕ್ರೀಟ್ ಕೆಲಸ ಮಾಡುತ್ತಿದ್ದೆವು ಎಂದು ತಿಳಿಸುತ್ತಾರೆ. ಈ ರೀತಿಯಾಗಿ ಬೇರೊಂದು ಸ್ಥಳದಿಂದ ಬಂದ ತಮಿಳು ಭಾಷಿಕರು ಕೆಳವರ್ಗದ ಮತ್ತು ದಿನಗೂಲಿ ಕೆಲಸಕ್ಕೆ ಬಂದವರು ಇದ್ದಾರೆ. ಇವರನ್ನು ಕನ್ನಡದ ಪರಿಸರದಲ್ಲಿ ಸಾಮಾನ್ಯವಾಗಿ ಕಾಣುವ ಮತ್ತು ಅವರಲ್ಲಿ ಕೆಲವರು ಅನುಕಂಪದಿಂದ ನಡೆಸಿಕೊಂಡು ಬಂದಿರುವುದನ್ನು ಕಾಣಬಹುದು. ನಂತರ ೧೯೬೦ರ ನಂತರದಲ್ಲಿ ಬದಲಾದ ಪರಿಸ್ಥಿತಿಯಲ್ಲಿ ತಮಿಳು ಭಾಷಿಕರು ಅಣೆಕಟ್ಟು ಕಾಮಗಾರಿ ಮುಗಿದಾಗ ತಮ್ಮ ವೃತ್ತಿಯನ್ನು ಕಳೆದುಕೊಂಡರು. ಆ ನಂತರದಲ್ಲಿ ಕನ್ನಡದ ಪರಿಸರದಲ್ಲಿ ಇದೆ ವೃತ್ತಿಯನ್ನು ಕೆಲವರು ಮುಂದುವರೆಸಿದರು. ಅದರಲ್ಲಿ ಕೆಲವರು ಬೇರೆ ಬೇರೆ ವೃತ್ತಿಯಲ್ಲಿ ಮುಂದುವರೆದರು. ಆದರೆ ಇವರುಗಳನ್ನು ಅಂದಿನ ಸ್ಥಳೀಯ ಸಂಸ್ಥೆಗಳು ಕನ್ನಡಿಗರಂತೆಯೇ ಸಂವಿಧಾನಾತ್ಮಕ ಹಕ್ಕುಗಳನ್ನು ನೀಡಿ ಗೌರವಿಸಿತು. ಅಂದರೆ ಈ ಪರಿಸರಗಳಲ್ಲಿ ಐದು ವರ್ಷಕ್ಕಿಂತ ಹೆಚ್ಚು ಕಾಲ ವಾಸ್ತವ್ಯ ಹೂಡಿದ ಜನರಿಗೆ ಕಾನೂನು ಬದ್ಧ ವಾಸಿಸುವ, ಹಾಗೂ ಸ್ಥಳೀಯ ಪೌರತ್ವವನ್ನು ನೀಡಿತು. ಆನಂತರದಲ್ಲಿ ಇವರಿಗೆ ಇಲ್ಲಿನ ಚುನಾವಣಾ ಗುರುತಿನ ಚೀಟಿ ನೀಡುವ ಮೂಲಕ ಅವರು ಕನ್ನಡಿಗರಂತೆ ರಾಜಕೀಯವಾಗಿ ಮತದಾನ ಮತ್ತು ಚುನಾವಣೆಯಲ್ಲಿ ಸ್ಪರ್ಧಿಸುವ ಅವಕಾಶವನ್ನು ನೀಡಲಾಯಿತು. ಹೀಗೆ ಇವರು ಕನ್ನಡಿಗರೊಂದಿಗೆ ರಾಜಕೀಯ ಹಕ್ಕು ಮತ್ತು ಸ್ವಾತಂತ್ರ್ಯವನ್ನು ಪಡೆಯುತ್ತಾರೆ.

ಪ್ರಸ್ತುತ ಇವರ ರಾಜಕೀಯ ಸ್ಥಾನಮಾನವು ಕನ್ನಡಿಗರಂತೆಯೇ ಇದೆ. ಇಲ್ಲಿ ಕನ್ನಡಿಗರು ಸ್ಪರ್ಧಿಸುವಂತೆ ಗ್ರಾಮಪಂಚಾಯಿತಿ ಸಾಮಾನ್ಯ ಸದಸ್ಯರಿಂದ ಹಿಡಿದು ಜಿಲ್ಲಾ ಪಂಚಾಯಿತಿ ಸದಸ್ಯರವರೆಗೂ ಮತದಾನ ಮಾಡುವ ಹಾಗೂ ಚುನಾವಣೆಗೆ ಸ್ಪರ್ಧಿಸುತ್ತಿದ್ದಾರೆ. ಅಲ್ಲದೇ ಇವರುಗಳು ವಾಸಿಸುವ ಸ್ಥಳಗಳಿಗೆ ಅನುಗುಣವಾಗಿ ನಗರಗಳಾಗಿದ್ದರೆ ವಾರ್ಡ್‌ಗಳಲ್ಲಿ ಮತ್ತು ಗ್ರಾಮಗಳಾಗಿದ್ದರೆ ಗ್ರಾಮಪಂಚಾಯಿತಿ ಸದಸ್ಯ ತಮಿಳು ಭಾಷಿಕರನ್ನೇ ಆಯ್ಕೆ ಮಾಡಿಕೊಳ್ಳುತ್ತಾರೆ. ಆ ಮೂಲಕ ಕನ್ನಡದ ಪರಿಸರದಲ್ಲಿ ತಮ್ಮ ರಾಜಕೀಯ ಸ್ಥಾನವನ್ನು ತಾವುಗಳೇ ಆಯ್ಕೆಮಾಡುವ ವಿಧಾನದ ಮೂಲಕ ಪಡೆದುಕೊಂಡಿದ್ದಾರೆ. ಇದರೊಂದಿಗೆ ಕೆಲವು ತಮಿಳು

ಭಾಷಿಕರು ವಾಸಿಸುವ ಸ್ಥಳಗಳಲ್ಲಿ ಕನ್ನಡಿಗರು ಸ್ಪರ್ಧಿಸುತ್ತಾರೆ. ಆ ಮೂಲಕ ಪರಸ್ಪರರು ರಾಜಕೀಯ ಹಕ್ಕನ್ನು ಚಲಾಯಿಸುವ ಮತ್ತು ಪಡೆಯುವ ಸಂದರ್ಭಗಳನ್ನು ಕಾಣಬಹುದು.

ಪ್ರಸ್ತುತ ಹಿರಿಯೂರು ನಗರಸಭೆಯಲ್ಲಿ ತಮಿಳು ಭಾಷಿಕರು ಸದಸ್ಯರಾಗಿ ಆಯ್ಕೆಯಾಗಿರುವುದು ಕಾಣಬಹುದು. ಅವರಲ್ಲಿ

೧. ಪಿ. ಜಯರಾಜ್ — ವಾರ್ಡ್ ನಂಬರ್-೨೦

೨. ಲತಾ — ವಾರ್ಡ್ ನಂಬರ್-೧೫

೩. ಎ. ಮಂಜುನಾಥ — ವಾರ್ಡ್ ನಂಬರ್-೨೨

ಹೀಗೆ ತಮಿಳು ಭಾಷಿಕರು ತಮ್ಮ ರಾಜಕೀಯ ಅಸ್ತಿತ್ವನ್ನು ಕಾಪಾಡಿಕೊಂಡು ಬಂದಿದ್ದಾರೆ. ಅಲ್ಲದೇ ಸುತ್ತಲೂ ಗ್ರಾಮಾಂತರ ಪ್ರದೇಶಗಳಲ್ಲಿ ವಾಸವಾಗಿರುವ ಇವರುಗಳು ತಮ್ಮ ಪ್ರದೇಶಗಳಲ್ಲಿ ರಾಜಕೀಯವಾಗಿ ಪ್ರವೇಶವನ್ನು ಪಡೆದು ಗ್ರಾಮಪಂಚಾಯಿತಿ ಸದಸ್ಯರಾಗಿ ನೇಮಕಗೊಂಡಿದ್ದಾರೆ.

ರಾಜಕೀಯವಾಗಿ ಅಂದರೆ ಕೇವಲ ಚುನಾವಣೆ ಮತ್ತು ಮತದಾನವನ್ನಷ್ಟೇ ಇಲ್ಲಿ ಕೇಂದ್ರಿಕರಿಸಿಲ್ಲ. ಅದರೊಂದಿಗೆ ಸಂವಿಧಾನ ನೀಡಿರುವ ಕೆಲವು ಅವಕಾಶಗಳ ಕುರಿತು ಮಾಹಿತಿ ಸಂಗ್ರಹಿಸಿದೆ.

| ಕ್ರ. ಸಂ | | ಹಿರಿಯೂರು | ಹೊಸಪೇಟೆ |
|---|---|---|---|
| ೦೧ | ಮತದಾನ ಹಕ್ಕು | ಇದೆ | ಇದೆ |
| ೦೨ | ಚುನಾವಣೆಗೆ ಸ್ಪರ್ಧಿಸಲು ಅವಕಾಶ | ಅವಕಾಶವಿದೆ | ಅವಕಾಶವಿದೆ |
| ೦೩ | ನಿಮಗೆ ಸರಿಯನಿಸಿದ ಭಾಷೆ ಮಾತನಾಡುವ ಹಕ್ಕು | ಇದೆ | ಇದೆ |
| ೦೪ | ಭಾಷೆ-ಜಾತಿ-ಧರ್ಮದ ತಾರತಮ್ಯವಿದೆಯೇ | ಇಲ್ಲ | ಇಲ್ಲ |
| ೦೫ | ನಿಮ್ಮ ಭಾಷಾ ಸಮುದಯದ ಸಂಘಗಳಿವೆಯೇ | ಇವೆ | ಇವೆ |

ಈ ಕೋಷ್ಟಕವು ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರು ಕನ್ನಡದ ಪರಿಸರದಿಂದ ರಾಜಕೀಯವಾಗಿ ಪಡೆಯುತ್ತಿರುವ ಹಕ್ಕು ಮತ್ತು ಅವಕಾಶಗಳ ಕುರಿತು ಮಾಹಿತಿ ನೀಡುತ್ತದೆ. ಇಲ್ಲಿ ತಮಿಳು ಭಾಷಿಕರು ಕನ್ನಡ ಪರಿಸರದಲ್ಲಿ ರಾಜಕೀಯ ಕ್ಷೇತ್ರದಲ್ಲಿ ಪಾಲ್ಗೊಳ್ಳುವಿಕೆ ಮತ್ತು ಸಂವಿಧಾನ ನೀಡಿರುವ ಕೆಲವು ಅವಕಾಶಗಳನ್ನು ಗಮನಿಸಲಾಗಿದೆ. ಅನ್ಯಭಾಷಿಕರು ಎನ್ನುವ ಕಾರಣಕ್ಕೆ ಕನ್ನಡದ ಪರಿಸರದಲ್ಲಿ ಇವರನ್ನು ತಾರತಮ್ಯದಿಂದ ಕಾಣುತ್ತಾರೆ? ಅಥವಾ ಇವರಿಗೆ ಸಮಾನ ಗೌರವನ್ನು ನೀಡುತ್ತಾರೆಯೇ ಎನ್ನುವುದು ಇಲ್ಲಿ ಕಾಣಬಹುದು. ಎರಡು ಪ್ರದೇಶಗಳಲ್ಲಿ ತಮಿಳರು ತಮಗೆ ಸರಿಯೆನಿಸಿದ ಭಾಷೆಯನ್ನು ಮಾತನಾಡಲು ಅವಕಾಶವಿದೆ ಎಂದು ಹೇಳುತ್ತಾರೆ. ಆದರೆ ಕೆಲವು ಮಾಹಿತಿದಾರರ ಅಭಿಪ್ರಾಯದಂತೆ ಕನ್ನಡದ ಎಲ್ಲಾ ಸಂದರ್ಭಗಳಲ್ಲೂ ನಮ್ಮ ಭಾಷೆಯನ್ನು ಅಥವಾ ನಮಗೆ ಇಷ್ಟದ ಭಾಷೆಯನ್ನು ಬಳಸಲು ಸಾಧ್ಯವಾಗುವುದಿಲ್ಲ. ಸರ್ಕಾರಿ ಕಚೇರಿಗಳಲ್ಲಿ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಕೆಲವೊಮ್ಮೆ ತಮಿಳು ಭಾಷೆಯನ್ನು ಬಳಸುವುದರಿಂದ ತೊಂದರೆಯುಂಟಾಗುತ್ತದೆ. ಎಲ್ಲಾ ಸಂದರ್ಭಗಳಲ್ಲೂ ತಮಿಳನ್ನು ಬಳಸಲು ಸಾಧ್ಯವಾಗುವುದಿಲ್ಲ ಎಂದು ತಿಳಿಸುತ್ತಾರೆ. ಭಾಷೆ, ಜಾತಿ, ಧರ್ಮದ ಆಧಾರದ ಮೇಲೆ ತಮಿಳು

ಭಾಷಿಕರನ್ನು ತಾರತಮ್ಯವಾಗಿ ಕಾಣುತ್ತಾರೆಯೇ ಎಂಬ ಪ್ರಶ್ನೆಗೆ ಬಹುತೇಕ ಮಾಹಿತಿದಾರರು ತಾರತಮ್ಯದಿಂದ ಕಾಣುವುದಿಲ್ಲ. ಕೆಲವು ಸಂದರ್ಭಗಳಲ್ಲಿ ನಮ್ಮೊಂದಿಗೆ ಸಹಕರಿಸುತ್ತಾರೆ ಎಂದು ತಿಳಿಸುತ್ತಾರೆ. ಇನ್ನು ತಮಿಳು ಭಾಷಿಕರು ತಮ್ಮ ಭಾಷಿಕ ಗುಂಪಿನ ರಕ್ಷಣೆ ಮತ್ತು ಸಂಘಟನೆಗಾಗಿ ಭಾಷಿಕ ಮತ್ತು ಸಾಂಸ್ಕೃತಿಕ ಸಂಘಗಳನ್ನು ಸ್ಥಾಪಿಸಿಕೊಂಡಿದ್ದೀರ? ಎಂಬ ಪ್ರಶ್ನೆಗೆ ಎರಡು ಪರಿಸರದ ಜನರು ತಮ್ಮ ಭಾಷಿಕ ಸಂಘಗಳನ್ನು ರಚಿಸಿಕೊಂಡಿರುವ ಮಾಹಿತಿಯನ್ನು ನೀಡಿದರು. ಹಿರಿಯೂರು ಪರಿಸರದಲ್ಲಿ 'ಗೌಂಡರ್ ತಮಿಳ್ ಸಂಘಂ' ಎಂದು ಹೊಸಪೇಟೆ ಪರಿಸರದಲ್ಲಿ 'ತಮಿಳು ಭಾಷಿಕರ ಸಂಘ' ಎಂದು ರಚನೆ ಮಾಡಿಕೊಂಡು ಭಾಷಿಕ ಚಟುವಟಿಕೆ, ವಾರ್ಷಿಕವಾಗಿ ಸಾಂಸ್ಕೃತಿಕ ಚಟುವಟಿಕೆಗಳನ್ನು ಕೈಗೊಳ್ಳುವ ಕುರಿತು ತಿಳಿದರು. ಹೀಗೆ ಇವರುಗಳು ಕನ್ನಡದ ಪರಿಸರದಲ್ಲಿ ಇದ್ದರು ತಮ್ಮ ರಾಜಕೀಯವಾಗಿ ಸ್ಥಾನಮಾನವನ್ನು ಕಂಡುಕೊಂಡಿರುವುದು ಕಾಣಬಹುದು.

### ಧಾರ್ಮಿಕವಾಗಿ

ಕನ್ನಡದ ಪರಿಸರದಲ್ಲಿ ತಮಿಳು ಭಾಷಿಕರು ಕನ್ನಡದ ಧಾರ್ಮಿಕ ಕಾರಣಗಳಿಗಾಗಿ ಅಂದರೆ ಸಾಂಸ್ಕೃತಿಕ ಆಚರಣೆಗಳಾದ ಪೂಜೆ, ಹಬ್ಬಗಳ ಆಚರಣೆ ಮತ್ತು ಸಮುದಾಯಗಳ ಆಚರಣೆಗಳಲ್ಲಿ ಪಾಲ್ಗೊಳ್ಳುವುದನ್ನು ಮುಖ್ಯವಾಗಿರಿಸಿಕೊಂಡು ಧಾರ್ಮಿಕವಾಗಿ ಸ್ಥಾನವನ್ನು ನಿರ್ಧರಿಸುವುದಾಗಿದೆ. ಭಿನ್ನ ಭಾಷೆ ಮತ್ತು ಸಂಸ್ಕೃತಿಯವರಾದ ತಮಿಳು ಭಾಷಿಕರನ್ನು ಕನ್ನಡ ಭಾಷಿಕರು ಯಾವ ರೀತಿಯಲ್ಲಿ ಧಾರ್ಮಿಕ ಸ್ಥಾನವನ್ನು ನೀಡಿದ್ದಾರೆ ಎಂಬುದನ್ನು ತಿಳಿಯುವ ಮೂಲಕ ಕನ್ನಡದ ಪರಿಸರದಲ್ಲಿ ತಮಿಳರ ಧಾರ್ಮಿಕ ಸ್ಥಾನ ತಿಳಿಯುವುದಾಗಿದೆ.

ಕರ್ನಾಟಕದಲ್ಲಿ ಇರುವಂತೆಯೇ ತಮಿಳುನಾಡಿನಲ್ಲಿ ಶೈವ ಮತ್ತು ವೈಷ್ಣವ ಪಂಥಗಳು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿವೆ. ಪಂಥಗಳಿಗೆ ತಕ್ಕಂತೆ ತಮಿಳರ ಆಚರಣೆ ಮತ್ತು ಸಂಸ್ಕೃತಿಗಳನ್ನು ಕಾಣಬಹುದು. ಅದರಂತೆ ತಮಿಳರ ಕ್ಯಾಲೆಂಡರ್ ಸೂರ್ಯನನ್ನು ಅನುಸರಿಸಿ ರಚಿತವಾಗಿರುತ್ತದೆ. ಕನ್ನಡಿಗರ ಕ್ಯಾಲೆಂಡರ್ ಚಂದ್ರನನ್ನು ಅನುಸರಿಸಿ ರಚಿತವಾಗಿರುತ್ತದೆ. ಈ ಎರಡು ಕ್ಯಾಲೆಂಡರ್‌ಗಳಿಗೆ ಹದಿನೈದು ದಿನಗಳ ವ್ಯತ್ಯಾಸವಿದೆ. ಇದರೊಂದಿಗೆ ತಮಿಳು ಭಾಷಿಕರು ಸೂರ್ಯನನ್ನು ಮುಖ್ಯವಾಗಿರಿಸಿಕೊಂಡು ತಮ್ಮ ಆಚರಣೆಗಳನ್ನು ರಚಿಸಿಕೊಂಡಿದ್ದಾರೆ. ತಮಿಳರ ಧಾರ್ಮಿಕ ಆಚರಣೆಗಳು ಕನ್ನಡಿಗರಿಗಿಂತ ತುಂಬಾ ವ್ಯತ್ಯಾಸವೇನು ಕಂಡುಬರುವುದಿಲ್ಲ. ಆದರೆ ತಮಿಳು ಭಾಷಿಕರ ಧಾರ್ಮಿಕ ಆಚರಣೆಗೆ ಮತ್ತು ಕನ್ನಡಿಗರ ಧಾರ್ಮಿಕ ಆಚರಣೆಗೆ ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ. ತಮಿಳರು ಮುಖ್ಯವಾಗಿ 'ಪೊಂಗಲ್' ಹಬ್ಬನ್ನು ಹೆಚ್ಚು ಸಡಗರ ಮತ್ತು ಸಂಭ್ರಮದಿಂದ ಆಚರಿಸುತ್ತಾರೆ. ಆದರೆ ಕನ್ನಡಿಗರು ಇದೇ ಹಬ್ಬವನ್ನು 'ಸಂಕ್ರಾಂತಿ' ಎಂದು ಆಚರಿಸುತ್ತಾರೆ. ಇಲ್ಲಿ ತಮಿಳು ಭಾಷಿಕರು ಸೂರ್ಯನನ್ನು ಈ ಹಬ್ಬಕ್ಕೆ ಕೇಂದ್ರವಾಗಿಸಿಕೊಂಡು ಮತ್ತು ಪರಿಸರದ ಬದಲಾವಣೆಯನ್ನು ಆಚರಿಸುತ್ತಾರೆ. ಕನ್ನಡದಲ್ಲಿ ಹಬ್ಬದ ಹೆಸರು ಸಂಸ್ಕೃತದ ಮೂಲದಿಂದ ಬಂದ ಹೆಸರಾಗಿದ್ದು, ಈ ಹಬ್ಬದ ವಿವರಣೆಯನ್ನು ಸೂರ್ಯನು ತನ್ನ ಪಥವನ್ನು ಬದಲಿಸುತ್ತಾನೆ ಆದ್ದರಿಂದ ಈ ಹಬ್ಬ ಆಚರಣೆ ಮಾಡುತ್ತೇವೆ ಎಂದು ವಿವರಣೆ ನೀಡುತ್ತಾರೆ. ಹೀಗೆ ಕೆಲವು ವ್ಯತ್ಯಾಸಗಳಿವೆ.

ಹೀಗೆ ಭಿನ್ನವಾಗಿರುವ ಕೆಲವು ಸಂದರ್ಭಗಳಲ್ಲಿ ಕನ್ನಡಿಗರು ಮತ್ತು ತಮಿಳು ಭಾಷಿಕರು ಹೇಗೆ ಹೊಂದಿಕೊಂಡು ಪರಸ್ಪರ ಗೌರವಿಸುವುದನ್ನು ಕಂಡುಕೊಳ್ಳುವುದಾಗಿದೆ.

ತಮಿಳರು ಸಾಮಾನ್ಯವಾಗಿ ಮುರುಗ, ಗಣೇಶ, ಭಗವತಿ, ಕಾಳಿದೇವರನ್ನು ಪೂಜಿಸುವುದು ಹೆಚ್ಚು. ಅದೇ ರೀತಿಯಲ್ಲಿ ಹಿರಿಯೂರು ಪ್ರದೇಶದಲ್ಲಿ ಕನ್ನಡಿಗರು ತೇರು ಮಲ್ಲೇಶ್ವರ, ರಂಗನಾಥ, ಮೈಲಾರ ದೇವರುಗಳ ಪೂಜಿಸುತ್ತಾರೆ. ಹೊಸಪೇಟೆ ಪರಿಸರದಲ್ಲಿ ವಿರೂಪಾಕ್ಷ, ಜಂಬುನಾಥ, ವಡಕರಾಯ, ಮಲ್ಲಿಕಾರ್ಜುನ, ಹುಲಿಗೆಮ್ಮ ಇತರೆ ದೇವರುಗಳ ಪೂಜೆ ಮಾಡುತ್ತಾರೆ. ಹೀಗೆ ಎರಡು ಭಾಷಿಕರು ಪೂಜಿಸುವ ದೇವರುಗಳ ವ್ಯತ್ಯಾಸವನ್ನು ಕಂಡುಬರುತ್ತದೆ. ಈ ರೀತಿಯ ಬೇರೆ ಬೇರೆ ಹಬ್ಬಗಳ ಆಚರಣೆಯ ಸಮುಯದಲ್ಲಿ ಎರಡು ಭಾಷಿಕರು ಪರಸ್ಪರ ಆಹ್ವಾನಿಸಿ ಪಾಲ್ಗೊಳ್ಳುವುದನ್ನು ಕಾಣಬಹುದು.

| ಕ್ರಸಂ | | ಹೌದು/ಇಲ್ಲ |
|---|---|---|
| ೦೧ | ನಿಮ್ಮ ಹಬ್ಬಗಳಿಗೆ ಕನ್ನಡಿಗ ಆಹ್ವಾನಿಸುತ್ತೀರ?<br>ಮತ್ತು ಪಾಲ್ಗೊಳ್ಳುತ್ತಾರೆಯೇ? | ಹೌದು |
| ೦೨ | ಕನ್ನಡಿಗರ ಮನೆಯಲ್ಲಿ ನಡೆಯು ಆಚರಣೆಗಳಲ್ಲಿ/<br>ಸಂಪ್ರದಾಯಗಳಿಗೆ ಆಹ್ವಾನ ನೀಡುತ್ತಾರೆಯೇ? | ಹೌದು |
| ೦೩ | ನೀವು ಕನ್ನಡಿಗರ ಹಬ್ಬಗಳಲ್ಲಿ ಪಾಲ್ಗೊಳ್ಳುತ್ತೀರ? | ಹೌದು |

ಈ ಮೇಲಿನ ಕೋಷ್ಟಕವು ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳರು ಮತ್ತು ಕನ್ನಡಿಗರ ಧಾರ್ಮಿಕ ಮತ್ತು ಸಂಪ್ರದಾಯಗಳ ಆಚರಣೆಯಲ್ಲಿ ಪರಸ್ಪರ ಪಾಲ್ಗೊಳ್ಳುವಿಕೆಯ ಕುರಿತು ತಿಳಿಸುತ್ತದೆ. ಕನ್ನಡ ಪರಿಸರದಲ್ಲಿ ಭಿನ್ನಭಾಷಿಕರಾಗಿರುವ ಕಾರಣಕ್ಕೆ ಹಬ್ಬಗಳ ಆಚರಣೆಯ ಸಂದರ್ಭದಲ್ಲಿ ಪರಿಚಿತ ಕನ್ನಡಿಗರಿಗೆ ಆಹ್ವಾನ ನೀಡುತ್ತಾರೆ. ಅಲ್ಲದೇ ಆತ್ಮೀಯರು ಅಥವಾ ಸ್ನೇಹಿತರ ಮನೆಗೆ ಕನ್ನಡಿಗರು ಹೋಗಿ ಬರುತ್ತಾರೆ. ವಿಶೇಷವಾಗಿ ತಮಿಳರು ಆಚರಿಸುವ ಪೊಂಗಲ್ ಹಬ್ಬಕ್ಕೆ ಕನ್ನಡಿಗರು ಪಾಲ್ಗೊಳ್ಳುತ್ತಾರೆ. ಹಾಗೆಯೇ ಕನ್ನಡಿಗರ ಹಬ್ಬಗಳಲ್ಲಿ ತಮಿಳು ಭಾಷಿಕರು ಪಾಲ್ಗೊಂಡು ಆಚರಿಸುವ ಸಂದರ್ಭಗಳಿವೆ. ಕನ್ನಡಿಗರು ಆಚರಿಸುವ ಯುಗಾದಿ, ದೀಪಾವಳಿ ಹಬ್ಬಗಳಲ್ಲಿ ಪಾಲ್ಗೊಂಡು ತಮಿಳು ಭಾಷಿಕರು ಆಚರಿಸುತ್ತಾರೆ.

ಕನ್ನಡ ಮತ್ತು ತಮಿಳು ಭಾಷಿಕರ ಪರಿಸರದಲ್ಲಿ ಪರಸ್ಪರ ಆಹ್ವಾನ ಮತ್ತು ಪಾಲ್ಗೊಳ್ಳುವಿಕೆ ಕಾಣಬಹುದು. ಆದರೆ ಈ ರೀತಿಯ ಆಹ್ವಾನ ಮತ್ತು ಪಾಲ್ಗೊಳ್ಳುವಿಕೆಯು ಕೇವಲ ಮೇಲ್ವರ್ಗದ ಜಾತಿಗಳಾದ ಗೌಂಡರ್ ಮೊದಲಿಯಾರ್ ಮತ್ತು ಚೆಟ್ಟಿಯಾರ್‌ಗಳಲ್ಲಿ ಮಾತ್ರ ಕಾಣುತ್ತೇವೆ. ಇನ್ನುಳಿದಂತೆ ಕೆಳವರ್ಗದ ಜಾತಿಗಳಾದ ಆದಿದ್ರಾವಿಡ, ಚಕ್ಕಲಿಯಾರ್, ವಡ್ಡಾರ್, ಸೆಂಬಡವಾರ್ ಇತರೆ ಜಾತಿಗಳಲ್ಲಿ ಈ ರೀತಿಯ ಧಾರ್ಮಿಕ ಆಚರಣೆಗಳಲ್ಲಿ ಪಾಲ್ಗೊಳ್ಳುವುದು ಮತ್ತು ಆಹ್ವಾನ ನೀಡುವುದು ಮತ್ತು ಪಾಲ್ಗೊಳ್ಳುವುದು ಕಡಿಮೆ. ಇವರುಗಳಿಗೆ ಇನ್ನು ಕನ್ನಡದ ಪರಿಸರದಲ್ಲಿ ಜಾತಿಯ ಕಾರಣಕ್ಕೆ ಪೂರ್ಣ ಪ್ರಾಣದಲ್ಲಿ ಭಾಗವಹಿಸುವ ಮತ್ತು ಅವರನ್ನು ಧಾರ್ಮಿಕವಾಗಿ ಸಮಾನವಾಗಿ ಕಾಣುವುದು ಕಂಡುಬರುವುದಿಲ್ಲ.

ಒಟ್ಟಾರೆಯಾಗಿ ತಮಿಳು ಭಾಷಿಕರು ಕನ್ನಡದ ಪರಿಸರದಲ್ಲಿ ರಾಜಕೀಯವಾಗಿ, ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ ಹೇಗೆ ಪಾಲ್ಗೊಳ್ಳುತ್ತಾರೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ರಾಜಕೀಯವಾಗಿ ತಮಿಳು ಭಾಷಿಕರು ಯಾವುದೇ ಬಾಹ್ಯ ಒತ್ತಡಗಳಿಲ್ಲದೇ ನೇರವಾಗಿ ರಾಜಕೀಯ ಸ್ಥಾನಮಾನವನ್ನು ಪಡೆದಿದ್ದಾರೆ. ಅದರಂತೆ ಸಾಮಾಜಿಕವಾಗಿ ಕನ್ನಡದ ವಿವಿಧ ಪರಿಸರದಲ್ಲಿ ಪಾಲ್ಗೊಂಡು ಕನ್ನಡಿಗರಂತೆ ಸಮಾನತೆಯಿಂದ ಇದ್ದಾರೆ. ಆದರೆ ಸಾಮಾಜಿಕವಾಗಿ ಜಾತಿಯ ಕಾರಣಕ್ಕೆ ಕೆಲವು ಸಮುದಾಯಗಳನ್ನು ಇಂದಿಗೂ ಕೀಳಾಗಿ ಕಾಣುವ, ಮೊದಲಿನಂತೆ ಕೆಲವು ಸಂಪ್ರದಾಯಗಳನ್ನು ಪಾಲನೆ ಮಾಡುವುದು ಕಾಣಬಹುದು. ಇದು ಎರಡು ಪರಿಸರದಲ್ಲೂ ಸಾಮಾನ್ಯವಾಗಿದೆ.

### ೪.೩. ತಮಿಳು ಭಾಷಾದ್ವೀಪಗಳಲ್ಲಿ ಭಾಷಾಸಂಗೋಪನೆ: ಲಿಂಗ ಮತ್ತು ವರ್ಗ

ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ನೆಲೆಸಿರುವ ತಮಿಳು ಭಾಷಿಕರು ಸುಮಾರು ೬೦–೭೦ ವರ್ಷಗಳಿಂದ ಇಲ್ಲೇ ನೆಲೆಯನ್ನು ಕಂಡುಕೊಂಡಿದ್ದಾರೆ. ಇವರುಗಳು ತಮ್ಮ ಮನೆಯ ಆವರಣದಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಹೀಗೆ ಎರಡು ಮೂರು ತಲೆಮಾರುಗಳಿಂದ ತಮಿಳು ಭಾಷೆಯನ್ನು ಸಂಗೋಪನೆ ಮಾಡಿಕೊಂಡು ಬಂದಿದ್ದಾರೆ. ಈ ರೀತಿಯಾಗಿ ತಮಿಳು ಭಾಷಾಸಂಗೋಪನೆಯಲ್ಲಿ ಸಾಮಾಜಿಕ ಭಿನ್ನಾಂಶಗಳಾದ ಲಿಂಗ ಮತ್ತು ವರ್ಗಗಳು ಹೇಗೆ ತಮ್ಮ ಪಾತ್ರವನ್ನು ನಿರ್ವಹಿಸಿವೆ ಎಂಬುದನ್ನು ಕಂಡುಕೊಳ್ಳುವುದು ಮುಖ್ಯವಾಗಿದೆ. ಅಂದರೆ ಪ್ರತಿ ಭಾಷೆಯು ತನ್ನ ಬಳಕೆಯ ಸಮುದಾಯದೊಂದಿಗೆ ಉಳಿದುಕೊಂಡಿದೆ ಎಂದರೆ ಅದಕ್ಕೆ ಅನೇಕ ಕಾರಣಗಳಿರುತ್ತವೆ. ಅವುಗಳಲ್ಲಿ ಮುಖ್ಯವಾಗಿ ಆ ಭಾಷಿಕರಿಗೆ ಭಾಷೆಯ ಮೇಲೆ ಅಪಾರವಾದ ಕಾಳಜಿ ಇರುವುದು. ಮತ್ತೊಂದು ಭಾಷಾ ಬಳಕೆಯ ಪರಿಸರವಾಗಲಿ ಅಥವಾ ಬೇರೊಂದು ಭಾಷಾ ಬಳಕೆ ಮಾಡುವಂತೆ ಒತ್ತಡವಾಗಲಿ ಇರುವುದಿಲ್ಲ. ಹಾಗೆಯೇ ಭಾಷಿಕರು ವಾಸಿಸುವ ಪ್ರಾಕೃತಿಕ ಪರಿಸರವು ಆ ಭಾಷೆಯು ಉಳಿಯುವಂತೆ ಮಾಡಿರುತ್ತದೆ. ಹೀಗೆ ಅನೇಕ ಕಾರಣಗಳಿಗೆ ಭಾಷೆಗಳು ತನ್ನ ಸಮುದಾಯಗಳೊಂದಿಗೆ ಉಳಿದುಕೊಂಡು, ತಲೆಮಾರುಗಳು ಕಳೆದರು ಭಾಷಾ ಬಳಕೆ ಮಾಡುತ್ತಿರುವುದನ್ನು ಕಾಣಬಹುದು. ಆದರೆ ಆಧುನಿಕತೆಯ ಪರಿಣಾಮದಿಂದ ಈ ರೀತಿಯಾಗಿ ಭಾಷೆಯನ್ನು ತಲೆಮಾರಿನಿಂದ ತಲೆಮಾರಿಗೆ ಸಂಗೋಪನೆ ಮಾಡಿಕೊಂಡು ಬರುವ ಪ್ರಮಾಣವು ಕಡಿಮೆಯಾಗುತ್ತಿದೆ. ಅಂದರೆ ಜಾಗತಿಕ ಮತ್ತು ಅರ್ಥಿಕತೆಯ ಪರಿಣಾಮದಿಂದಾಗಿ ಹಲವು ಭಾಷೆಗಳು ಏಕ ಭಾಷೆಯಾಗಿ ಮಾರ್ಪಾಡು ಹೊಂದುತ್ತಿವೆ. ಇಲ್ಲಿ ಆರ್ಥಿಕ ಮತ್ತು ಸಾಮಾಜಿಕ ಒತ್ತಡಕ್ಕೆ ಮಣಿದು ತಮ್ಮ ಸಾಮಾಜಿಕ ಮತ್ತು ಆರ್ಥಿಕತೆಯ ಕಾಣಕ್ಕೆ ಬೇರೊಂದು ಪ್ರಭಾವಿ ಭಾಷೆಯನ್ನು ಬಳಸುತ್ತಿದ್ದಾರೆ. ಹಾಗೆಯೇ ವಲಸೆ ಮತ್ತು ಔದ್ಯೋಗಿಕ ಕಾರಣದಿಂದಾಗಿ ಬೇರೆ ಬೇರೆ ಭಾಷೆಗಳ ಗುಂಪುಗಳು ಒಂದೆಡೆ ವಾಸಮಾಡುವ ಸಂದರ್ಭಗಳು ಹೆಚ್ಚುತ್ತಿವೆ. ಇಂತಹ ಸಂದರ್ಭಗಳಲ್ಲಿ ವಲಸಿಗ ಭಾಷಿಕರು ತಲೆಮಾರುಗಳು ಕಳೆದಂತೆ ತಮ್ಮ ಮೂಲ ಭಾಷೆಯನ್ನು ಕಳೆದುಕೊಂಡು ಪರಿಸರದ ಭಾಷೆಗೆ ಬದಲಾಗುವುದನ್ನು ಕಾಣುತ್ತೇವೆ. ಈ ಮೇಲಿನ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು ತಮಿಳು ಭಾಷಿಕರ ಭಾಷಿಕ ಬೆಳವಣಿಗೆಳನ್ನು ಗಮನಿಸಿದಾಗ ಹಿರಿಯೂರು ಪರಿಸರದಲ್ಲಿನ ತಮಿಳು ಭಾಷಿಕರು

ನಿರ್ದಿಷ್ಟಪಡಿಸಿದ ಆವರಣದಲ್ಲಿ ತಮ್ಮ ಭಾಷೆಯನ್ನು ಬಳಸಿಕೊಂಡು ಸಂಗೋಪನೆ ಮಾಡುತ್ತಿದ್ದಾರೆ. ಈ ರೀತಿಯ ಸಂಗೋಪನೆಯು ಯಾವ ಕಾರಣದಿಂದ? ಯಾವ ಸಾಮಾಜಿಕ ಭಿನ್ನಾಂಶಗಳಿಂದಾಗಿ ತಮಿಳು ಭಾಷೆ ತಲೆಮಾರಿನಿಂದ ತಲೆಮಾರಿಗೆ ಸಾಗುತ್ತಿದೆ ಎಂಬುದನ್ನು ತಿಳಿಯಬೇಕಿದೆ.

ಭಾಷಾಸಂಗೋಪನೆ ಎಂದರೆ: "Language maintenance denotes the continuing use of a language in the face of competition from a regionally and socially more powerful language"(https://www.futurelearn.com/courses/multilingual-practices/0/steps/22665) ಭಾಷಾಸಂಗೋಪನೆಯು ಭಾಷೆಯೊಂದು ತಲೆಮಾರುಗಳಿಂದ ತಲೆಮಾರಿಗೆ ಉಳಿಸಿಕೊಂಡು ಬಳಕೆ ಮಾಡುವ ಭಾಷಾ ಸ್ಥಿತಿಗೆ ಹೇಳಲಾಗುತ್ತದೆ. ಅಂದರೆ ಇಲ್ಲಿ ಕಾಲನಂತರದಲ್ಲಿಯೂ ಭಾಷೆಯು ಭಾಷಾ ಬಳಕೆದಾರರಲ್ಲಿ ಹಾಗೆಯೇ ಇರುತ್ತದೆ. ಹೀಗೆ ತಮಿಳು ಭಾಷಾದ್ವೀಪಗಳಲ್ಲಿ ಸುಮಾರು ಮೂರು ತಲೆಮಾರುಗಳು ಕಳೆದರು ತಮಿಳು ಭಾಷೆಯನ್ನು ಬಳಸಿಕೊಂಡು ಸಂಗೋಪನೆ ಮಾಡಿಕೊಂಡು ಬಂದಿದ್ದಾರೆ. ಇವರುಗಳಲ್ಲಿ ಭಾಷಾಸಂಗೋಪನೆ ಮಾಡಿಕೊಂಡು ಬರಲು ಇವರು ಲಿಂಗ ಮತ್ತು ವರ್ಗಗಳಾಧಾರಿತ ಅವಕಾಶಗಳನ್ನು ತಿಳಿಯುವುದಾಗಿದೆ.

**ಲಿಂಗ ಮತ್ತು ಭಾಷಾಸಂಗೋಪನೆ:**

ತಮಿಳು ಭಾಷಾದ್ವೀಪಗಳಲ್ಲಿ ತಮಿಳು ಭಾಷೆಯು ಮನೆ ಭಾಷೆಯಾಗಿ ಮತ್ತು ವ್ಯಾವಹಾರಿಕ ಭಾಷೆಯಾಗಿಯೂ ಬಳಕೆಯಲ್ಲಿದೆ. ಇದರೊಂದಿಗೆ ಕೆಲವು ಕನ್ನಡಿಗರ ಪರಿಸರದಲ್ಲಿ ತಮಿಳು ಬಳಕೆ ಮಾಡುತ್ತಾರೆ. ಈ ರೀತಿಯಾಗಿ ಬಳಕೆ ಮಾಡುವ ತಮಿಳು ಭಾಷೆಯು ತಮಿಳು ಭಾಷಿಕರು ಹೇಗೆ ತಲೆಮಾರಿನಿಂದ ತಲೆಮಾರಿಗೆ ಉಳಿಸಿಕೊಂಡಿರುತ್ತಾರೆ ಎಂಬುದುನ್ನು ಸಾಮಾಜಿಕ ಭಿನ್ನಾಂಶವಾದ 'ಲಿಂಗ' ಆಧಾರದ ಮೇಲೆ ತಿಳಿಯುವುದಾಗಿದೆ. ಅಂದರೆ ಇಲ್ಲಿ 'ಲಿಂಗ' ಎಂಬುದನ್ನು ಸಾಮಾಜಿಕಾಂಶಗಳಲ್ಲಿ ಗ್ರಹಿಸುವಂತೆ ಸ್ತ್ರೀ ಮತ್ತು ಪುರುಷ ಎಂಬ ಎರಡು ಅರ್ಥದಲ್ಲಿ ಸೇರಿಸಿ ಬಳಸಲಾಗಿದೆ. ಅಂದರೆ ತಮಿಳು ಭಾಷಾಸಂಗೋಪನೆಯಲ್ಲಿ ಪುರುಷರು ಹೆಚ್ಚು ಪಾತ್ರವಹಿಸುತ್ತಾರೋ? ಅಥವಾ ಸ್ತ್ರೀಯರು ಹೆಚ್ಚು ಪಾತ್ರವಹಿಸುತ್ತಾರೋ ಎಂಬುದನ್ನು ಇಲ್ಲಿ ಕಂಡುಕೊಳ್ಳುವುದಾಗಿದೆ.

ಪರಿಸರದ ಭಾಷಾ ಬಳಕೆಯಲ್ಲಿ ಸ್ತ್ರೀ ಮತ್ತು ಪುರುಷರು ಸಮಾನರೆ. ಆದರೆ ಭಾಷೆಯನ್ನು ದ್ವೀಪಗಳಲ್ಲಿ ಬಳಕೆಯಲ್ಲಿರುವ ಭಾಷೆಯನ್ನು ಸಂಗೋಪನೆ ಮಾಡುವಲ್ಲಿ ಸ್ತ್ರೀ ಮತ್ತು ಪುರುಷರಲ್ಲಿ ಯಾರ ಪಾತ್ರ ಹೆಚ್ಚಿನದು ಎಂಬುದನ್ನು ತಿಳಿಯಲು ತಮಿಳು ಭಾಷಾದ್ವೀಪದಲ್ಲಿ ಆಯ್ದ ಮಾಹಿತಿದಾರರಿಂದ ಮಾಹಿತಿಯನ್ನು ಸಂಗ್ರಹಿಸಿ ಈ ಕೆಳಗಿನಂತೆ ವಿಂಗಡಿಸಿ ವಿವರಿಸಿದೆ.

ಕೋಷ್ಟಕದಲ್ಲಿರುವ ಮಾಹಿತಿಯಂತೆ ಹಿರಿಯೂರು ಮತ್ತು ಹೊಸಪೇಟೆ ಪರಿಸರದ ವಿವಿಧ ಜಾತಿ ಸಮುದಾಯಗಳಿಗೆ ಸಂಬಂಧಿಸಿದಂತೆ ಪುರುಷ ಮಾಹಿತಿದಾರರಿಂದ ತಮಿಳು ಭಾಷಾಬಳಕೆಯ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಕೋಷ್ಟಕದಲ್ಲಿರುವ ೧೫ ಜನ ಪುರುಷರು ತಮ್ಮ ವಿವಿಧ ಸಂದರ್ಭಗಳಲ್ಲಿ ಭಾಷಾಬಳಕೆಯ

## ಪುರುಷರು ತಮಿಳು ಭಾಷಾ ಬಳಕೆಯ ಸಂದರ್ಭಗಳು

| ಸಾಮಾಜಿಕ ಭಿನ್ನಾಂಶಗಳು | | | | ಭಾಷಾ ಬಳಕೆಯ ಆವರಣಗಳು | | | | | | | | | | | ಭಾಷಾ ಕೌಶಲ್ಯಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|
| ಹೆಸರು | ವಯಸ್ಸು | ಕಸುಬು | ಶಿಕ್ಷಣ | 1 | 2 | 3 | 4 | 5 | 6 | 7 | 8 | 9 | 10 | 11 | ಮಾತು | | ಗ್ರಹಿಕೆ | | ಓದು | | ಬರಹ | |
| | | | | | | | | | | | | | | | ತ | ಕ | ತ | ಕ | ತ | ಕ | ತ | ಕ |
| ಕಾಳಿಯಪ್ಪ | 60 | ಕೃಷಿ | – | ತ | ತ | ತ | ತ | ಕ | ಕ | ಕ | ತ | ಕ | ತ | ತ | ✓ | ✓ | ✓ | ✓ | – | – | – | – |
| ಮುರುಗನ್ | 50 | ತೋಟ | – | ತ | ತ | ತ | ತ | ಕ | ಕ | ಕ | ಕ | ತ | ಕ | ತ/ಕ | ✓ | ✓ | ✓ | ✓ | – | – | – | – |
| ನಟರಾಜನ್ | 50 | ಕೃಷಿ | 7ನೇ | ತ | ತ | ತ | ತ | ಕ | ಕ | ಕ | ಕ | ತ | ಕ | ತ | ✓ | ✓ | ✓ | ✓ | ✓ | ✓ | ✓ | ✓ |
| ಮಂಜುನಾಥ | 43 | ಕೂಲಿ | 10ನೇ | ತ | ತ | ತ | ತ | ಕ | ಕ | ಕ | ಕ | ತ | ಕ | ತ/ಕ | ✓ | ✓ | ✓ | ✓ | – | ✓ | – | ✓ |
| ಈಶ್ವರ | 41 | ಕೂಲಿ | – | ತ | ತ | ತ | ತ | ಕ | ಕ | ತ | ಕ | ತ | ಕ | ತ | ✓ | ✓ | ✓ | ✓ | – | – | – | – |
| ಪಳನಿಸ್ವಾಮಿ | 40 | ಖಾಸಗಿ | 12ನೇ | ತ | ತ | ತ | ತ | ಕ | ಕ | ಕ | ಕ | ಕ | ಕ | ತ/ಕ | ✓ | ✓ | ✓ | ✓ | ✓ | ✓ | ✓ | ✓ |
| ಮಣಿಕಂಠ | 42 | ವ್ಯಾಪಾರ | 10ನೇ | ತ | ತ | ತ | ತ | ಕ | ಕ | ಕ | ಕ | ತ | ಕ | ತ/ಕ | ✓ | ✓ | ✓ | ✓ | – | ✓ | – | ✓ |
| ರಾಮಸ್ವಾಮಿ | 41 | ಕೂಲಿ | 6ನೇ | ತ | ತ | ತ | ತ | ಕ | ಕ | ಕ | ಕ | ತ | ಕ/ತ | ತ/ಕ | ✓ | ✓ | ✓ | ✓ | – | ✓ | – | ✓ |
| ಮುತ್ತು | 38 | ಕೂಲಿ | 12ನೇ | ತ | ತ | ತ | ತ | ಕ | ಕ | ಕ | ಕ | ತ | ಕ | ತ | ✓ | ✓ | ✓ | ✓ | ✓ | ✓ | ✓ | ✓ |
| ಮನೋಜ್ | 25 | ಕೂಲಿ | 10ನೇ | ತ | ತ | ತ | ತ | ಕ | ಕ | ಕ | ಕ | ಕ | ತ | ತ | ✓ | ✓ | ✓ | ✓ | – | ✓ | – | ✓ |
| ವಿಶಾಲ | 26 | ಸ.ನೌಕರ | ಪದವಿ | ತ | ತ | ತ | ತ | ಕ | ಕ | ಕ | ಕ | ಕ | ಕ | ತ/ಕ | ✓ | ✓ | ✓ | ✓ | ✓ | ✓ | ✓ | ✓ |
| ಸಚಿನ್ | 24 | ಕೂಲಿ | – | ತ | ತ | ತ | ತ | ತ | – | ತ | ತ | ತ | ಕ | ತ | ✓ | ✓ | ✓ | ✓ | – | – | – | – |
| ರಾನುಜನ್ | 25 | ಡ್ರೈವರ್ | 10ನೇ | ತ | ತ | ತ | ತ | ತ/ಕ | ಕ | ಕ | ಕ | ಕ | ಕ | ತ/ಕ | ✓ | ✓ | ✓ | ✓ | ✓ | ✓ | ✓ | ✓ |
| ರಾಮಚಂದ್ರನ್ | 25 | ದಲ್ಲಾಳಿ | – | ತ | ತ | ತ | ತ | ಕ | ಕ | ಕ | ಕ | ಕ | ಕ | ತ/ಕ | ✓ | ✓ | ✓ | ✓ | – | – | – | – |
| ಶಿವು | 26 | ವ್ಯಾಪಾರಿ | 12ನೇ | ತ | ತ | ತ | ತ | ಕ | ಕ | ಕ | ಕ | ಕ | ಕ | ತ/ಕ | ✓ | ✓ | ✓ | ✓ | – | ✓ | – | ✓ |

೧. ಹಿರಿಯರೊಂದಿಗೆ ೨. ಮಕ್ಕಳೊಂದಿಗೆ ೩. ನೆರೆಯವರೊಂದಿಗೆ ೪. ಸಂಬಂಧಿಕರೊಂದಿಗೆ ೫. ಗೆಳೆಯರೊಂದಿಗೆ ೬. ಶಾಲೆಗಳಲ್ಲಿ ೭. ಕೆಲಸದ ಸ್ಥಳದಲ್ಲಿ ೮. ಮಾರುಕಟ್ಟೆಗಳಲ್ಲಿ ೯. ಪ್ರಾರ್ಥನೆ ೧೦. ಅಪರಿಚಿತರೊಡನೆ ೧೧. ಟಿ.ವಿ ನೋಡುವಾಗ

ಕುರಿತು ಮಾಹಿತಿ ನೀಡಿದ್ದಾರೆ. ಇದರಲ್ಲಿ ಭಾಷಾ ಬಳಕೆಯ ಆವರಣಗಳ ೧ ರಿಂದ ೪ರ ವರೆಗೆ ತಮಿಳು ಭಾಷೆಯನ್ನು ಹೆಚ್ಚು ಬಳಸುತ್ತಾರೆ. ಇನ್ನುಳಿದ ಆವರಣಗಳಲ್ಲಿ ತಮಿಳು ಮತ್ತು ಕನ್ನಡವನ್ನು ಬಳಕೆ ಮಾಡುತ್ತೇವೆ ಎಂದು ಹೇಳುತ್ತಾರೆ. ಇನ್ನು ಟಿ.ಟಿ.ಯ ಚಾಲನ್‌ಗಳಲ್ಲಿ ಹೆಚ್ಚು ತಮಿಳು ಭಾಷೆಯವನ್ನು ನೋಡುತ್ತೇವೆ ಎಂದು ತಿಳಿಸುತ್ತಾರೆ. ಇನ್ನು ಉಳಿದಂತೆ ಮೊದಲ ಮೂರು ಜನರು ಎರಡು ಮೂರು ತಲೆಮಾರಿನವರು ಅವರುಗಳು ಕನ್ನಡವನ್ನು ಓದಲು ಮತ್ತು ಬರೆಯಲು ಬರುವುದಿಲ್ಲ ಎಂದು ತಿಳಿಸುತ್ತಾರೆ. ಹೀಗೆ ಉಳಿದಂತೆ ಕನ್ನಡದ ಆವರಣಗಳಾದ ೫ ರಿಂದ ೧೦ರವರೆಗಿನ ಆವರಣಗಳಲ್ಲಿ ಕನ್ನಡವನ್ನು ಬಳಕೆ ಮಾಡುತ್ತೇವೆ ಎಂದು ತಿಳಿಸುತ್ತಾರೆ. ಇವರಲ್ಲಿ ಕೆಲವು ಮಾತ್ರ ತಮಿಳು ನಾಲ್ಕು ಕೌಶಲ್ಯಗಳನ್ನು ಹೊಂದಿರುವವರಾಗಿದ್ದಾರೆ. ಇವರಲ್ಲಿ ಇಲ್ಲಿ ಪುರುಷರಿಗೆ ಹೆಚ್ಚು ಕನ್ನಡದ ಪರಿಸರವು ಬಳಕೆಯಲ್ಲಿರುವ ಕಾರಣ ಇವರುಗಳು ಕನ್ನಡವನ್ನು ಬಾಹ್ಯ ಪರಿಸರದಲ್ಲಿ ಬಳಕೆ ಮಾಡುವುದು ಕಾಣಬಹುದು. ಮಾಹಿತಿದಾರರು ಹೇಳುವಂತೆ ಕೆಲವು ಸಂದರ್ಭಗಳಲ್ಲಿ ಮಕ್ಕಳೊಂದಿಗೆ ಕನ್ನಡದಲ್ಲಿಯೂ ಮಾತನಾಡುತ್ತೇವೆ ಎನ್ನುತ್ತಾರೆ. ಇನ್ನುಳಿದಂತೆ ಕೆಲವು ಸಂದರ್ಭಗಳಲ್ಲಿ ಸಂಬಂಧಿಕರೊಂದಿಗೆ ಕನ್ನಡಿಗರು ಇದ್ದಾಗ ಕನ್ನಡವನ್ನು ಮಾತನಾಡುತ್ತೇವೆ. ಇಲ್ಲದಿದ್ದರೆ ತಮಿಳು ಭಾಷೆಯನ್ನು ಬಳಕೆ ಮಾಡುತ್ತೇವೆ ಎಂದು ತಿಳಿಸುತ್ತಾರೆ.

ಕೋಷ್ಟಕದಲ್ಲಿರುವ ಮಾಹಿತಿಯಂತೆ ಹಿರಿಯೂರು ಮತ್ತು ಹೊಸಪೇಟೆ ಪರಿಸರದ ವಿವಿಧ ಜಾತಿ ಸಮುದಾಯಗಳಿಗೆ ಸಂಬಂಧಿಸಿದಂತೆ ಸ್ತ್ರೀ ಮಾಹಿತಿದಾರರಿಂದ ತಮಿಳು ಭಾಷಾಬಳಕೆಯ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಇಲ್ಲಿ ವಿವಿಧ ಜಾತಿಯ, ವಿವಿಧ ವಯೋಮಾನದ ಸ್ತ್ರೀಯರಿಂದ ಮಾಹಿತಿಯನ್ನು ಸಂಗ್ರಹಿಸಿದೆ. ಒಟ್ಟು ೧೫ ಜನ ಮಾಹಿತಿದಾರರು ತಮಿಳು ಭಾಷೆ ಬಳಕೆಯ ಸಂದರ್ಭವನ್ನು ಕುರಿತು ಮಾಹಿತಿ ನೀಡಿದ್ದಾರೆ. ಮೊದಲ ಮೂರು ಮಾಹಿತಿದಾರರು ವಯೋವೃದ್ಧರಾಗಿದ್ದು, ಕರ್ನಾಟಕದಲ್ಲಿ ವಾಸಿಸುತ್ತಿರುವ ತಮಿಳು ಭಾಷಿಕರ ಎರಡನೇ ತಲೆಮಾರಿನವರು ಇವರು ತಮ್ಮ ಮನೆ ಮತ್ತು ಬಾಹ್ಯ ಅವರಣದಲ್ಲಿ ತಮಿಳನ್ನು ಪೂರ್ಣ ಪ್ರಮಾಣದಲ್ಲಿ ಬಳಕೆ ಮಾಡುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಇನ್ನುಳಿದ ಮಾಹಿತಿದಾರರು ಹಿರಿಯರೊಂದಿಗೆ, ಮಕ್ಕಳೊಂದಿಗೆ, ನೆರೆಹೊರೆಯವರೊಂದಿಗೆ, ಸಂಬಂಧಿಕರೊಂದಿಗೆ, ಗೆಳೆಯರೊಂದಿಗೆ ಕೆಲಸದ ಸ್ಥಳದಲ್ಲಿ, ಟಿ.ವಿ. ನೋಡುವಾಗ ತಮಿಳು ಭಾಷೆಯನ್ನು ಬಳಕೆ ಮಾಡುತ್ತೇವೆ ಎಂದು ತಿಳಿಸುತ್ತಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ತಮಿಳು ಭಾಷೆಯ ಸ್ತ್ರೀಯರು ತಮಿಳು ಭಾಷೆಯನ್ನು ಬಹುತೇಕ ಆವರಣದಲ್ಲಿ ಬಳಕೆ ಮಾಡುತ್ತಾರೆ. ವಿಶೇಷವಾಗಿ ತಮ್ಮ ಮಕ್ಕಳೊಂದಿಗೆ ಪೂರ್ಣ ಪ್ರಮಾಣದ ತಮಿಳನ್ನು ಮಾತನಾಡುತ್ತಾರೆ. ಭಾಷಾದ್ವೀಪಗಳಲ್ಲಿ ತಮಿಳು ಮುಖ್ಯ ಭಾಷೆಯಾಗಿರುತ್ತದೆ. ಇಲ್ಲಿ ವಾಸಿಸುವ ಸ್ತ್ರೀಯರು ಗೆಳೆಯರೊಂದಿಗೆ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಅದೇ ರೀತಿಯಲ್ಲಿ ಕೆಲಸದ ಸ್ಥಳಗಳಲ್ಲಿ ಎಂದರೆ ಹಿರಿಯೂರು ಪರಿಸರದಲ್ಲಿ ತಮಿಳು ಭಾಷಿಕರು ಸಾಮಾನ್ಯವಾಗಿ ಗುಂಪು ಗುಂಪುಗಳಾಗಿ ಕೆಲಸಕ್ಕೆ ಹೋಗುವುದರಿಂದ ಕೆಲಸಕ್ಕೆ ಹೋದ ಸ್ಥಳದಲ್ಲಿ ಅವರೊಂದಿಗೆ ತಮಿಳನ್ನು ಮಾತನಾಡುತ್ತಾರೆ. ಇನ್ನು ಮಾರುಕಟ್ಟೆ ಪ್ರದೇಶಗಳಲ್ಲಿಯೂ ತಮಿಳರ ಪ್ರಭಾವ ಇರುವುದರಿಂದ ಇವರುಗಳಿಗೆ ತಮಿಳು ಭಾಷೆಯ ಬಳಕೆ ಸಹಾಯವಾಗುತ್ತದೆ. ಅಲ್ಲದೆ ಇಲ್ಲಿನ

## ಸ್ತ್ರೀಯರ ತಮಿಳು ಭಾಷಾ ಬಳಕೆಯ ಸಂದರ್ಭಗಳು

| ಸಾಮಾಜಿಕ ಭಿನ್ನಾಂಶಗಳು | | | | ಭಾಷಾ ಬಳಕೆಯ ಆವರಣಗಳು | | | | | | | | | | | ಭಾಷಾ ಕೌಶಲ್ಯಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|
| ಹೆಸರು | ವಯಸ್ಸು | ಕಸುಬು | ಶಿಕ್ಷಣ | 1 | 2 | 3 | 4 | 5 | 6 | 7 | 8 | 9 | 10 | 11 | ಮಾತು | | ಗ್ರಹಿಕೆ | | ಓದು | | ಬರಹ | |
| | | | | | | | | | | | | | | | ತ | ಕ | ತ | ಕ | ತ | ಕ | ತ | ಕ |
| ಮುನಿಯಮ್ಮ | 63 | – | – | ತ | ತ | ತ | ತ | ತ | – | – | – | ತ | ತ | ತ | ✓ | – | ✓ | – | – | – | – | – |
| ವೆಳ್ಳಿಯಮ್ಮ | 62 | – | – | ತ | ತ | ತ | ತ | ತ | – | – | – | ತ | ತ | ತ | ✓ | – | ✓ | – | – | – | – | – |
| ಚಿನ್ನತಾಯಿ | 60 | – | – | ತ | ತ | ತ | ತ | ತ | – | ತ | – | ತ | ತ | ತ | ✓ | ✓ | ✓ | ✓ | – | – | – | – |
| ಕುಪ್ಪಮ್ಮ | 50 | – | – | ತ | ತ | ತ | ತ | ತ | – | ತ | – | ತ | ತ | ತ | ✓ | ✓ | ✓ | ✓ | – | – | – | – |
| ತಮಿಳ್ ಸೆಲ್ವಿ | 52 | ಕೂಲಿ | – | ತ | ತ | ತ | ತ | ತ | – | ತ | – | ತ | ತ | ತ | ✓ | ✓ | ✓ | ✓ | – | – | – | – |
| ಸುಗುಣ | 45 | ಗೃಹಿಣಿ | – | ತ | ತ | ತ | ತ | ತ | – | ತ | ತ | ತ | ತ | ತ | ✓ | ✓ | ✓ | ✓ | – | – | – | – |
| ಮಂಜುಳ | 42 | ಕೂಲಿ | 6ನೇ | ತ | ತ | ತ | ತ | ತ | ತ/ಕ | ತ | ತ | ತ | ಕ | ತ/ಕ | ✓ | ✓ | ✓ | ✓ | – | ✓ | – | ✓ |
| ಶ್ರೀದೇವಿ | 41 | ವ್ಯಾಪಾರ | 6ನೇ | ತ | ತ | ತ | ತ | ತ | ಕ | ತ | ತ | ತ | ಕ | ತ/ಕ | ✓ | ✓ | ✓ | ✓ | – | ✓ | – | ✓ |
| ಪಾಪಮ್ಮ | 30 | ಕೂಲಿ | 10ನೇ | ತ | ತ | ತ | ತ | ತ | ಕ | ತ | ತ | ತ | ಕ | ತ | ✓ | ✓ | ✓ | ✓ | ✓ | ✓ | ✓ | ✓ |
| ಇಂದ್ರಾಣಿ | 37 | ಖಾ. ಕೆಲಸ | 10ನೇ | ತ | ತ | ತ | ತ | ತ | ಕ | ಕ | ತ | ತ | ಕ | ತ | ✓ | ✓ | ✓ | ✓ | – | ✓ | – | ✓ |
| ಕಾಳಿಯಮ್ಮ | 34 | ಗೃಹಿಣಿ | – | ತ | ತ | ತ | ತ | ತ | ತ | ತ | ತ | ತ | ತ | ತ | ✓ | – | ✓ | – | ✓ | – | ✓ | – |
| ರಾಜಮ್ಮ | 26 | ಗೃಹಿಣಿ | ಪದವಿ | ತ | ತ | ತ | ತ | ತ | ಕ | ತ | ತ | ತ | ಕ | ತ | ✓ | ✓ | ✓ | ✓ | ✓ | ✓ | ✓ | ✓ |
| ರೋಜ | 25 | ಗೃಹಿಣಿ | ಪದವಿ | ತ | ತ | ತ | ತ | ತ | ತ | ತ | ತ | ತ | ತ | ತ | ✓ | – | ✓ | – | ✓ | – | ✓ | – |
| ಮೇರಿ | 25 | ಗೃಹಿಣಿ | ಪದವಿ | ತ | ತ | ತ | ತ | ತ/ಕ | ಕ | ಕ | ಕ | ಕ | ಕ | ತ | ✓ | ✓ | ✓ | ✓ | ✓ | ✓ | ✓ | ✓ |
| ಶ್ರೀದೇವಿ | 26 | ಗೃಹಿಣಿ | 12ನೇ | ತ | ತ | ತ | ತ | ಕ | ಕ | ಕ | ಕ | ಕ | ಕ | ತ/ಕ | ✓ | ✓ | ✓ | ✓ | – | ✓ | – | ✓ |

೧. ಹಿರಿಯರೊಂದಿಗೆ ೨. ಮಕ್ಕಳೊಂದಿಗೆ ೩. ನೆರೆಯವರೊಂದಿಗೆ ೪. ಸಂಬಂಧಿಕರೊಂದಿಗೆ ೫. ಗೆಳೆಯರೊಂದಿಗೆ ೬. ಶಾಲೆಗಳಲ್ಲಿ ೭. ಕೆಲಸದ ಸ್ಥಳಗಳಲ್ಲಿ ೮. ಮಾರುಕಟ್ಟೆಗಳಲ್ಲಿ ೯. ಪ್ರಾರ್ಥನೆ ೧೦. ಅಪರಿಚಿತರೊಡನೆ ೧೧. ಟಿ.ವಿ ನೋಡುವಾಗ

ಬಹುತೇಕರು ತಮಿಳು ಭಾಷಿಕರು ವ್ಯಾಪಾರಸ್ಥರಾಗಿರುವುದು ತಮಿಳು ಭಾಷಾ ಬಳಕೆಯ ಅನುಕೂಲವಾಗಿದೆ. ಇನ್ನು ಇವರು ತಮಿಳು ಟಿ. ವಿ. ಚಾನಲ್‌ಗಳನ್ನು ಹೆಚ್ಚು ನೋಡುವುದರಿಂದ ತಮಿಳನ್ನು ಹೆಚ್ಚು ಬಳಕೆ ಮಾಡುತ್ತಾರೆ. ಇಲ್ಲಿ ತಮಿಳು ಭಾಷೆಯ ಸ್ತ್ರೀಯರು ಮನೆ ಮತ್ತು ಕೃಷಿ ಕೆಲಸದಿಂದಾಗಿ ಮನೆ ಆವರಣದಲ್ಲಿಯೇ ಹೆಚ್ಚು ಇರುವುದರಿಂದ ಇವರಿಗೆ ತಮಿಳು ಭಾಷೆಯನ್ನು ಬಿಟ್ಟು ಕನ್ನಡ ಅಥವಾ ಬೇರೆ ಭಾಷೆಯ ಸಂಪರ್ಕಕ್ಕೆ ಬರುವುದು ಕಡಿಮೆ ಆದ್ದರಿಂದ ಇವರಲ್ಲಿ ತಮಿಳು ಬಳಕೆಯು ಹೆಚ್ಚಾಗಿದೆ. ಅಲ್ಲದೇ ಮಾಹಿತಿದಾರರಲ್ಲಿರುವ ಮೇರಿ, ರೋಜ ಮತ್ತು ರಾಜಮ್ಮ ಇವರುಗಳು ತಮಿಳುನಾಡಿನಿಂದ ವೈವಾಹಿಕ ಕಾರಣದಿಂದಾಗಿ ಕರ್ನಾಟಕದಲ್ಲಿ ನೆಲೆಸಿದ್ದಾರೆ. ಇವರುಗಳು ಕನ್ನಡವನ್ನು ಪೂರ್ಣ ಪ್ರಮಾಣದಲ್ಲಿ ಮಾತನಾಡಲು ಬಳಸುವುದಿಲ್ಲ. ಕೆಲವೇ ಪದಗಳಲ್ಲಿ ಕನ್ನಡಿಗರೊಂದಿಗೆ ವ್ಯವಹರಿಸುತ್ತಾರೆ. ಇದಕ್ಕೆ ಕಾರಣ ಅವರು ವೈವಾಹಿಕ ವಲಸೆಯಿಂದ ಕರ್ನಾಟಕಕ್ಕೆ ಬಂದು ನೆಲೆಸಿದ್ದಾರೆ. ತಮಿಳು ಭಾಷೆಯನ್ನು ಕಲಿತ ಮಹಿಳೆಯರು ಕನ್ನಡ ಪರಿಸರಕ್ಕೆ ಬಂದಾಗ ಕನ್ನಡ ಕಲಿಕೆ ಮತ್ತು ಬಳಕೆ ನಿಧಾನಗತಿಯಲ್ಲಿರುತ್ತದೆ.

ಹೀಗೆ ಪುರುಷರ ತಮಿಳು ಭಾಷಾ ಬಳಕೆಗೂ ಮತ್ತು ಸ್ತ್ರೀಯ ಭಾಷಾ ಬಳಕೆಗೂ ವ್ಯತ್ಯಾಸವನ್ನು ಕಾಣಬಹುದು. ಇಲ್ಲಿ ಮುಖ್ಯವಾಗಿ ಭಾಷಾಸಂಗೋಪನೆಗೆ ಸಂಬಂಧಿಸಿದಂತೆ ಗಮನಿಸಬೇಕಾದ ಸಂಗತಿಯೆಂದರೆ ತಮಿಳು ಭಾಷೆಯ ಪುರುಷರು ವ್ಯಾವಹಾರಿಕ ಕಾರಣಕ್ಕೆ ಕನ್ನಡದ ಪರಿಸರದಲ್ಲಿ ಬೆರೆತು ಹೋಗಿದ್ದಾರೆ. ಇದರಿಂದ ಅವರುಗಳು ದಿನದ ಅರ್ಧದಷ್ಟು ಕನ್ನಡವನ್ನು ಬಳಕೆ ಮಾಡುತ್ತಾರೆ. ಆದರೆ ಸ್ತ್ರೀಯರು ಪೂರ್ಣ ಪ್ರಮಾಣದಲ್ಲಿ ತಮಿಳು ಭಾಷಿಕ ಪರಿಸರದಲ್ಲಿ ಇರುವುದರಿಂದ ಇವರು ತಮಿಳು ಭಾಷೆಯನ್ನು ಪೂರ್ಣ ಪ್ರಮಾಣದಲ್ಲಿ ಬಳಕೆ ಮಾಡುತ್ತಾರೆ.

ಸ್ತ್ರೀಯರು ತಮ್ಮ ಮಕ್ಕಳಿಗೆ ತಮಿಳನ್ನು ಅನೌಪಚಾರಿಕವಾಗಿ ಹೇಳಿಕೊಡುತ್ತಾರೆ. ಅಂದರೆ ಮಕ್ಕಳು ಚಿಕ್ಕವರಿದ್ದಾಗ ತಾಯಿ ಬಳಸುವ ಮತ್ತು ಪರಿಸರದಲ್ಲಿ ಬಳಕೆಯಲ್ಲಿರುವ ಭಾಷೆಯನ್ನು ಅನುಕರಣೆಯ ಮೂಲಕ ಕಲಿಯಲು ಪ್ರಾರಂಭಿಸುತ್ತಾರೆ. ಇಲ್ಲಿ ಭಾಷೆಯು ತಾಯಿಯಿಂದ ಮಕ್ಕಳಿಗೆ ಭಾಷೆ ದಾಟುವಲ್ಲಿ ತಾಯಿಯ ತಮಿಳು ಭಾಷೆಯ ಬಳಕೆ ಮತ್ತು ಪರಿಸರದಲ್ಲಿ ಇರುವ ಇತರ ಸ್ತ್ರೀಯರು ತಮಿಳು ಬಳಕೆಯಿಂದಾಗಿ ಮಕ್ಕಳು ತಮಿಳನ್ನು ಬೇಗನೆ ಕಲಿಯುತ್ತಾರೆ.

ತಾಯಿಯಿಂದ ಮಕ್ಕಳು ಮನೆಯಲ್ಲಿ ಭಾಷೆ ಕಲಿಯುವುದಕ್ಕೆ ಉದಾಹರಣೆ

| **ಕನ್ನಡದ ರೂಪ** | **ತಮಿಳಿನ ರೂಪ** |
|---|---|
| ಹೋಗು | ಪೊ |
| ಬಾ | ವಾ |
| ಕುಳಿತುಕೊ | ಉಕ್ಕಾರ(Utkara) |
| ನೋಡು | ಪಾಕ(Parkka) |
| ಕೊಡು | ಕೊಡುಕ್(Kotukka) |

ಹೀಗೆ ಮಕ್ಕಳು ಮೊದಲು ಒಂದು ಅಕ್ಷರದ ಪದಗಳನ್ನು, ಎರಡು ಅಕ್ಷರದ ಪದಗಳನ್ನು ಮೂರು ಮತ್ತು ಮೂರಕ್ಕಿಂತ ಹೆಚ್ಚಿನ ಅಕ್ಷರದ ಪದಗಳನ್ನು ಬಳಕೆ ಮಾಡಲು ಪ್ರಾರಂಭಿಸುತ್ತಾರೆ. ಮೊದಲು ಕಲಿಯುವ ಪದಗಳೆಲ್ಲ ಬಹುಪಾಲು ನಾಮಪದಗಳು ಮತ್ತು ಕ್ರಿಯಾಪದಗಳಾಗಿರುತ್ತವೆ. ನಂತರದಲ್ಲಿ ಪರಿಸರದ ಬೇರೆ ಬೇರೆ ಪದಗಳನ್ನು ಕಲಿಯಲು ಪ್ರಾರಂಭಿಸುತ್ತಾರೆ.

ತಮಿಳು ಭಾಷಿಕ ಮಕ್ಕಳು ತಾಯಿಯಿಂದ ಮತ್ತು ಪರಿಸರದ ಇತರ ಸ್ತ್ರೀಯರಿಂದ ತಮಿಳನ್ನು ಕಲಿಯುತ್ತಾರೆ. ಆದರೆ ಕಲಿತ ತಮಿಳು ಕೆಲ ಹಂತದವರೆಗೂ ಮಾತ್ರ ಸೀಮಿತವಾಗಿರುತ್ತದೆ. ಅದನ್ನು ವಿಸ್ತರಿಸಿಕೊಳ್ಳಲು ಮತ್ತೆ ತಾಯಿ ಬಳಸುವ ತಮಿಳು ಭಾಷೆಯನ್ನು ಗಮನಿಸಿಯೇ ಕಲಿಯುತ್ತಾರೆ. ಅಂದರೆ ಭಾಷಾದ್ವೀಪಗಳಲ್ಲಿ ಇರುವ ಸ್ತ್ರೀಯರು ತಮಿಳು ಸಮುದಾಯಗಳ ಸಾಂಸ್ಕೃತಿಕ ಮತ್ತು ಸಾಮಾಜಿಕ ಆಚರಣೆಗಳನ್ನು ತಮ್ಮೊಳಗೆ ರೂಢಿಸಿಕೊಂಡಿದ್ದಾರೆ. ಇವುಗಳನ್ನು ಆಚರಣೆ ಮಾಡುವಲ್ಲಿ ಮತ್ತು ಮಾತನಾಡುವ ಸಂದರ್ಭದಲ್ಲಿ ಗಮನಿಸುವ ಮಕ್ಕಳು ಸಾಂಸ್ಕೃತಿಕ ಮತ್ತು ಆಚರಣೆಯ ನೆಲೆಯಲ್ಲಿ ಬಳಸುವ ತಮಿಳು ಭಾಷೆಯನ್ನು ಕಲಿಯುತ್ತಾರೆ. ಹೀಗೆ ಇನ್ನು ತಮಿಳು ಭಾಷೆಯ ಕಲಿಕೆಯು ಹೆಚ್ಚು ಸ್ತ್ರೀಯರು ಬಳಕೆ ಮಾಡುವ ಭಾಷೆಯಿಂದ ಗಟ್ಟಿಗೊಳ್ಳುತ್ತಾ ಸಾಗುತ್ತದೆ. ಪುರುಷರು ಕನ್ನಡಿಗರೊಂದಿಗೆ ಬೆರೆತು ಹೋಗಿರುವುದರಿಂದ ತಮಿಳಿನ ಸಾಂಸ್ಕೃತಿಕ ಮತ್ತು ಆಚರಣೆಯ ನೆಲೆಯ ಪದಗಳನ್ನು ಬಳಸದೇ ಇರುವುದರಿಂದ ಅವುಗಳನ್ನು ನೆನಪಿಸಿಕೊಂಡು ಮಾತನಾಡುತ್ತಾರೆ. ಹೀಗೆ ಪುರುಷರು ಮತ್ತೆ ತಮಿಳಿನ ಸಾಂಸ್ಕೃತಿಕ ಪದಕೋಶಗಳನ್ನು ತಿಳಿಯುವಲ್ಲಿ ಸ್ತ್ರೀಯರನ್ನು ಅವಲಂಬಿಸುತ್ತಾರೆ.

ಉದಾಹರಣೆಗೆ: ಮನೆದೇವರ ಹೆಸರು, ದೇವರಿಗೆ ಸಂಬಂಧಿಸಿದ ವಸ್ತುಗಳ ಹೆಸರುಗಳು, ಮದುವೆ ಸಂದರ್ಭದಲ್ಲಿ ಆಚರಿಸುವ ಕೆಲವು ಆಚರಣೆಯ ಹೆಸರುಗಳನ್ನು ಮಹಿಳೆಯರನ್ನು ಕೇಳಿ ಮಾಹಿತಿಯನ್ನು ನೀಡಿದರು.

ಹಿರಿಯೂರು ಮತ್ತು ಹೊಸಪೇಟೆಯ ಪರಿಸರದಲ್ಲಿರುವ ೬೦ ವರ್ಷದ ಸ್ತ್ರೀಯರು ಇನ್ನು ತಮಿಳನ್ನು ಪೂರ್ಣ ಪ್ರಮಾಣದಲ್ಲಿ ಬಳಕೆ ಮಾಡುತ್ತಾರೆ. ಇದರಿಂದ ಅವರುಗಳು ತಮ್ಮ ಮಕ್ಕಳಿಗೆ ತಮಿಳು ಭಾಷೆಯನ್ನು ಕಲಿಸಿದೆವು ಎಂದು ತಿಳಿಸುತ್ತಾರೆ. ಇದರೊಂದಿಗೆ ತಮಿಳು ಭಾಷಾಸಂಗೋಪನೆಯು ಕೇವಲ ಮಾತಿನ ಕೌಶಲ್ಯದೊಂದಿಗೆ ಮಾತ್ರ ಮುಂದುವರೆದಿಲ್ಲ. ಕೆಲವು ಮಕ್ಕಳಲ್ಲಿ ನಾಲ್ಕು ಕೌಶಲ್ಯಗಳಲ್ಲಿ ಕಲಿಕೆಯಾಗುತ್ತಿದ್ದಾರೆ. ಔಪಚಾರಿಕ ಶಿಕ್ಷಣದಿಂದ ತಮಿಳು ಮಾಧ್ಯಮದಲ್ಲಿ ಇವುಗಳನ್ನು ಕಲಿತರೆ, ಇನ್ನು ಕೆಲವರು ಟಿ. ವಿ. ಮತ್ತು ಇತರೆ ಅಧ್ಯಯನ ಸಾಮಗ್ರಿಗಳಿಂದ ತಮಿಳನ್ನು ಕಲಿತಿರುವುದಾಗಿ ತಿಳಿಸುತ್ತಾರೆ.

ಭಾಷಾದ್ವೀಪಗಳಲ್ಲಿ ತಮಿಳು ಭಾಷೆಯನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಸಾಗಿಸುವಲ್ಲಿ ತಮಿಳು ಸ್ತ್ರೀಯರು ಹೆಚ್ಚು ಪಾತ್ರವಹಿಸುತ್ತಾರೆ. ಇದಕ್ಕೆ ತಮಿಳು ಭಾಷಾದ್ವೀಪಗಳಲ್ಲಿರುವ

ತಮಿಳು ಭಾಷಿಕ ಪರಿಸರವೂ ಕಾರಣವಾಗಿದೆ. ಅಂದರೆ ಇವರುಗಳು ಕನ್ನಡವನ್ನು ಕಲಿತಿಲ್ಲವೆಂದೇನು ಅಲ್ಲ. ಆದರೆ ತಮ್ಮ ಮನೆಯ ಆವರಣದಲ್ಲಿ ಮತ್ತು ಭಾಷಾದ್ವೀಪದ ಆವರಣದಲ್ಲಿ ತಮಿಳನ್ನು ಪೂರ್ಣ ಪ್ರಾಮಾಣದಲ್ಲಿ ಬಳಕೆ ಮಾಡಿಕೊಂಡು ಮಕ್ಕಳಿಗೆ ಭಾಷೆಯನ್ನು ಅನೌಪಚಾರಿಕವಾಗಿ ಕಲಿಸುತ್ತಿರುವುದು ಕಾಣಬಹುದು.

**ತಮಿಳು ಭಾಷಾದ್ವೀಪಗಳಲ್ಲಿ ವರ್ಗಗಳಾಧರಿಸಿ ಭಾಷಾಸಂಗೋಪನೆ**

ತಮಿಳು ಭಾಷಾದ್ವೀಪಗಳಲ್ಲಿ ಸಾಮಾಜಿಕ ಭಿನ್ನಾಂಶವಾದ ವರ್ಗಗಳನ್ನು ಆಧರಿಸಿ ಹೇಗೆ ಭಾಷಾಸಂಗೋಪನೆ ನಡೆಯುತ್ತದೆ ಎಂಬುದನ್ನು ಕಂಡುಕೊಳ್ಳಬೇಕಿದೆ. ಇಲ್ಲಿ ಸಾಮಾಜಿಕ ಭಿನ್ನಾಂಶವಾಗಿರುವ ವರ್ಗಗಳು ಭಾಷಾಬಳಕೆಯಲ್ಲಿ ಮತ್ತು ಸಂಗೋಪನೆ ಮಾಡುವಾಗ ಆಗುವ ಪ್ರಭಾವ ಮತ್ತು ಪ್ರೇರಣೆಗಳನ್ನು ಕಂಡುಕೊಂಡಿದೆ ಹಾಗೂ ಭಾಷಾಸಂಗೋಪನೆಯಲ್ಲಿ ಯಾವ ವರ್ಗಗಳು ಹೆಚ್ಚು ಪಾತ್ರವಹಿಸುತ್ತವೆ ಎಂಬುದನ್ನು ಕಂಡುಕೊಂಡಿದೆ.

ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಇರುವ ತಮಿಳು ಭಾಷಿಕರ ಸಮುದಾಯಗಳನ್ನು ಉನ್ನತವರ್ಗದವರು ಮತ್ತು ಕೆಳವರ್ಗದವರು ಎಂದು ವಿಭಾಗಿಸಿಕೊಳ್ಳಲಾಗಿದೆ. ಇಲ್ಲಿ ಉನ್ನತವರ್ಗದವರು ಎಂದು ಗೌಂಡರ್, ಮೊದಲಿಯಾರ್ ಸಮುದಾಯಗಳನ್ನು ಗುರುತಿಸಿಕೊಳ್ಳಲಾಗಿದೆ. ಮತ್ತು ಕೆಳವರ್ಗದವರು ಎಂದು ಆದಿದ್ರಾವಿಡರು, ವಡ್ಡಾರ್, ಸೆಂಬಡವರ್, ವಣ್ಣಿಯಾರ್ ಮುಂತಾದವರನ್ನು ಗುರುತಿಸಿಕೊಳ್ಳಲಾಗಿದೆ. ಈ ವಗೀಕರಣವನ್ನು ಸಾಮಾಜಿಕ ಮತ್ತು ಆರ್ಥಿಕ ಸ್ಥಾನವನ್ನು ಆಧರಿಸಿ ವರ್ಗೀಕರಿಸಿಕೊಂಡಿದೆ. ಗೌಂಡರ್ ಮತ್ತು ಮೊದಲಿಯಾರ್ ಸಮುದಾಯಗಳವರು ಕೃಷಿ ಮತ್ತು ವ್ಯಾವಹಾರಿಕ ಕ್ಷೇತ್ರಗಳಲ್ಲಿ ಉನ್ನತ ಸ್ಥಾನದಲ್ಲಿದ್ದಾರೆ. ಆದರೆ ಕೆಳವರ್ಗದವರಾದ ಆದಿದ್ರಾವಿಡರು, ವಡ್ಡಾರ್, ಸೆಂಬಡವರ್, ವಣ್ಣಿಯಾರ್‌ಗಳು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಕೆಳವರ್ಗಕ್ಕೆ ಸೇರುತ್ತಾರೆ. ಇವರು ಕೂಲಿ ಮತ್ತು ಇತರ ಸಾಮಾನ್ಯ ಕೆಲಸಗಳಲ್ಲಿ ತೊಡಗಿಕೊಂಡಿದ್ದಾರೆ. ಇವರುಗಳು ಆರ್ಥಿಕವಾಗಿ ಉನ್ನತ ಸ್ಥಾನದಲ್ಲಿಲ್ಲ. ಆದ್ದರಿಂದ ಇವರುಗಳನ್ನು ಸಾಮಾಜಿಕವಾಗಿ ಮತ್ತು ಆರ್ಥಿವಾಗಿ ಕೆಳವರ್ಗದವರು ಎಂದು ಗುರುತಿಸಿಕೊಳ್ಳಲಾಗಿದೆ. ಇವರುಗಳು ತಮಿಳು ಭಾಷೆಯನ್ನು ಯಾವ ಯಾವ ಸಂದರ್ಭಗಳಲ್ಲಿ ಬಳಸುತ್ತಾರೆ. ಅದರೊಂದಿಗೆ ಈ ವರ್ಗಗಳ ಮಕ್ಕಳು ಯಾವ ಭಾಷೆಯನ್ನು ಮಾತನಾಡುತ್ತಾರೆ ಎನ್ನುವ ಮಾಹಿತಿಯ ಆಧಾರದ ಮೇಲೆ ಭಾಷೆಯು ಯಾವ ವರ್ಗಗಳಲ್ಲಿ ಹೆಚ್ಚು ಸಂಗೋಪನೆಯಾಗುತ್ತದೆ ಎಂಬುದನ್ನು ಕಂಡುಕೊಂಡಿದೆ.

ಈ ಕೋಷ್ಟಕವು ಹಿರಿಯೂರು ಮತ್ತು ಹೊಸಪೇಟೆಯ ಪ್ರದೇಶಗಳಲ್ಲಿ ವಾಸವಿರುವ ಉನ್ನತ ವರ್ಗಗಳ ಭಾಷಿಕ ಬಳಕೆಯ ಸಂದರ್ಭಗಳನ್ನು ಕುರಿತು ಮಾಹಿತಿ ನೀಡುತ್ತದೆ. ಉನ್ನತವರ್ಗಗಳಾದ ಗೌಂಡರ್ ಮತ್ತು ಮೊದಲಿಯಾರ್ ಸಮುದಾಯಗಳು ತಮಿಳು ಭಾಷೆಯನ್ನು ಯಾವ ಸಂದರ್ಭಗಳಲ್ಲಿ ಮಾತನಾಡುತ್ತಾರೆ ಎಂಬುದನ್ನು ಸಂಗ್ರಹಿಸಿದೆ. ಈ ಕೋಷ್ಟಕದಂತೆ ಗೌಂಡರ್ ಮತ್ತು ಮೊದಲಿಯಾರ್ ಸಮುದಾಯಗಳು ಸಾಮಾನ್ಯವಾಗಿ ತಮ್ಮ ಹಿರಿಯರೊಂದಿಗೆ ತಮಿಳು ಭಾಷೆಯಲ್ಲಿಯೇ ಮಾತನಾಡುತ್ತೇವೆ

## ಉನ್ನತ ವರ್ಗದವರ ತಮಿಳು ಭಾಷಾ ಬಳಕೆಯ ಸಂದರ್ಭಗಳು

| ಸಾಮಾಜಿಕ ಭಿನ್ನಾಂಶಗಳು | | | | ಭಾಷಾ ಬಳಕೆಯ ಆವರಣಗಳು | | | | | | | | | | ಭಾಷಾ ಕೌಶಲ್ಯಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| ಹೆಸರು | ವಯಸ್ಸು | ಕಸುಬು | ಜಾತಿ | 1 | 2 | 3 | 4 | 5 | 6 | 7 | 8 | 9 | 10 | ಮಾತು | | ಗ್ರಹಿಕೆ | | ಓದು | | ಬರಹ | |
| | | | | | | | | | | | | | | ತ | ಕ | ತ | ಕ | ತ | ಕ | ತ | ಕ |
| ನಾಗರಾಜ | 57 | ಕೃಷಿ | ಗೌಂಡರ್ | ತ | ತ/ಕ | ಕ/ಇ | ಕ | ಕ | ತ | ಕ | ಕ | ಕ | ತ/ಕ | ✓ | ✓ | ✓ | ✓ | ✓ | ✓ | ✓ | ✓ |
| ಚಿನ್ನಪ್ಪಗೌಂಡರ್ | 60 | ಕೃಷಿ | ಮೊದಲಿಯಾರ್ | ತ | ತ/ಕ | ಕ | ಕ | ತ | ತ | ಕ | ಕ | ಕ | ಕ | ✓ | ✓ | ✓ | ✓ | – | – | – | – |
| ಗುಣಶೇಖರನ್ | 49 | ಶಿಕ್ಷಕ | ಗೌಂಡರ್ | ತ | ಕ | ಕ | ಕ | ತ | ತ | ಕ | ಕ | ಕ | ತ/ಕ | ✓ | ✓ | ✓ | ✓ | ✓ | ✓ | ✓ | ✓ |
| ಸುಮತಿ | 38 | ಗೃಹಿಣಿ | ಗೌಂಡರ್ | ತ | ತ | ತ | ತ | ತ | ತ | – | ಕ | ಕ | ತ | ✓ | ✓ | ✓ | ✓ | ✓ | – | ✓ | |
| ಆರ್ಮುಗಂ | 35 | ಕೃಷಿ | ಮೊದಲಿಯಾರ್ | ತ | ಕ | ಕ | ಕ | ತ | ತ | ಕ | ಕ | ಕ | ತ/ಕ | ✓ | ✓ | ✓ | ✓ | – | – | – | – |
| ವಾಸುದೇವನ್ | 31 | ವ್ಯಾಪಾರಿ | ಗೌಂಡರ್ | ತ | ಕ | ಕ | ಕ | ಕ | ಕ | ಕ | ಕ | ಕ | ತ/ಕ | ✓ | ✓ | ✓ | ✓ | ✓ | ✓ | ✓ | ✓ |
| ಷಣ್ಮುಗಂ | 28 | ಖಾಸಗಿ ವೃತ್ತಿ | ಮೊದಲಿಯಾರ್ | ತ | ತ | ತ | ತ/ಕ | ಕ | ತ | ಕ | ಕ | ಕ | ತ | ✓ | ✓ | ✓ | ✓ | ✓ | ✓ | ✓ | ✓ |
| ಲಕ್ಷ್ಮಿ | 27 | ಗೃಹಿಣಿ | ಮೊದಲಿಯಾರ್ | ತ | ಕ | ಕ | ಕ | ತ | ತ | – | ಕ | ಕ | ತ/ಕ | ✓ | ✓ | ✓ | ✓ | – | ✓ | – | ✓ |
| ತಮಿಳರಸಿ | 26 | ವಿದ್ಯಾರ್ಥಿನಿ | ಗೌಂಡರ್ | ತ | – | – | – | ಕ | ಕ | ಕ | ಕ | ಕ | ತ/ಕ | ✓ | ✓ | ✓ | ✓ | – | ✓ | – | ✓ |
| ಸೆಲ್ವಿ | 25 | ವ್ಯಾಪಾರಿ | ಗೌಂಡರ್ | ತ | ಕ | ಕ | ಕ | ಕ | ಕ | ಕ | ಕ | ಕ | ಕ | ✓ | ✓ | ✓ | ✓ | – | ✓ | – | ✓ |

೧. ಹಿರಿಯರೊಂದಿಗೆ ೨. ಮಕ್ಕಳೊಂದಿಗೆ ೩. ಮಕ್ಕಳು ಶಾಲೆಯಲ್ಲಿ ಬಳಸುವ ಭಾಷೆ ೪. ಮಕ್ಕಳು ಮನೆಯಲ್ಲಿ ಬಳಸುವ ಭಾಷೆ ೫. ನೆರೆಯವರೊಂದಿಗೆ ೬. ಸಂಬಂಧಿಕರೊಂದಿಗೆ ೭. ಕೆಲಸದ ಸ್ಥಳ ೮. ಮಾರುಕಟ್ಟೆ ೯. ಅಪರಿಚಿತರೊಂದಿಗೆ ೧೦. ಟಿ.ವಿ/ಪತ್ರಿಕೆ ನೋಡುವಾಗ

ಎಂದು ತಿಳಿಸುತ್ತಾರೆ. ಆದರೆ ತಮ್ಮ ಮಕ್ಕಳನ್ನು ಮಾತನಾಡಿಸುವಾಗ ಮತ್ತು ಅವರು ನಮ್ಮನ್ನು ಮಾತನಾಡಿಸುವಾಗ ಕನ್ನಡವನ್ನು ಹೆಚ್ಚು ಬಳಕೆ ಮಾಡುತ್ತಾರೆ ಎಂಬುದನ್ನು ಇಲ್ಲಿ ಕಾಣಬಹುದು. ಅಂದರೆ ಹಿರಿಯ ತಲೆಮಾರಿನವರು ಹೆಚ್ಚು ತಮಿಳು ಭಾಷೆಯನ್ನು ಬಳಕೆಮಾಡುತ್ತಿದ್ದು, ಮಕ್ಕಳು ಅಂದರೆ ಮೂರು ಮತ್ತು ನಾಲ್ಕನೇ ತಲೆಮಾರಿನವರು ಕನ್ನಡವನ್ನು ಬಳಕೆ ಮಾಡುತ್ತಾರೆ ಎಂದು ತಿಳಿಯುತ್ತದೆ. ಇದರೊಂದಿಗೆ ಈ ಸಮುದಾಯದ ಮಕ್ಕಳು ಇಂಗ್ಲಿಷ್ ಮಾಧ್ಯಮದಲ್ಲಿ ಅಧ್ಯಯನ ಮಾಡುತ್ತಿರುವುದರಿಂದ ಇವರಿಗೆ ಶಾಲಾ ಪರಿಸರದಲ್ಲಿ ಕನ್ನಡ ಅಥವಾ ಇಂಗ್ಲಿಷ್ ಬಳಕೆ ಮಾಡುತ್ತಾರೆ. ಶಾಲಾ ಆವರಣದಲ್ಲಿ ಇಂಗ್ಲಿಷ್‌ಗಿಂತಲೂ ಕನ್ನಡವನ್ನು ಹೆಚ್ಚು ಬಳಕೆ ಮಾಡುತ್ತಾರೆ ಎಂದು ತಿಳಿಸುತ್ತಾರೆ. ಇನ್ನು ತಮ್ಮ ಸಂಬಂಧಿಕರೊಂದಿಗೆ ಮತ್ತು ನೆರೆಯವರೊಂದಿಗೆ ತಮಿಳು ಕನ್ನಡ ಎರಡರಲ್ಲೂ ಮಾತನಾಡುವುದನ್ನು ತಿಳಿಸಿದ್ದಾರೆ. ಅದೇ ರೀತಿಯಲ್ಲಿ ಮಾರುಕಟ್ಟೆ ಮತ್ತು ಅಪರಿಚಿತರೊಂದಿಗೆ ಕನ್ನಡದಲ್ಲಿ ಮಾತನಾಡುವುದು ಕಾಣಬಹುದು. ಇನ್ನು ಈ ವರ್ಗದವರು ತಮಿಳನ್ನು ಮಾತನಾಡುವ ಮತ್ತು ಗ್ರಹಿಸುವ ಕೌಶಲ್ಯವನ್ನು ಹೊಂದಿದ್ದಾರೆ. ಕೆಲವೇ ಕೆಲವರು ಮಾತ್ರ ಓದುವ ಮತ್ತು ಬರವಣಿಗೆ ಮಾಡುವ ಕೌಶಲ್ಯವನ್ನು ಹೊಂದಿದ್ದಾರೆ.

ಈ ಒಟ್ಟು ಮಾಹಿತಿಯನ್ನು ಗಮನಿಸಿದಾಗ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಉತ್ತಮ ಸ್ಥಾನವನ್ನು ಹೊಂದಿರುವ ಇವುಗಳು ಕನ್ನಡದ ಪರಿಸರದಲ್ಲಿ ಸುಲಭವಾಗಿ ಸಮೀಕರಣಗೊಂಡಿದ್ದಾರೆ. ಅಂದರೆ ಮನೆ ಆವರಣದಲ್ಲಿ ತಮಿಳನ್ನು ಬಳಸುತ್ತಾ, ತಮ್ಮ ವ್ಯವಹಾರ ಮತ್ತು ಇತರೆ ಕೆಲಸಗಳಿಗೆ ಕನ್ನಡವನ್ನು ಆಧರಿಸಿದ್ದಾರೆ. ಇದರಿಂದಾಗಿ ಅವರು ತಮ್ಮ ಹಿರಿಯರೊಂದಿಗೆ ಬಿಟ್ಟು ಬೇರೆ ಸಂದರ್ಭಗಳಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡುವುದು ಕಡಿಮೆ ಪ್ರಮಾಣದಲ್ಲಿ ಕಾಣುತ್ತೇವೆ. ಇದರೊಂದಿಗೆ ಈ ವರ್ಗದ ಮಕ್ಕಳು ಮನೆ, ಶಾಲೆ, ಕಲಿಕೆಯಲ್ಲಿಯೂ ತಮಿಳನ್ನು ಬಿಟ್ಟು ಪರಿಸರದ ಭಾಷೆಯಾದ ಕನ್ನಡ ಮತ್ತು ಕಲಿಕೆಯ ಎರಡನೇ ಭಾಷೆಯಾದ ಇಂಗ್ಲಿಷನ್ನು ಕಲಿಯುತ್ತಿದ್ದಾರೆ. ಈ ಮೂಲಕ ಉನ್ನತ ವರ್ಗಗಳಲ್ಲಿ ತಮಿಳು ಕೇವಲ ಮನೆ ಭಾಷೆಯಾಗಿ ಉಳಿಯುವ ಹಂತ ತಲುಪಿದೆ. ಇನ್ನು ಕೆಲವು ಉನ್ನತ ವರ್ಗಗಳಲ್ಲಿ ಇರುವ ಮಕ್ಕಳು ಮನೆಯ ಆವರಣವನ್ನು ಬಿಟ್ಟು ಬೇರೆಡೆ ಕಲಿಯುತ್ತಿರುವ ಮಕ್ಕಳು ತಮಿಳು ಬಳಕೆ ಮಾಡದೇ ಇರುವುದು ಕಾಣಬರುತ್ತವೆ. ಹೀಗೆ ಉನ್ನತ ವರ್ಗದವರು ಮನೆಯಲ್ಲಿಯೂ ಕೆಲವೇ ಸಂದರ್ಭಗಳಲ್ಲಿ ಮಾತ್ರ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಇನ್ನುಳಿದ ಸಂದರ್ಭಗಳಲ್ಲಿ ಕನ್ನಡವನ್ನು ಬಳಕೆ ಮಾಡುತ್ತಾರೆ. ಇಲ್ಲಿ ಭಾಷಾಸಂಗೋಪನೆಗಾಗಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಮನೆಯಲ್ಲಿರುವ ಸ್ತ್ರೀಯರು ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಇವರ ಮಕ್ಕಳಿಗೂ ತಮಿಳು ಭಾಷೆಯನ್ನು ಕಲಿಸುತ್ತಾರೆ. ಆದರೆ ಬಳಕೆಯ ಪ್ರಮಾಣ ಕಡಿಮೆ ಇದೆ. ಈ ಸಮುದಾಯದವರು ಗಂಡು ಮಕ್ಕಳಿಗೆ ಮತ್ತು ಹೆಣ್ಣುಮಕ್ಕಳಿಗೆ ವೈವಾಹಿಕ ಸಂಬಂಧವನ್ನು ಕಲ್ಪಿಸುವಾಗ ಮೂಲ ತಮಿಳುನಾಡಿನ ಸಂಬಂಧವನ್ನು  ಹುಡುಕುವುದು ಹೆಚ್ಚು. ಇದರಿಂದ ಕರ್ನಾಟಕಕ್ಕೆ ವೈವಾಹಿಕ ಸಂಬಂಧದ ಮೂಲಕ ಬರುವ ಸ್ತ್ರೀಯರು ತಮಿಳು ಭಾಷೆಯನ್ನು ಎಲ್ಲಾ ಹಂತಗಳಲ್ಲಿ ಬಳಕೆ ಮಾಡುತ್ತಾರೆ. ಇವರುಗಳು ಹೆಚ್ಚು ತಮಿಳು ಭಾಷೆಯನ್ನು ಬಳಸುತ್ತಾರೆ.

ಈ ವರ್ಗಗಳಲ್ಲಿ ಹೆಚ್ಚು ಕನ್ನಡ ಸಾಮಾಜಿಕ ಪರಿಸರದಲ್ಲಿ ಬೆರೆತಿರುವುದರಿಂದ ಮತ್ತು ಹೆಚ್ಚು ಕನ್ನಡವನ್ನು ಬಳಸುವುದರಿಂದ ಪುರುಷರ ಮಾತಿನಲ್ಲಿ 'ಸ', 'ಶ', 'ಷ', 'ಕ' ಧ್ವನಿಗಳನ್ನು ಕನ್ನಡದಲ್ಲಿ ಬಳಸುವಂತೆಯೇ ಬಳಸುವುದನ್ನು ಕಾಣಬಹುದು. ಇವರು ಬಳಸುವ ಕನ್ನಡದಿಂದ ಇವರನ್ನು ತಮಿಳರೆಂದು ಗುರುತಿಸಲು ಸಾಧ್ಯವಾಗದು. ಹಾಗೆಯೇ ಕನ್ನಡದ ಬಹುತೇಕ ಪದಕೋಶವನ್ನು ತಿಳಿದಿರುವ ಇವರುಗಳು ಸುಲಲಿತವಾಗಿ ಕನ್ನಡ ಬಳಕೆ ಮಾಡುತ್ತಾರೆ.

ಉದಾಹರಣೆಗೆ

| **ಕನ್ನಡ ರೂಪ** | **ಉ.ವ. ಪುರಷರು ಬಳಸುವ ರೂಪ** | **ಭಾಷಾದ್ವೀಪಗಳಲ್ಲಿ ಬಳಕೆಯಲ್ಲಿರುವ ರೂಪ** |
|---|---|---|
| ಗಣಪತಿ | ಗಣಪತಿ | ಕ(ಗ)ಣಪತಿ |
| ಶಂಕರ | ಶಂಕರ | ಸಂಕರ |
| ಷಣ್ಮುಖ | ಷಣ್ಮುಖ | ಸ(ಶ)ಣ್ಮುಗ |

(ಉ.ವ–ಉನ್ನತ ವರ್ಗಗಳ)

ಹೀಗೆ ಕನ್ನಡದ ಧ್ವನಿಗಳನ್ನು ಸರಿಯಾದ ಕ್ರಮದಲ್ಲಿ ಉಚ್ಚಾರಿಸುತ್ತಾರೆ. ಈ ರೀತಿಯ ಕನ್ನಡದ ಸುಲಭ ಬಳಕೆಗೆ ಕಾರಣವನ್ನು ತಿಳಿಯುವುದಾದರೆ ಇವರು ಬಹು ಹಿಂದಿನಿಂದಲೂ ಕನ್ನಡ ಪರಿಸರದಲ್ಲಿ ನೆಲೆಗೊಂಡಿರುವುದು ಮತ್ತು ಸಾಮಾಜಿಕವಾಗಿ ಉನ್ನತ ಸ್ಥಾನದಲ್ಲಿರುವ ಕಾರಣಕ್ಕಾಗಿ ಇವರಿಗೆ ಕನ್ನಡದ ಪರಿಸರವು ಪಾಲ್ಗೊಳ್ಳಲು ಅವಕಾಶ ಮಾಡಿಕೊಟ್ಟಿರುವುದರಿಂದ ಕನ್ನಡವನ್ನು ಸ್ಪಷ್ಟವಾಗಿ ವಿವಿಧ ಸಂದರ್ಭಗಳಲ್ಲಿ ಬಳಕೆಗೆ ಸಾಕಾರವಾಗಿದೆ. ಆದರೆ ಕೆಲವೇ ಕೆಲವು ಸ್ತ್ರೀಯರು ವೈವಾಹಿಕ ಸಂಬಂಧದಿಂದ ಇಲ್ಲಿಗೆ ಬಂದಿರುವವರು ಕನ್ನಡವನ್ನು ಸ್ಪಷ್ಟವಾಗಿ ಬಳಸದೇ ಇರುವುದು ಮತ್ತು ಮೇಲೆ ತಿಳಿಸಿದ ಧ್ವನಿಗಳ ಬಳಕೆಯಲ್ಲಿ ವ್ಯತ್ಯಾಸವನ್ನು ಕಾಣಬಹುದು.

ಈ ಒಟ್ಟು ಬಳಕೆಯ ಸಂದರ್ಭಗಳನ್ನು ಗಮನಿಸಿದಾಗ ತಮಿಳು ಭಾಷಿಕರಲ್ಲಿರುವ ಉನ್ನತ ವರ್ಗದವರು ತಮಿಳು ಭಾಷೆಯನ್ನು ದಿನನಿತ್ಯದ ವಲಯದಿಂದ ಸಡಿಲಗೊಳಿಸಿಕೊಳ್ಳುತ್ತಿದ್ದಾರೆ. ಅಲ್ಲದೇ ಇವರುಗಳ ಮಕ್ಕಳು ಸಾಮಾಜಿಕ ಮತ್ತು ಶೈಕ್ಷಣಿಕ ಕಾರಣದಿಂದಾಗಿ ಕನ್ನಡ ಮತ್ತು ಇಂಗ್ಲಿಷ್ ಭಾಷೆಯ ಕಡೆ ಮುಖ ಮಾಡುತ್ತಿರುವುದು ಮಕ್ಕಳಿಂದ ತಮಿಳು ಭಾಷೆಯ ಬಳಕೆಯು ಕಡಿಮೆಯಾಗುತ್ತಿದೆ. ಹೀಗೆ ಈ ಮೇಲ್ವರ್ಗದ ಸಮುದಾಯಗಳಲ್ಲಿ ತಮಿಳು ಭಾಷೆಯ ಒಟ್ಟು ಬಳಕೆಯ ಪ್ರಮಾಣ ಕಡಿಮೆಯಾಗುತ್ತಿದೆ.

**ಕೆಳವರ್ಗದವರಲ್ಲಿ ತಮಿಳು ಭಾಷಾ ಬಳಕೆಯ ಸಂದರ್ಭಗಳು**

ಕೆಳವರ್ಗಗಳು ಎಂದು ಗುರುತಿಸಿಕೊಂಡಿರುವ ಆದಿದ್ರಾವಿಡರ್, ಚಕ್ಕಲಿಯಾರ್, ಸೆಂಬಡವಾರ್, ವಡ್ಡಾರ್ ಸಮುದಾಯಗಳು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಉತ್ತಮ ಸ್ಥಾನದಲ್ಲಿ ಇಲ್ಲದ ಕಾರಣಕ್ಕೆ ಇವರನ್ನು ಕೆಳವರ್ಗದವರು ಎಂದು ಗುರುತಿಸಿಕೊಳ್ಳಲಾಗಿದೆ. ಮುಖ್ಯವಾಗಿ ಈ ವರ್ಗಗಳನ್ನು ಹಿರಿಯೂರು ಮತ್ತು

## ಕೆಳವರ್ಗದವರ ತಮಿಳು ಭಾಷಾ ಬಳಕೆಯ ಸಂದರ್ಭಗಳು

| ಸಾಮಾಜಿಕ ಭಿನ್ನಾಂಶಗಳು | | | | ಭಾಷಾ ಬಳಕೆಯ ಆವರಣಗಳು | | | | | | | | | | ಭಾಷಾ ಕೌಶಲ್ಯಗಳು | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| ಹೆಸರು | ವಯಸ್ಸು | ಕಸುಬು | ಜಾತಿ | 1 | 2 | 3 | 4 | 5 | 6 | 7 | 8 | 9 | 10 | ಮಾತು | | ಗ್ರಹಿಕೆ | | ಓದು | | ಬರಹ | |
| | | | | | | | | | | | | | | ತ | ಕ | ತ | ಕ | ತ | ಕ | ತ | ಕ |
| ಕುಪ್ಪುಸ್ವಾಮಿ | 71 | ಕೂಲಿ | ಆದಿದ್ರಾವಿಡರ್ | ತ | ತ | ಕ | ತ | ತ | ತ | ತ | ತ | ಕ | ತ | ✓ | ✓ | ✓ | ✓ | – | – | – | – |
| ಕಾಳಿಯಣ್ಣ | 68 | ಕೂಲಿ | ಚಕ್ಕಳಿಯಾರ್ | ತ | ತ | ಕ | ತ | ತ | ತ | ತ | ತ | ಕ | ತ | ✓ | ✓ | ✓ | ✓ | – | – | – | – |
| ಮೈಲಮ್ಮ | 52 | ಕೂಲಿ | ಸೆಂಬಡವರ್ | ತ | ತ | ಕ | ತ | ತ | ತ | ತ | ತ | ಕ | ತ | ✓ | ✓ | ✓ | ✓ | – | – | – | – |
| ಕೊಳಂದುವೇಲು | 45 | ವ್ಯಾಪಾರಿ | ಆದಿದ್ರಾವಿಡರ್ | ತ | ತ | ಕ | ತ | ತ | ತ | ತ | ತ | ಕ | ತ | ✓ | ✓ | ✓ | ✓ | – | – | – | – |
| ಕದಿರವೇಲು | 38 | ಕೂಲಿ | ವಡ್ಡಾರ್ | ತ | ತ | ಕ | ತ | ತ | ತ | ತ | ತ | ಕ | ತ | ✓ | ✓ | ✓ | ✓ | – | – | – | – |
| ಲಾರೆನ್ಸ್ | 35 | ಶಿಕ್ಷಕ | ಆದಿದ್ರಾವಿಡರ್ | ತ | ಕ | ಕ | ಕ | ತ | ತ | ಕ | ಕ | ಕ | ತ/ಕ | ✓ | ✓ | ✓ | ✓ | ✓ | ✓ | ✓ | ✓ |
| ವಡಿವೇಲು | 32 | ಖಾಸಗಿ ಕೆಲಸ | ಚಕ್ಕಲಿಯಾರ್ | ತ | ತ | ಕ | ತ | ತ | ತ | ತ | ತ | ಕ | ತ | ✓ | ✓ | ✓ | ✓ | ✓ | ✓ | ✓ | ✓ |
| ಮಂಜುಳ | 22 | ವಿದ್ಯಾರ್ಥಿ | ಆದಿದ್ರಾವಿಡರ್ | ತ | – | – | ತ | ತ | ತ | – | ಕ | ಕ | ತ/ಕ | ✓ | ✓ | ✓ | ✓ | ✓ | ✓ | ✓ | ✓ |
| ಅಂಜಲಿ | 20 | ವಿದ್ಯಾರ್ಥಿ | ಚಕ್ಕಲಿಯಾರ್ | ತ | – | – | – | ತ | ತ | – | ಕ | ಕ | ತ/ಕ | ✓ | ✓ | ✓ | ✓ | ✓ | ✓ | ✓ | ✓ |
| ಕುಮಾರಿ | 19 | ವಿದ್ಯಾರ್ಥಿ | ವಡ್ಡಾರ್ | ತ | – | – | – | ತ | ತ | – | ಕ | ಕ | ಕ | ✓ | ✓ | ✓ | ✓ | ✓ | ✓ | ✓ | ✓ |

೧. ಹಿರಿಯರೊಂದಿಗೆ ೨. ಮಕ್ಕಳೊಂದಿಗೆ ೩. ಮಕ್ಕಳು ಶಾಲೆಯಲ್ಲಿ ಬಳಸುವ ಭಾಷೆ ೪. ಮಕ್ಕಳು ಮನೆಯಲ್ಲಿ ಬಳಸುವ ಭಾಷೆ ೫. ನೆರೆಯವರೊಂದಿಗೆ ೬. ಸಂಬಂಧಿಕರೊಂದಿಗೆ ೭. ಕೆಲಸದ ಸ್ಥಳ ೮. ಮಾರುಕಟ್ಟೆ ೯. ಅಪರಿಚಿತರೊಂದಿಗೆ ೧೦. ಟಿ.ವಿ/ಪತ್ರಿಕೆ ನೋಡುವಾಗ

ಹೊಸಪೇಟೆ ಪರಿಸರದಲ್ಲಿ ಕಾಣಬಹುದು. ಇವರುಗಳು ಸಾಮಾನ್ಯವಾಗಿ ಮೊದಲು ಕಲ್ಲು ಹೊಡೆಯುವ ವೃತ್ತಿಯನ್ನು ಮತ್ತು ಕ್ರಾಂಕ್ರೀಟ್ ಕೆಲಸವನ್ನು ಮಾಡುತ್ತಿದ್ದರು. ಪ್ರಸ್ತುತ ಇವರುಗಳು ಬೇರೆ ಬೇರೆ ಕೆಲಸಗಳನ್ನು ಮಾಡುತ್ತಿದ್ದಾರೆ. ಇಂದಿಗೂ ತಮಿಳು ಭಾಷಿಕರ ಕೆಳವರ್ಗದವರು ಕೂಲಿ ಕೆಲಸ ಮಾಡುತ್ತಿದ್ದಾರೆ. ಈ ವರ್ಗದವರುಗಳು ಹೇಗೆ ತಮ್ಮ ಭಾಷೆಯನ್ನು ವಿವಿಧ ಸಂದರ್ಭಗಳಲ್ಲಿ ಬಳಕೆ ಮಾಡುತ್ತಾರೆ. ಹಾಗೂ ಕನ್ನಡವನ್ನು ಯಾವ ಸಂದರ್ಭಗಳಲ್ಲಿ ಬಳಕೆ ಮಾಡುತ್ತಾರೆ ಎಂಬುದನ್ನು ಕಂಡುಕೊಳ್ಳುವುದು ಇಲ್ಲಿ ಮುಖ್ಯವಾಗಿದೆ. ಇದರೊಂದಿಗೆ ಭಾಷಾಸಂಗೋಪನಾ ಪ್ರಕ್ರಿಯೆ ಹೇಗೆ ನಡೆಯುತ್ತದೆ ಎಂಬುದನ್ನು ಕಂಡುಕೊಂಡಿದೆ.

ಕೋಷ್ಟಕವು ಕೆಳವರ್ಗದ ತಮಿಳು ಭಾಷಿಕರು ಬಳಸುವ ಸಂದರ್ಭಗಳನ್ನು ಕುರಿತು ಮಾಹಿತಿ ನೀಡುತ್ತದೆ. ಈ ಕೋಷ್ಟಕದಲ್ಲಿ ಕೆಳವರ್ಗದ ಆದಿದ್ರಾವಿಡರ್, ಸೆಂಬಡವರ್, ವಡ್ಡಾರ್, ಚಕ್ಕಲಿಯಾರ್ ಜಾತಿಗಳ ಮಾಹಿತಿದಾರರು ತಮಿಳು ಭಾಷೆಯನ್ನು ಬಳಸುವ ಮಾಹಿತಿಯನ್ನು ಸಂಗ್ರಹಿಸಿ ವಿವರಿಸಿದೆ. ಕೋಷ್ಟಕದ ಮಾಹಿತಿಯಂತೆ ಮೊದಲ ನಾಲ್ಕು ಜನ ಮಾಹಿತಿದಾರರಂತೆ ತಮಿಳನ್ನು ಹಿರಿಯರೊಂದಿಗೆ, ಮಕ್ಕಳೊಂದಿಗೆ, ಮನೆಯಲ್ಲಿ ಬಳಸುವ ಭಾಷೆ, ನೆರೆಹೊರೆಯವರೊಂದಿಗೆ, ಸಂಬಂಧಿಕರೊಂದಿಗೆ ಬಳಸುವ ಕುರಿತು ತಿಳಿಸುತ್ತಾರೆ. ಇನ್ನು ಉಳಿದವರು ಎರಡನೇ ಮತ್ತು ಮೂರನೇ ತಲೆಮಾರಿನವರು ಆದ್ದರಿಂದ ಇವರುಗಳು ಹೆಚ್ಚು ಸಂದರ್ಭಗಳಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಇವರೊಂದಿಗೆ ಇನ್ನು ಕೆಲಸದ ಸ್ಥಳಗಳಲ್ಲಿ ತಮಿಳನ್ನು ಮಾತನಾಡುವುದಕ್ಕೆ ಕಾರಣವಿದೆ. ಅಂದರೆ ಈ ವರ್ಗದ ಸಮುದಾಯಗಳು ಕೆಲಸ ಮಾಡುವ ಸ್ಥಳಗಳಿಗೆ ಗುಂಪು ಗುಂಪಾಗಿ ಕೆಲಸಕ್ಕೆ ಹೋಗುವುದರಿಂದ ಇವರುಗಳು ಅಲ್ಲಿಯೂ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಇದರೊಂದಿಗೆ ಮಾರುಕಟ್ಟೆ ಪ್ರದೇಶಗಳಲ್ಲಿ ತಮಿಳು ವ್ಯಾಪಾರಿಗಳ ಹತ್ತಿರ ವ್ಯವಹರಿಸುತ್ತಾರೆ. ಆದ್ದರಿಂದ ಇವರಿಗೆ ಕನ್ನಡದ ಪರಿಸರದಲ್ಲಿಯೂ ತಮಿಳು ಭಾಷೆಯ ವ್ಯಾವಹಾರಿಕ ಸಂದರ್ಭಗಳು ಸಿಗುತ್ತವೆ. ಟಿ. ವಿ. ಚಾನಲ್‌ಗಳಲ್ಲಿ ತಮಿಳು ಭಾಷೆಯ ಚಾನಲ್‌ಗಳನ್ನು ನೋಡುವ ಮೂಲಕ ತಮಿಳು ಭಾಷೆ ಬಳಕೆ ಮಾಡುತ್ತಾರೆ. ಹೀಗೆ ದಿನದ ಅವಧಿಯಲ್ಲಿ ತಮಿಳು ಭಾಷೆಯನ್ನು ಹೆಚ್ಚಾಗಿ ಬಳಕೆ ಮಾಡುತ್ತಾರೆ.

ಈ ಎರಡೂ ವರ್ಗಗಳಲ್ಲಿ ತಮಿಳು ಭಾಷಾ ಬಳಕೆಯನ್ನು ಗಮನಿಸಿದಾಗ ಕೆಳವರ್ಗದವರಿಗಿಂತ ಕಡಿಮೆ ಸಂದರ್ಭಗಳಲ್ಲಿ ಉನ್ನತ ವರ್ಗದವರು ತಮಿಳು ಭಾಷೆಯನ್ನು ಬಳಕೆ ಮಾಡುವುದು ಕಂಡುಬರುತ್ತದೆ. ಅಂದರೆ ಕೆಳವರ್ಗದವರು ಬಹುತೇಕ ಸಂದರ್ಭಗಳಲ್ಲಿ ತಮಿಳನ್ನು ಬಳಕೆ ಮಾಡುತ್ತಾರೆ. ಅದರಲ್ಲೂ ಕನ್ನಡದ ಪರಿಸರದಲ್ಲಿ ಕೆಲಸಕ್ಕೆ ಹೋದಾಗಲೂ, ಮಾರುಕಟ್ಟೆಗೆ ಭೇಟಿ ನೀಡಿದಾಗಲೂ ಇವರುಗಳು ತಮಿಳು ಭಾಷಾ ಬಳಕೆ ಮಾಡುತ್ತಾರೆ ಉನ್ನತವರ್ಗದವರುಗಳು ತಮಿಳನ್ನು ಸೀಮಿತ ಸಂದರ್ಭಗಳಲ್ಲಿ ಮಾತನಾಡುತ್ತಾರೆ. ಅದರಲ್ಲಿ ತಮ್ಮ ಹಿರಿಯರೊಂದಿಗೆ ಹೆಚ್ಚು. ಆದರೆ ಕೆಳವರ್ಗಗಳಲ್ಲಿ ಈ ರೀತಿಯ ಸೀಮಿತ ಸಂದರ್ಭಗಳಿಗೆ ತಮಿಳು ಭಾಷಾ ಬಳಕೆ ಮಾಡುವ ಸನ್ನಿವೇಶಗಳಿಲ್ಲ. ಉನ್ನತ ವರ್ಗದವರುಗಳು

ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಕನ್ನಡದ ಪರಿಸರದಲ್ಲಿ ಉನ್ನತ ಸ್ಥಾನವನ್ನು ಪಡೆದಿರುವುದರಿಂದ ಅವರುಗಳು ಕನ್ನಡವನ್ನು ನೇರವಾಗಿ ಬಳಕೆ ಮಾಡುವ ಮತ್ತು ತಮ್ಮ ನಿತ್ಯದ ಬದುಕಿನ ಕೆಲವು ಸಂದರ್ಭಗಳಲ್ಲಿ ಕನ್ನಡ ಬಳಕೆ ಮಾಡುವುದನ್ನು ಕಾಣಬಹುದು. ಮಕ್ಕಳೊಂದಿಗೆ, ನೆರೆಹೊರೆಯವರೊಂದಿಗೆ ಸಂಬಂಧಿಕರೊಂದಿಗೆ ಕನ್ನಡ ಬಳಕೆ ಮಾಡುತ್ತಾರೆ. ಇವರ ಮಕ್ಕಳು ಸಹ ಖಾಸಗಿ ಶಾಲೆಗಳಲ್ಲಿ ಇಂಗ್ಲಿಷ್ ಮಾಧ್ಯಮ ಅಥವಾ ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಮಾಡುತ್ತಿರುವುದರಿಂದ ತಮಿಳು ಭಾಷಾಬಳಕೆಯನ್ನು ಕೆಳವರ್ಗದವರಿಗೆ ಹೋಲಿಸಿದರೆ ಕಡಿಮೆ ಪ್ರಮಾಣದಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಆದರೆ ಕೆಳವರ್ಗದವರು ತಾವುಗಳು ವಾಸಿಸುವ ಸ್ಥಳಗಳಲ್ಲಿಯೂ ತಮಿಳು ಬಳಕೆಯಿಂದ ಕೂಡಿರುತ್ತದೆ. ಮನೆಯ ಆವರಣದಲ್ಲಿಯೂ ತಮಿಳನ್ನು ಬಳಕೆ ಮಾಡುತ್ತಾರೆ. ಇವರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿ ಇಲ್ಲದ ಕಾರಣ ಕನ್ನಡದ ಪರಿಸರದಲ್ಲಿ ಕೂಲಿ ಅಥವಾ ಕೆಳಹಂತದ ಕೆಲಸಗಳಲ್ಲಿ ತೊಡಗಿಕೊಂಡಿದ್ದಾರೆ. ಇವರಿಗೆ ಕನ್ನಡದ ಪರಿಸರವು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಇನ್ನು ಮುಕ್ತವಾಗಿ ತೆರೆದುಕೊಂಡಿಲ್ಲ. ಆದ ಕಾರಣ ಇವರುಗಳು ಕನ್ನಡ ಪರಿಸರದಲ್ಲಿ ಇದ್ದರೂ ಕೆಲವೇ ಕೆಲವು ಹಂತಗಳಲ್ಲಿ ಅಥವಾ ಸಂದರ್ಭಗಳಲ್ಲಿ ಕನ್ನಡವನ್ನು ಬಳಕೆ ಮಾಡುತ್ತಿದ್ದಾರೆ. ಇದರೊಂದಿಗೆ ಇವರು ಭಾಗವಹಿಸುವ ಸಂದರ್ಭಗಳಲ್ಲಿ ತಮಿಳು ಹೆಚ್ಚು ಬಳಕೆ ಮಾಡುವುದರಿಂದ ಇವರ ಮಕ್ಕಳು ತಮಿಳನ್ನು ಹೆಚ್ಚು ರೂಢಿಸಿಕೊಂಡು ಕಲಿಯುತ್ತಾರೆ. ದಿನದ ಭಾಷಾಬಳಕೆಯ ಸಂದರ್ಭದಲ್ಲಿ ತಮಿಳನ್ನು ಹೆಚ್ಚು ಬಳಸುತ್ತಾರೆ. ಕೆಳವರ್ಗದ ತಮಿಳು ಭಾಷಿಕರು ಸಾಂಸ್ಕೃತಿಕವಾಗಿ ತಮ್ಮ ಮೂಲ ಸ್ಥಳಗಳೊಂದಿಗೆ ಹೆಚ್ಚು ನಂಟು ಹೊಂದಿರುವ ಕಾರಣಕ್ಕೆ ಇವರು ತಮಿಳು ಭಾಷೆಯ ಬಳಕೆಗೆ ಹೆಚ್ಚು ಸಹಕಾರಿಯಾಗಿದೆ.

ಒಟ್ಟಾರೆಯಾಗಿ ಉನ್ನತ ವರ್ಗದವರ ತಮಿಳು ಭಾಷಾಬಳಕೆಯ ಸಂದರ್ಭಗಳು ಕನ್ನಡದ ಪರಿಸರದೊಂದಿಗೆ ಹೊಂದಿಕೊಂಡಿರುವ ಕಾರಣಕ್ಕೆ ಕಡಿಮೆಯಾಗುತ್ತಿದೆ. ಆದರೆ ಕೆಳವರ್ಗಗಳಲ್ಲಿ ಇನ್ನು ತಮಿಳು ಭಾಷಾಬಳಕೆಯ ಸಂದರ್ಭಗಳು ಹೆಚ್ಚಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ಕೆಳವರ್ಗದವರು ಇನ್ನು ಕನ್ನಡ ಪರಿಸರದಲ್ಲಿ ಪೂರ್ಣ ಪ್ರಮಾಣದಲ್ಲಿ ಸಮೀಕರಣಗೊಳ್ಳದೇ ಇರುವ ಕಾರಣಕ್ಕೆ ಭಾಷಾಬಳಕೆಯು ಹೆಚ್ಚಿದ್ದು, ಮುಂದಿನ ತಲೆಮಾರಿಗೆ ಭಾಷೆಯನ್ನು ಸಂಗೋಪನೆ ಮಾಡುತ್ತಿದ್ದಾರೆ.

### ೫.೪. ತಮಿಳು ಭಾಷಾದ್ವೀಪಗಳಲ್ಲಿ ಕನ್ನಡ ದ್ವಿಭಾಷಿಕ ನಂಟು

ಪ್ರತಿ ಭಾಷಿಕರು ಬೇರೆ ಬೇರೆ ಕಾರಣಕ್ಕೆ ಎರಡು ಅಥವಾ ಎರಡಕ್ಕಿಂತ ಹೆಚ್ಚಿನ ಭಾಷಾ ಸಂಪರ್ಕವನ್ನು ಹೊಂದಿರುತ್ತಾರೆ. ಇಲ್ಲಿ ಒಂದು ಭಾಷೆಯು ಮೂಲ ಭಾಷೆಯಾಗಿ ಇನ್ನೊಂದು ಭಾಷೆಯ ವ್ಯಾವಹಾರಿಕ ಭಾಷೆಯಾಗಿ ಅಥವಾ ಪರಿಸರದ ಭಾಷೆಯಾಗಿರುತ್ತದೆ. ಹೀಗೆ ಭಾಷಿಕ ಪರಿಸರದ ಒತ್ತಡಗಳು ಹೆಚ್ಚಿದಂತೆಲ್ಲಾ ಬೇರೆ ಬೇರೆ ಭಾಷೆಗಳ ಬಳಕೆಯು ಹೆಚ್ಚುತ್ತಿರುತ್ತದೆ. ಇಂತಹ ಭಾಷಾ ಪರಿಸ್ಥಿತಿಯನ್ನು ಭಾಷಾದ್ವೀಪಗಳಲ್ಲಿ ಕಾಣಬಹುದು. ಅಂದರೆ ವಲಸೆ ಮೂಲಕ ಕನ್ನಡದ ಪರಿಸರದಲ್ಲಿ ಬಂದು ನೆಲೆಸಿರುವ ತಮಿಳು ಭಾಷಿಕರು ಬೇರೆ ಬೇರೆ ಕಾರಣಕ್ಕೆ ಕನ್ನಡವನ್ನು ಮತ್ತು ಇತರೆ ಭಾಷೆಗಳನ್ನು ಕಲಿತು ಬಳಕೆ ಮಾಡುತ್ತಿದ್ದಾರೆ.

ಭಾಷಾದ್ವೀಪಗಳಲ್ಲಿನ ಜನರು ತಮಿಳು ಭಾಷೆಯನ್ನು ಮನೆ ಮತ್ತು ಆವರಣದ ಭಾಷೆಯಾಗಿಯೂ ಬಳಕೆ ಮಾಡುತ್ತಾರೆ. ಆದರೆ ಸಾಮಾಜಿಕ ಭಾಷೆಯಾಗಿ ಮತ್ತೊಂದು ಭಾಷೆಯನ್ನು ಬಳಕೆ ಮಾಡುತ್ತಿರುತ್ತಾರೆ. ಈ ರೀತಿಯ ಸಾಮಾಜಿಕ ಭಾಷೆಯ ಬಳಕೆಯಲ್ಲಿ ಕೆಲವೇ ಭಾಷಿಕರು ಮಾತ್ರ ಸೀಮಿತವಾಗಿರುತ್ತಾರೆ. ಅದಕ್ಕೆ ಬೇರೆ ಬೇರೆ ಕಾರಣಗಳಿವೆ. ಆದರೆ ಭಾಷಿಕ ಸಮುದಾಯವೊಂದು ತನ್ನ ಮೂಲ ಭಾಷೆಯನ್ನು ಬಳಕೆ ಮಾಡುವುದರೊಂದಿಗೆ ಮತ್ತೊಂದು ಭಾಷೆಯನ್ನು ರೂಢಿಸಿಕೊಳ್ಳುವ ಅವಶ್ಯಕತೆ ಏಕಿದೆ? ಯಾವ ಸಂದರ್ಭ/ಪರಿಸರಗಳಲ್ಲಿ ದ್ವಿಭಾಷಿಕತೆಯನ್ನು ರೂಢಿಸಿಕೊಳ್ಳುತ್ತಾರೆ.? ಅದರಲ್ಲೂ ಭಾಷಾದ್ವೀಪಗಳಲ್ಲಿ ಇರುವಂತಹ ಯಾವ ವಯಸ್ಸಿನವರು/ತಲೆಮಾರಿನವರು ಕನ್ನಡ ಅಥವಾ ಬೇರೆ ಭಾಷೆಯನ್ನು ದ್ವಿಭಾಷಿಕತೆಯಾಗಿ ರೂಢಿಸಿಕೊಳ್ಳುತ್ತಾರೆ ಎಂಬುದನ್ನು ತಿಳಿಯುವುದು ಈ ಉಪ ಘಟಕದ ಉದ್ದೇಶವಾಗಿದೆ.

**ದ್ವಿಭಾಷಿಕರು ಎಂದರೆ**

ದ್ವಿಭಾಷಿಕರು ಕುರಿತು ಹಲವು ಭಾಷಾ ವಿದ್ವಾಂಸರು ವಿವರಣೆ ನೀಡಿದ್ದಾರೆ. ಬ್ಲೂಮ್‌ಫೀಲ್ಡ್(೧೯೩೩): "ತನ್ನ ಮಾತೃಭಾಷೆಯ ಮೇಲೆ ತೋರುವಂಥದೇ ಪ್ರಭುತ್ವವನ್ನು ಎರಡನೆಯ ಭಾಷೆಯ ಮೇಲು ತೋರಬಲ್ಲ ವ್ಯಕ್ತಿಯೇ ದ್ವಿಭಾಷಿಕನೆನಿಸಿಕೊಳ್ಳುತ್ತಾನೆ." ಮಾಕನ್‌ಮಾರ್: "ಎರಡನೆಯ ಭಾಷೆಯಲ್ಲಿ ಓದುವ, ಬರೆಯುವ, ಮಾತನಾಡುವ ಹಾಗೂ ಅರ್ಥ ಮಾಡಿಕೊಳ್ಳಬಲ್ಲ ಈ ನಾಲ್ಕು ತೆರನಾದ ಸಾಮರ್ಥ್ಯಗಳಲ್ಲಿ ಯಾವುದೊಂದರಲ್ಲಿಯಾದರೂ ಪರಿಣಿತನಾಗಿದ್ದರೆ ದ್ವಿಭಾಷಿಕನೆಂದೂ ಕರೆಯಬಹುದು." ವೆಯನ್‌ರಿಖ್(೧೯೫೩): "ಒಂದು ಭಾಷೆಯ ಜೊತೆ-ಜೊತೆಗೆ ಇನ್ನೊಂದು ಭಾಷೆಯನ್ನು ಬಳಸುವ ರೂಢಿಯೇ ದ್ವಿಭಾಷಿಕತೆ." ಹೀಗೆ ದ್ವಿಭಾಷಿಕತೆ ಕುರಿತು ಹಲವರು ಅಧ್ಯಯನ ಮಾಡಿ ತಮ್ಮ ನಿಲುವುಗಳನ್ನು ತಿಳಿಸಿದ್ದಾರೆ.

ದ್ವಿಭಾಷಿಕರ ಕುರಿತು ಒಟ್ಟಾರೆಯಾಗಿ ಹೇಳುವುದಾದರೆ ವ್ಯಕ್ತಿಯೊಬ್ಬನು ತಮ್ಮ ಮೂಲ ಭಾಷೆಯೊಂದಿಗೆ ಮತ್ತೊಂದು ಪರಿಸರದ ಭಾಷೆಯನ್ನು ಕಲಿತು ಬಳಸುವವರನ್ನು ದ್ವಿಭಾಷಿಕರು ಎನ್ನುಬಹುದು. ಇನ್ನು ಭಾರತದಲ್ಲಿ ದ್ವಿಭಾಷಿಕರ ಕುರಿತು ಹಲವು ಅಧ್ಯಯನಗಳು ನಡೆದಿವೆ. ಉದಾ: ವೆಯೆನ್‌ರಿಖ್(೧೯೫೭), ಗುಂಫರ್ಜ್(೧೯೫೮), ಖಬ್‌ಚಂದಾನಿ(೧೯೭೧), ಆಪ್ಟೆ(೧೯೭೪) ಇತರರನ್ನು ಕಾಣಬಹುದು. ಕರ್ನಾಟಕದಲ್ಲೂ ಸಹ ದ್ವಿಭಾಷಿಕರ ಕುರಿತ ಅಧ್ಯಯನಗಳು ನಡೆದಿವೆ. ಪರಮೇಶ್ವರ ಭಟ್ಟ ಅವರ ಕೋಲಾರ ಜಿಲ್ಲೆಯ ಕನ್ನಡ ತೆಲುಗು ದ್ವಿಭಾಷಿಕತೆ, ಕೆ. ನಾರಾಯಣಸ್ವಾಮಿ ಅವರ ಕೋಲಾರ ಜಿಲ್ಲೆಯ ದ್ವಿಭಾಷಿಕ ನೆಲೆಗಳು, ಎಂ. ಭಾಗ್ಯಲಕ್ಷ್ಮಿ ಅವರ ಬಳ್ಳಾರಿ ಜಿಲ್ಲೆಯ ತೆಲುಗು-ಕನ್ನಡ ದ್ವಿಭಾಷಿಕತೆ: ಸಮಾಜೋಭಾಷಿಕ ಅಧ್ಯಯನ, ಎಸ್. ಎಸ್. ಅಂಗಡಿಯವರು ಕನ್ನಡ ಮರಾಠಿ ದ್ವಿಭಾಷಿಕತೆಯ ಕುರಿತು ಅಧ್ಯಯನ ಮಾಡಿದ್ದಾರೆ.

ಒಂದು ಭಾಷೆಗಿಂತ ಹೆಚ್ಚು ಭಾಷೆಗಳು ಬಳಸುವ ಅನಿವಾರ್ಯ, ಅವಶ್ಯಕತೆ ವ್ಯಕ್ತಿ ವ್ಯಕ್ತಿಗಳ ನಡುವೆ ಎಂದು ಉಂಟಾಯಿತೋ ಅಂದೇ ದ್ವಿಭಾಷಿಕತೆ ಪ್ರಾರಂಭವಾಗಿರಬಹುದು. ಹಲವು ಭಾಷೆಗಳನ್ನು ಬಳಸುವ

ಭಾಷಾ ಸಮುದಾಯದಲ್ಲಿ ದ್ವಿಭಾಷಿಕತೆಯ ಇರುವಿಕೆಯನ್ನು ಗುರುತಿಸಬಹುದು. ದ್ವಿಭಾಷಿಕತೆ ಬಳಕೆಯು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ, ಜಾತಿಯಿಂದ ಜಾತಿಗೆ, ವ್ಯಕ್ತಿಯಿಂದ ವ್ಯಕ್ತಿಗೆ ಬೇರೆ ಬೇರೆಯಾಗಿರುತ್ತದೆ.

ಕನ್ನಡದಲ್ಲಿ ದ್ವಿಭಾಷಿಕತೆಯನ್ನು ಕುರಿತು ಚರ್ಚಿಸಿರುವ ಕೆ. ವಿ. ನಾರಾಯಣರು ದ್ವಿಭಾಷಿಕರನ್ನು ನಾಲ್ಕು ಭಾಷಾ ಕೌಶಲ್ಯಗಳ ಬಳಕೆಯ ಹಿನ್ನೆಲೆಯಿಂದ ಅರೆದ್ವಿಭಾಷಿಕರು ಎಂದು ಹೇಳುತ್ತಾರೆ. ಹೀಗೆ ದ್ವಿಭಾಷಿಕತೆಯ ಕುರಿತು ಚರ್ಚೆಗಳನ್ನು ಕಾಣಬಹುದು. ಭಾಷಾದ್ವೀಪಗಳಲ್ಲಿ ಈ ರೀತಿಯ ಅರೆದ್ವಿಭಾಷಿಕರು ಇರುವುದು ಕಾಣಬಹುದು. ಅಂದರೆ ಕನ್ನಡವನ್ನು ಅಥವಾ ತಮಿಳನ್ನು ಗ್ರಹಿಸಲು ಮತ್ತು ಮಾತನಾಡಲು ಬರುತ್ತದೆ. ಇನ್ನುಳಿದಂತೆ ಬರೆಯಲು ಮತ್ತು ಓದಲು ಬರುವುದಿಲ್ಲ. ಇದಕ್ಕೆ ಅರೆದ್ವಿಭಾಷಿಕರು ಎಂದು ಕರೆಯುತ್ತಾರೆ. ಹೀಗೆ ದ್ವಿಭಾಷಿಕರ ಸ್ವರೂಪವನ್ನು ಭಾಷಾದ್ವೀಪಗಳಲ್ಲಿ ಕಾಣಬಹುದು.

**ದ್ವಿಭಾಷಿಕ ನಂಟು ಹೊಂದಲು ಇರುವ ಕಾರಣಗಳು**

ತಮಿಳು ಭಾಷಾದ್ವೀಪಗಳಲ್ಲಿ ತಮಿಳು ಭಾಷಿಕರು ಕನ್ನಡವನ್ನು ಅಥವಾ ಬೇರೆ ಭಾಷೆಯನ್ನು ಎರಡನೇ ಭಾಷೆಯಾಗಿ ಕಲಿಯುವ ಸಂದರ್ಭಗಳು ಇವೆ. ಬೇರೆ ಭಾಷೆಗಳನ್ನು ಕಲಿಯುವಲ್ಲಿ ಸಾಮಾಜಿಕ ಒತ್ತಡಗಳು ಕಾರ್ಯನಿರ್ವಹಿಸುತ್ತವೆ. ಈ ರೀತಿಯ ಒತ್ತಡಗಳನ್ನು ಕನ್ನಡದ ಪರಿಸರದಿಂದ ಪ್ರಭಾವಿತವಾಗಿರುತ್ತವೆ. ಅಂದರೆ ಕನ್ನಡದ ಪರಿಸರದಲ್ಲಿ ತಮ್ಮ ದಿನನಿತ್ಯದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು, ಸಾಮಾಜಿಕವಾಗಿ ಕನ್ನಡ ಪರಿಸರದಲ್ಲಿ ಭಾಗವಹಿಸಲು ಕನ್ನಡವನ್ನು ಅಥವಾ ಬೇರೆ ಭಾಷೆಯನ್ನು ಕಲಿಯುವ ಅವಶ್ಯಕತೆಯಿದೆ. ಹೀಗೆ ಬೇರೆ ಭಾಷೆಯಗಳನ್ನು ಕಲಿಯುವಲ್ಲಿ ಇರುವ ಸಾಮಾಜಿಕ ಒತ್ತಡಗಳು ಈ ಕೆಳಗಿನಂತಿವೆ.

| ಕ್ರ ಸಂ. | ಸಾಮಾಜಿಕ ಒತ್ತಡಗಳು | ಮಾಹಿತಿದಾರರ ಸಂಖ್ಯೆ | ಶೇಕಡವಾರು |
|---|---|---|---|
| ೦೧ | ಸಾಮಾನ್ಯವಾಗಿ/ಪರಿಸರದಿಂದ | ೪೮ | ೨೪% |
| ೦೨ | ಮಾರುಕಟ್ಟೆಗಳಲ್ಲಿ ವ್ಯವಹರಿಸಲು | ೩೨ | ೧೬% |
| ೦೩ | ಸರ್ಕಾರಿ ಸೇನ್ನು ಪಡೆಯಲು/ಸರ್ಕಾರಿ ಕಛೇರಿಗಳಲ್ಲಿ ವ್ಯವಹರಿಸಲು | ೨೦ | ೧೦% |
| ೦೪ | ಆರ್ಥಿಕ ಚಟುವಟಿಕೆಗಳಲ್ಲಿ ಭಾಗವಹಿಸಲು | ೩೨ | ೧೬% |
| ೦೫ | ಶಿಕ್ಷಣದಿಂದಾಗಿ | ೬೮ | ೩೪% |

ಕೋಷ್ಟಕದ ಮಾಹಿತಿಯು ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರು ಕನ್ನಡವನ್ನು ಯಾವ ಯಾವ ಕಾರಣಗಳಿಗೆ ಕಲಿಯುತ್ತಾರೆ ಎಂಬ ಮಾಹಿತಿಯನ್ನು ಸಂಗ್ರಹಿಸಿದೆ. ಒಟ್ಟು ೨೦೦ ಜನ ಮಾಹಿತಿದಾರರಲ್ಲಿ ವಿವಿಧ ವರ್ಗದ, ವಿವಿಧ ವಯೋಮಾನದವರು, ವಿದ್ಯಾರ್ಥಿಗಳು ಸೇರಿದ್ದಾರೆ. ಇವರು ಕನ್ನಡದ ಪರಿಸರದಲ್ಲಿ ಬೇರೆ ಬೇರೆ ಕಾರಣಕ್ಕಾಗಿ ಭಾಗವಹಿಸುವುದರಿಂದ ಕನ್ನಡವನ್ನು ಕಲಿಯುವುದು ಅನಿವಾರ್ಯವಾಗಿದೆ. ಈ ಅನಿವಾರ್ಯಗಳು ಸಾಮಾಜಿಕ ಕಾರಣಗಳಾಗಿದ್ದರು ಅವುಗಳು ಸಾಮಾಜಿಕ ಒತ್ತಡಗಳಾಗಿ ಕಾರ್ಯನಿರ್ವಹಿಸುತ್ತವೆ. ಕೋಷ್ಟಕದಲ್ಲಿ ಸಾಮಾನ್ಯವಾಗಿ/ಪರಿಸರದಿಂದ ಕನ್ನಡವನ್ನು ಕಲಿತೆವು

ಎಂದು ಶೇ.೨೪ರಷ್ಟು ಮಾಹಿತಿದಾರರು ತಿಳಿಸಿದ್ದಾರೆ. ಇಲ್ಲಿ ಸಾಮಾನ್ಯವಾಗಿ/ಪರಿಸರದಿಂದ ಎಂದರೆ ನೆರೆಯವರೊಂದಿಗೆ ಮಾತನಾಡಲು, ಕನ್ನಡ ಪರಿಸರದಲ್ಲಿ ತಮ್ಮ ಅವಶ್ಯಕತೆಗಳನ್ನು ಪಡೆಯುವಲ್ಲಿ ಅಪರಿಚಿತರೊಂದಿಗೆ ಮಾತನಾಡುವಾಗ ಕನ್ನಡವನ್ನು ಅವಶ್ಯಕವಾಗಿ ಬಳಸಬೇಕಾಗುತ್ತದೆ. ಆದ್ದರಿಂದ ಕನ್ನಡವನ್ನು ಕಲಿತಿದ್ದೇವೆ ಎಂದು ತಿಳಿಸುತ್ತಾರೆ. ಇನ್ನು ಮಾರುಕಟ್ಟೆಗಳಲ್ಲಿ ವ್ಯವಹಾರ ನಡೆಸಲು ಎಂದು ಶೇ.೧೬ರಷ್ಟು ಮಾಹಿತಿದಾರರು ಮಾಹಿತಿ ನೀಡಿದ್ದಾರೆ. ಇಲ್ಲಿ ಮಾರುಕಟ್ಟೆ ಎಂದರೆ ವಾಣಿಜ್ಯ ಮಳಿಗೆಗಳಲ್ಲಿ, ತರಕಾರಿ ಮಾರುಕಟ್ಟೆಗಳಲ್ಲಿ, ಹೂವಿನ ಮಾರುಕಟ್ಟೆಗಳಲ್ಲಿ ವ್ಯವಹರಿಸಲು ಕನ್ನಡವನ್ನು ಕಲಿತಿರುವುದಾಗಿ ತಿಳಿಸುತ್ತಾರೆ. ಇವರುಗಳು ಕನ್ನಡವನ್ನು ಸಾಮಾಜಿಕ ಅವಶ್ಯಕತೆಗಾಗಿ ಕಲಿತಿರುವುದಾಗಿ ತಿಳಿಸುತ್ತಾರೆ. ಇನ್ನು ಸರ್ಕಾರಿ ಸೇವೆಗಳನ್ನು ಪಡೆಯಲು ಮತ್ತು ಸರ್ಕಾರಿ ಕಛೇರಿಗಳಲ್ಲಿ ವ್ಯವಹರಿಸಲು ಕನ್ನಡವನ್ನು ಕಲಿತಿರುವುದಾಗಿ ತಿಳಿಸುತ್ತಾರೆ. ಅಂದರೆ ಕೆಲವು ತಮಿಳು ಭಾಷಿಕರು ಕನ್ನಡದ ಪರಿಸರದಲ್ಲಿ ಆಡಳಿತ ಭಾಷೆಯಾಗಿ ಕನ್ನಡ ಇರುವುದರಿಂದ ಇವರುಗಳು ಕನ್ನಡದ ಆಡಳಿತ ಕಛೇರಿಗಳಲ್ಲಿ ಸೌಲಭ್ಯಗಳನ್ನು ಪಡೆಯಲು ಕನ್ನಡವನ್ನು ಕಲಿತಿರುವುದಾಗಿ ತಿಳಿಸುತ್ತಾರೆ. ಆಡಳಿತ ಕಛೇರಿಗಳಲ್ಲಿ ಅಧಿಕಾರಿಗಳೊಂದಿಗೆ ವ್ಯವಹರಿಸುವಾಗ ಕನ್ನಡ ಅಗತ್ಯ ಎಂದು ತಿಳಿಸುತ್ತಾರೆ. ಕೆಲವು ಅಧಿಕಾರಿಗಳು ತಮಿಳನ್ನು ಬಳಸಿದಾಗ ಅವರು ಸರಿಯಾದ ಪ್ರತಿಕ್ರಿಯೆ ನೀಡುವುದಿಲ್ಲ. ಇದರಿಂದಾಗಿ ನಾವುಗಳು ಕನ್ನಡವನ್ನು ಕಲಿಯಲು ಪ್ರಾರಂಭಿಸಿದೆವು ಎನ್ನುತ್ತಾರೆ. ಆರ್ಥಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ಎಂದು ಶೇ.೧೬ರಷ್ಟು ಮಾಹಿತಿದಾರರು ತಿಳಿಸುತ್ತಾರೆ. ಈ ಕಾರಣವನ್ನು ಸಾಮಾಜಿಕ ಒತ್ತಡ ಎಂದರೆ ಆರ್ಥಿಕ ನೆಲೆಯಿಂದಾಗಿ ಕನ್ನಡವನ್ನು ಕಲಿಯುವ ಒತ್ತಡವಿರುತ್ತದೆ. ಅಂದರೆ ತಮಿಳು ಭಾಷಿಕರು ಹಲವು ವ್ಯಾವಹಾರಿಕ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದಾರೆ, ಅವರುಗಳು ಕನ್ನಡದ ಜನರೊಂದಿಗೆ ವ್ಯವಹರಿಸುವಾಗ ಕನ್ನಡವನ್ನು ಬಳಸ ಬೇಕಾಗುತ್ತದೆ. ಈ ರೀತಿಯ ವ್ಯಾವಹಾರಿಕ ಚಟುವಟಿಕೆಗಳಲ್ಲಿ ಭಾಗವಹಿಸಿರುವ ತಮಿಳರು ತಮ್ಮ ಜೀವನವನ್ನು ಈ ಆರ್ಥಿಕ ಚಟುವಟಿಕೆಗಳಿಂದ ಆಧಾರವಾಗಿರುವ ಕಾರಣ ಇವರುಗಳು ಕನ್ನಡವನ್ನು ವ್ಯಾವಹಾರಿಕ ಕಾರಣಕ್ಕೆ ಕಲಿತಿದ್ದಾರೆ. ಈ ಮಾಹಿತಿದಾರರು ಹೆಚ್ಚಾಗಿ ಹೂವಿನ ಮಾರುಕಟ್ಟೆ, ತರಕಾರಿ ಮಾರುಕಟ್ಟೆ, ಅಂಗಡಿ, ಹೋಟೆಲ್‌ಗಳಲ್ಲಿ ಇರುವುದು ಹೆಚ್ಚಾಗಿ ಕಂಡುಬರುತ್ತಾರೆ. ಶಿಕ್ಷಣದಿಂದಾಗಿ ಶೇ. ೩೪%ರಷ್ಟು ಮಾಹಿತಿದಾರರು ಕನ್ನಡವನ್ನು ಕಲಿತಿರುವುದಾಗಿ ತಿಳಿಸುತ್ತಾರೆ. ಅಂದರೆ ಇದರಲ್ಲಿ ಮೂರನೇ ತಲೆಮಾರಿನವರು ಮತ್ತು ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿದ್ದು, ಪರಿಸರದಲ್ಲಿಯೂ ಕಲಿತು ಮತ್ತು ಔಪಚಾರಿಕ ಶಿಕ್ಷಣದ ಮೂಲಕ ಕನ್ನಡವನ್ನು ಕಲಿತಿರುವುದಾಗಿ ತಿಳಿಸುತ್ತಾರೆ. ಇಲ್ಲಿ ಕನ್ನಡವನ್ನು ಕಲಿಕೆಯ ಭಾಷೆಯಾಗಿ ಕಲಿತು ನಂತರದಲ್ಲಿ ಪರಿಸರದ ಭಾಷೆಯಾಗಿ ಬಳಸುತ್ತಿದ್ದೇವೆ ಎನ್ನುತ್ತಾರೆ.

ಹೀಗೆ ಕನ್ನಡವನ್ನು ತಮಿಳು ಭಾಷಿಕರು ಬೇರೆ ಬೇರೆ ಕಾರಣಗಳಿಗೆ ಕಲಿತಿರುವುದು ಕಂಡು ಬಂದರೂ, ಮಾರುಕಟ್ಟೆಗಳಲ್ಲಿ ವ್ಯವಹಾರ ನಡೆಸಲು, ಸರ್ಕಾರಿ ಕಛೇರಿಗಳಲ್ಲಿ ಸೌಲಭ್ಯಗಳನ್ನು ಪಡೆಯಲು ಆರ್ಥಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ಎಂದು ತಿಳಿಸುತ್ತಾರೆ. ಇವೆಲ್ಲವು ಕನ್ನಡದ ಪರಿಸರದಿಂದ ಸಾಮಾಜಿಕವಾಗಿ ಕನ್ನಡವನ್ನು ಬಳಸಲೇಬೇಕೆಂಬ ಎಂಬ ಒತ್ತಡಗಳು. ಈ ರೀತಿಯ ಒತ್ತಡಗಳು ಎಲ್ಲಿಯೂ

ಕಡ್ಡಾಯವಾಗಿ ಕಾಣುವುದಿಲ್ಲ. ಆದರೆ ಇವುಗಳನ್ನು ಪಾಲಿಸದೇ ಹೋದರೆ ನಾವುಗಳು ನಷ್ಟವನ್ನು ಅನುಭವಿಸುವಂತಾಗುತ್ತದೆ ಎಂದು ಮಾಹಿತಿದಾರರು ತಿಳಿಸುತ್ತಾರೆ. ಹೀಗೆ ಅನ್ಯಭಾಷಿಕ ಪರಿಸರದಲ್ಲಿ ವಾಸಿಸುವವರು ಬೃಹತ್ ಭಾಷಿಕ ಪರಿಸರದಿಂದ ಒಂದಲ್ಲಾ ಒಂದು ಒತ್ತಡಗಳಿಗೆ ಒಳಗಾಗಿ ಬೃಹತ್ ಭಾಷಿಕ ಪರಿಸರದ ಭಾಷೆಯನ್ನು ಕಲಿತು ಬಳಸಬೇಕಾಗುತ್ತದೆ.

**ಕನ್ನಡ-ತಮಿಳು ದ್ವಿಭಾಷಿಕತೆ ಪರಿಸರಗಳು:**

ಹಿರಿಯೂರು ಪರಿಸರದಲ್ಲಿ ಕನ್ನಡ-ತಮಿಳು, ಕನ್ನಡ-ಹಿಂದಿ/ಉರ್ದು, ಕನ್ನಡ-ಇಂಗ್ಲಿಷ್ ಭಾಷೆಗಳ ದ್ವಿಭಾಷಿಕತೆಯನ್ನು ಕಾಣಬಹುದು. ಆದೇ ರೀತಿಯಲ್ಲಿ ಹೊಸಪೇಟೆ ಪರಿಸರದಲ್ಲಿ ಕನ್ನಡ-ತೆಲುಗು, ಕನ್ನಡ-ತಮಿಳು, ಕನ್ನಡ-ಹಿಂದಿ, ಕನ್ನಡ-ಉರ್ದು, ಮರಾಠಿ ಇತರೆ ಭಾಷೆಗಳ ದ್ವಿಭಾಷಿಕತೆಯನ್ನು ಕಾಣಬಹುದು. ಅನೇಕ ಭಾಷಿಕರು ಗುಂಪಾಗಿ ಸೇರಿ ವಾಸಿಸುವುದರಿಂದ ಅಥವಾ ವ್ಯವಹರಿಸುವುದರಿಂದ ಈ ಭಾಷಿಕರ ಪರಿಸರಗಳು ರೂಢಿಯಾಗಿವೆ. ಹೊಸಪೇಟೆ ಪರಿಸರದಲ್ಲಿ ಆಂಧ್ರಪ್ರದೇಶದ ಗಡಿಭಾಗವಾಗಿರುವುದರಿಂದ ಸಾಮಾನ್ಯವಾಗಿ ತೆಲುಗು ಬಳಕೆಯಲ್ಲಿದೆ. ಆದರೆ ಹಿಂದಿ, ಉರ್ದು, ಮರಾಠಿ ಭಾಷೆಗಳು ವಲಸೆ ಮತ್ತು ಜಾಗತಿಕ ಪರಿಣಾಮದಿಂದಾಗಿ ರೂಢಿಯಾಗಿವೆ. ಹಿರಿಯೂರು ಪರಿಸರದಲ್ಲಿ ಕನ್ನಡದೊಂದಿಗೆ ತೆಲುಗು ಭಾಷೆಯನ್ನು ರೆಡ್ಡಿ, ನಾಯಕ, ಸಮುದಾಯಗಳು ಬಳಕೆ ಮಾಡುತ್ತವೆ. ಇವರು ಕನ್ನಡ ತೆಲುಗು ದ್ವಿಭಾಷಿಕರಾಗಿದ್ದಾರೆ. ಕನ್ನಡ-ಹಿಂದಿಯನ್ನು ಪಂಜಾಬ್ ರಾಜಸ್ಥಾನ, ಗುಜರಾತಿನಿಂದ ಬಂದಿರುವವರು ಬಳಕೆ ಮಾಡುತ್ತಾರೆ. ಇನ್ನುಳಿದಂತೆ ಕೆಲವು ಭಾಷೆಗಳವರು ಬಳಕೆಯ ಸಂದರ್ಭವನ್ನು ಅನುಸರಿಸಿ ದ್ವಿಭಾಷಿಕರಾಗಿದ್ದಾರೆ.

**ಕನ್ನಡ-ತಮಿಳು ದ್ವಿಭಾಷಿಕ ಪರಿಸರಗಳು ಈ ಕೆಳಗಿನಂತಿವೆ**

- **ಸರ್ಕಾರಿ ಕಛೇರಿಗಳು**
- **ಸಾರ್ವಜನಿಕರು ಆವರಣಗಳು**
    - ಬಸ್ ನಿಲ್ದಾಣ
    - ಆಟೋ ನಿಲ್ದಾಣ
    - ಮಾರುಕಟ್ಟೆಗಳು
    - ಅಂಗಡಿಗಳು
    - ಹೋಟೆಲ್‌ಗಳು
- **ಶಾಲೆಗಳು**

ಹೀಗೆ ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಸಾಮಾನ್ಯವಾಗಿ ತಮಿಳು ಕನ್ನಡ-ತಮಿಳು ಭಾಷೆಯನ್ನು ದ್ವಿಭಾಷಾ ಬಳಕೆಯ ಆವರಣಗಳನ್ನು ಕಾಣಬಹುದು. ಅಂದರೆ ಮೇಲೆ ತಿಳಿಸಿದ ಆವರಣಗಳಲ್ಲಿ ಸಾಮಾನ್ಯವಾಗಿ ಕನ್ನಡ-ತಮಿಳು ಮಾತ್ರವಲ್ಲದೇ ಬೇರೆ ಬೇರೆ ಭಾಷೆಗಳು ಬಳಕೆಯಾಗುತ್ತವೆ. ಆದರೆ ತಮಿಳು ಭಾಷಾದ್ವೀಪದಲ್ಲಿನ ಜನರು ಬಳಕೆ ಮಾಡುವ ಕನ್ನಡ-ತಮಿಳು ಭಾಷೆಯ ದ್ವಿಭಾಷಿಕತೆಯನ್ನು ಮುಖ್ಯವಾಗಿರಿಸಿಕೊಂಡು ಆವರಣಗಳನ್ನು ವಿವರಿಸಿದೆ.

**ಸರ್ಕಾರಿ ಕಛೇರಿಗಳು:**

ಸರ್ಕಾರಿ ಕಛೇರಿಗಳು ಎಂದರೆ ಪೊಲೀಸ್ ಠಾಣೆ, ತಾಲ್ಲೂಕು-ಗ್ರಾಮಾಡಳಿತ ಕಛೇರಿಗಳು, ನ್ಯಾಯಾಲಯ ಸಂಕೀರ್ಣಗಳು, ಇತರೆ ಸಾರ್ವಜನಿಕ ಕಛೇರಿಗಳು ಸೇರಿವೆ. ಎರಡೂ ಪ್ರದೇಶಗಳಲ್ಲಿರುವ ತಮಿಳರು ಬೇರೆ ಬೇರೆ ಕಾರಣಕ್ಕಾಗಿ ಕನ್ನಡದ ಆಡಳಿತವಿರುವ ಸರ್ಕಾರಿ ಕಛೇರಿಗಳಿಗೆ ಭೇಟಿ ಮಾಡಬೇಕಾಗುತ್ತದೆ. ಆ ಸಮಯದಲ್ಲಿ ಕನ್ನಡ ಮಾತ್ರ ಬಳಸುವ ಅಧಿಕಾರಿ ಇದ್ದರೆ, ಅವರಿಗೆ ತಮ್ಮ ವಿಷಯವನ್ನು ಮುಟ್ಟಿಸಲು ಕನ್ನಡವನ್ನು ಬಳಕೆ ಮಾಡಬೇಕಾಗುತ್ತದೆ. ಅದಕ್ಕೆ ಸಾಮಾನ್ಯವಾಗಿ ಅಧಿಕಾರಿಗಳೊಂದಿಗೆ ಮಾತನಾಡುವಾಗ ಕನ್ನಡವನ್ನು ಬಳಕೆ ಮಾಡುತ್ತಾರೆ.

**ಸಾರ್ವಜನಿಕರು ಆವರಣಗಳು**

**ಬಸ್ ನಿಲ್ದಾಣ-ಆಟೋನಿಲ್ದಾಣಗಳು:**

ತಮಿಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ತೆರಳುವಾಗಿ ಸಾಮಾನ್ಯ ಸಾರಿಗೆಯನ್ನು ಬಳಸಬೇಕಾಗುತ್ತದೆ. ಸಾರಿಗೆ ವ್ಯವಸ್ಥೆಯಲ್ಲಿ ಕನ್ನಡವನ್ನು ಬಳಸಬೇಕಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಈ ವಾಹನಗಳಲ್ಲಿ ತಮಿಳು ಭಾಷಿಕರು ಇದ್ದರೆ ಮಾತ್ರ ಇವರು ತಮಿಳನ್ನು ಬಳಕೆ ಮಾಡುತ್ತಾರೆ. ಹೊರತುಪಡಿಸಿದರೆ ಇವರುಗಳು ಕನ್ನಡವನ್ನು ಬಳಸಬೇಕಾಗುತ್ತದೆ.

**ಮಾರುಕಟ್ಟೆಗಳು:**

ಮಾರುಕಟ್ಟೆಗಳು ಎಂದರೆ ಅಂಗಡಿಗಳು, ತರಕಾರಿ ಮಾರುಕಟ್ಟೆಗಳು, ಹೂವಿನ ಮಾರುಕಟ್ಟೆಗಳು ಹಾಗೂ ಇತರೆ ವಾಣಿಜ್ಯ ಪ್ರದೇಶಗಳಾದ ಹೋಟೆಲ್‌ಗಳು ಸೇರಿವೆ. ಹಿರಿಯೂರು ಪರಿಸರದಲ್ಲಿ ಮಾತ್ರ ತಮಿಳು ಭಾಷಿಕರು ತರಕಾರಿ ಮಾರುಕಟ್ಟೆಯಲ್ಲಿ ಮತ್ತು ಹೂವಿನ ಮಾರುಕಟ್ಟೆಯಲ್ಲಿ ತಮಿಳನ್ನು ಹೆಚ್ಚು ಬಳಕೆ ಮಾಡುವುದು ಕಾಣಬಹುದು. ಇನ್ನುಳಿದಂತೆ ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರು ಈ ಆವರಣಗಳಲ್ಲಿ ಹೆಚ್ಚಾಗಿ ಇಲ್ಲ. ಈ ವ್ಯಾವಹಾರಿಕ ಪ್ರದೇಶಗಳಲ್ಲಿ ಕನ್ನಡವನ್ನು ಸಾಮಾನ್ಯವಾಗಿ ಬಳಕೆ ಮಾಡುತ್ತಿರುತ್ತಾರೆ. ಇಲ್ಲಿ ಕನ್ನಡವು ಬೃಹತ್ ಭಾಷಿಕ ಪರಿಸರದ ಭಾಷೆಯಾಗಿರುವುದರಿಂದ ಎಲ್ಲರು ಕನ್ನಡವನ್ನು ಮಾತನಾಡುತ್ತಾರೆ. ಇದರೊಂದಿಗೆ ಬಹುತೇಕ ವ್ಯಾಪಾರಸ್ಥರು ಕನ್ನಡ, ಹಿಂದಿ ಮತ್ತು ಶೇಟುಗಳಾಗಿರುವುದರಿಂದ ಕನ್ನಡವನ್ನು ಬಳಕೆ ಮಾಡಬೇಕಾಗುತ್ತದೆ. ಇದರಿಂದ ತಮಗೆ ಬೇಕಾದ ವಸ್ತುವನ್ನು

ಅಥವಾ ಸೌಲಭ್ಯವನ್ನು ಪಡೆಯಬಹುದಾಗಿದೆ. ಹೀಗೆ ತಮಿಳರು ಕನ್ನಡವನ್ನು ವ್ಯಾವಹಾರಿಕ ಪ್ರದೇಶಗಳಲ್ಲಿ ಬಳಕೆ ಮಾಡಬೇಕಾಗುತ್ತದೆ.

**ಶಾಲಾ ಆವರಣ:**

ಹಿರಿಯೂರಿನ ಬಹುತೇಕ ಶಾಲೆಗಳ ಆವರಣದಲ್ಲಿ ತಮಿಳು ಭಾಷಾ ಬಳಕೆಲ್ಲಿದೆ ಎಲ್ಲಾ ಶಾಲೆಗಳಲ್ಲಿಯೂ ತಮಿಳು ಭಾಷಿಕರ ಮಕ್ಕಳು ಕನ್ನಡ ಅಥವಾ ಇಂಗ್ಲಿಷ್ ಮಾಧ್ಯಮದ ಶಿಕ್ಷಣ ಪಡೆಯುತ್ತಿರುವ ಕಾರಣಕ್ಕೆ ಇವರು ಕಂಡುಬರುತ್ತಾರೆ. ಶಾಲಾ ಆವರಣದಲ್ಲಿ ಮಕ್ಕಳು ಯಾವುದೇ ಮಾಧ್ಯಮಕ್ಕೆ ಸೇರಿದರು ಕನ್ನಡವನ್ನು ಬಳಸಬೇಕಾದ ಪರಿಸ್ಥಿತಿ ಇದೆ. ಏಕೆಂದರೆ ಕನ್ನಡದ ಪರಿಸರದಲ್ಲಿರುವ ಕಾರಣ ಕನ್ನಡ ಭಾಷೆಯ ಮಕ್ಕಳು ಹೆಚ್ಚಿರುತ್ತಿದ್ದರು. ಹಾಗೂ ಕನ್ನಡದಲ್ಲಿ ಪಾಠಗಳನ್ನು ನಡೆಯುತ್ತಿದ್ದವು ಆದ ಕಾರಣ ಶಾಲಾ ಆವರಣದಲ್ಲಿ ಕನ್ನಡವನ್ನು ಬಳಕೆ ಮಾಡುತ್ತಿದ್ದರು. ಇದರಿಂದ ತಮಿಳು ಭಾಷಿಕ ಮಕ್ಕಳು ಕನ್ನಡವನ್ನು ಇನ್ನೊಂದು ಭಾಷೆಯಾಗಿ ಬಳಕೆ ಮಾಡಬೇಕಾಗಿತ್ತು. ಇದರೊಂದಿಗೆ ಶಾಲೆಗಳಲ್ಲಿ ಕನ್ನಡವನ್ನು ಮೊದಲ ಭಾಷೆಯಾಗಿ ಅಥವಾ ಎರಡನೇ ಭಾಷೆಯಾಗಿ ಔಪಚಾರಿಕವಾಗಿ ಕಲಿಯುತ್ತಿದ್ದರಿಂದಾಗಿ ಕನ್ನಡವು ಎರಡನೇ ಭಾಷೆಯಾಗಿ ಬಳಕೆ ಮಾಡುತ್ತಿದ್ದರು. ಶಾಲಾ ಆವರಣದಲ್ಲಿ ಕನ್ನಡ, ಇಂಗ್ಲಿಷ್, ಹಿಂದಿ, ತಮಿಳು ಭಾಷೆಗಳನ್ನು ಕಲಿತು ಬಹುಭಾಷಿಕರಾಗುತ್ತಿದ್ದರು. ಕಲಿಕೆಯಲ್ಲಿ ಈ ಭಾಷೆಗಳನ್ನು ಬಳಸುತ್ತಿದ್ದರು. ಆದರೆ ಶಾಲಾ ಆವರಣದಲ್ಲಿ ಸ್ನೇಹಿತರೊಂದಿಗೆ ಮಾತನಾಡಲು, ಶಿಕ್ಷಕರೊಂದಿಗೆ ಸಂಪರ್ಕ ಸಾಧಿಸಲು ಕನ್ನಡವನ್ನು ಬಳಕೆ ಮಾಡುತ್ತಾರೆ. ಇತ್ತೀಚಿಗೆ ಇಂಗ್ಲಿಷ್ ಮಾಧ್ಯಮ ಶಾಲೆಗಳು ಹೆಚ್ಚುತ್ತಿರುವುದರಿಂದ ಶಾಲಾ ಆವರಣದಲ್ಲಿ ಇಂಗ್ಲಿಷ್ ಬಳಕೆಯು ಹೆಚ್ಚುತ್ತಿದೆ. ಹೀಗೆ ಶಾಲಾ ಆವರಣದಲ್ಲಿ ತಮಿಳು ಭಾಷಿಕ ಮಕ್ಕಳು ಮತ್ತು ಪೋಷಕರು ಕನ್ನಡವನ್ನು ಎರಡನೇ ಭಾಷೆಯಾಗಿ ಬಳಕೆ ಮಾಡುತ್ತಿದ್ದಾರೆ. ಅಲ್ಲದೇ ಇದು ದ್ವಿ-ಬಹುಭಾಷಿಕ ಪರಿಸರವಾಗಿ ರೂಪುಗೊಂಡಿದೆ.

ಒಟ್ಟಾರೆಯಾಗಿ ತಮಿಳು ಭಾಷಿಕರಲ್ಲಿ ಕನ್ನಡ-ತಮಿಳು ದ್ವಿಭಾಷಿಕತೆ ಭಾಷಾ ಬಳಕೆಯು ಸಂದರ್ಭ, ಪರಿಸರ ಮತ್ತು ಬಳಕೆದಾರರನ್ನು ಆಧರಿಸಿ ಬಳಕೆಯಾಗುತ್ತಿದೆ. ಇಲ್ಲಿ ಕನ್ನಡದ ಪರಿಸರದಲ್ಲಿ ಯಾರು ಪಾಲ್ಗೊಳ್ಳುತ್ತಾರೆಯೋ ಅವರು ಕನ್ನಡ-ತಮಿಳನ್ನು ದ್ವಿಭಾಷಿಕರಾಗಿ ಬಳಕೆ ಮಾಡುತ್ತಾರೆ. ಇದಕ್ಕೆ ಸಾಮಾಜಿಕವಾಗಿ ಕನ್ನಡದ ಪರಿಸರದಲ್ಲಿ ಭಾಗವಹಿಸುವುದು ಕಾರಣವಾಗಿದೆ. ಇನ್ನು ಶಾಲಾ ಪರಿಸರದಲ್ಲಿ ಶಿಕ್ಷಣ ಭಾಗವಾಗಿ ಕನ್ನಡ ರೂಢಿಯಾಗುವ ಕಾರಣ ಇಲ್ಲಿ ದ್ವಿಭಾಷಿಕ ಪರಿಸರ ರೂಪುಗೊಂಡಿದೆ.

### ೫.೫. ತಮಿಳು ಭಾಷಾದ್ವೀಪಗಳಲ್ಲಿ ಭಾಷಾ ಸಮೀಕರಣ

ಕನ್ನಡದ ಪರಿಸರದಲ್ಲಿ ವಾಸವಾಗಿರುವ ತಮಿಳು ಭಾಷಿಕರು ಮೇಲೆ ತಿಳಿಸಿದಂತೆ ಸಾಮಾಜಿಕ ಕಾರಣದಿಂದಾಗಿ ಕನ್ನಡಿಗರೊಂದಿಗೆ ಕೆಲವು ಸಂದರ್ಭಗಳಲ್ಲಿ/ಪರಿಸರಗಳಲ್ಲಿ ಬೆರೆಯುತ್ತಿದ್ದಾರೆ. ಹೀಗೆ ಕನ್ನಡಿಗರೊಂದಿಗೆ ಹೊಂದಿಕೊಂಡಿರುವ ಮೂರು ಮತ್ತು ನಾಲ್ಕನೇ ತಲೆಮಾರಿನವರು ಕನ್ನಡಿಗರೊಂದಿಗೆ ಮಾತನಾಡುವಾಗ ತಮಿಳಿನ ಶಬ್ದಗಳನ್ನು ಬಳಕೆ ಮಾಡುತ್ತಾರೆ. ಈ ರೀತಿ ಭಾಷಾ ಬಳಕೆಯನ್ನು ಭಾಷಾಶಾಸ್ತ್ರದಲ್ಲಿ 'ನುಡಿಬೆರಕೆ' ಮತ್ತು 'ನುಡಿಜಿತ' ಎಂದು ಗುರುತಿಸುತ್ತಾರೆ. ಅಂದರೆ ಒಂದು ಭಾಷೆಯನ್ನು

ಮಾತನಾಡುವ ಜನರು ಮತ್ತೊಂದು ಭಾಷೆಯ ಪದಗಳನ್ನು ಮಧ್ಯೆಮಧ್ಯೆ ಬಳಸಿದರೆ ಅದನ್ನು ನುಡಿಬೆರಕೆ ಎಂದು ಮತ್ತು ಮಾತಿನ ಮಧ್ಯೆ ಒಂದು ವಾಕ್ಯವನ್ನು ಒಂದು ಭಾಷೆಯಲ್ಲಿ ಮತ್ತೊಂದು ವಾಕ್ಯವನ್ನು ಬೇರೆ ಭಾಷೆಯಲ್ಲಿ ಬಳಕೆ ಮಾಡಿದರೆ ಅದನ್ನು ನುಡಿಜಿಗಿತ ಎನ್ನುತ್ತಾರೆ. ಇದನ್ನು ಇಂಗ್ಲಿಷ್‌ನಲ್ಲಿ Code mixing and Code Switching ಎಂದು ಬಳಕೆಮಾಡುತ್ತಾರೆ. ನಾರಾಯಣ ಕೆ. ವಿ. ಅವರು ಈ ಕುರಿತು "ಒಂದು ಭಾಷೆಯ ವಾಕ್ಯವನ್ನು ಆಡುವಾಗ/ಬರೆಯುವಾಗ ಇನ್ನೊಂದು ಭಾಷೆಯ ಭಾಷಾಂಶಗಳನ್ನು ಬೆರೆಸುವುದು ನುಡಿಬೆರಕೆ. ಇಡೀ ವಾಕ್ಯದ ಹಿಂದಿನ ನಿಯಮ ಒಂದು ಭಾಷೆಯದಾಗಿದ್ದು ವಾಕ್ಯಾಂಶಗಳು ಮಾತ್ರ ಕೆಲವು ಇನ್ನೊಂದು ಭಾಷೆಯಿಂದ ಬಂದು ಸೇರುತ್ತದೆ. ನುಡಿಜಿಗಿತದಲ್ಲಿ ಒಂದು ವಾಕ್ಯವನ್ನು ಒಂದು ಭಾಷೆಯ ನಿಯಮಾನುಸಾರ ರಚಿಸಿ, ಮುಗಿಸಿ ಆನಂತರ ಹೊಸ ವಾಕ್ಯವನ್ನು ಇಡಿಯಾಗಿ ಇನ್ನೊಂದು ಭಾಷೆಯಲ್ಲಿ ರಚಿಸಿ ಬಳಸಲಾಗುತ್ತದೆ. ವಾಕ್ಯದ ಆಚೆಗಿನ ಹಂತದಲ್ಲಿ ಈ ಬೆರಕೆ ನಡೆಯುತ್ತದೆ. ದ್ವಿಭಾಷಿಕರಲ್ಲಿ ನಡೆಯುವ ನುಡಿಬೆರಕೆಯ ಪ್ರಮಾಣ, ಉದ್ದೇಶಗಳು ಭಿನ್ನವಾಗಿರುತ್ತವೆ. ನುಡಿಜಿಗಿತ ಮಾತ್ರ ಬಹುಮಟ್ಟಿಗೆ ದ್ವಿಭಾಷಿಕರಲ್ಲೆ ನಡೆಯುವಂಥದ್ದು. ನುಡಿಬೆರಕೆ ದ್ವಿಭಾಷಿಕರಲ್ಲೆ ನಡೆಯುತ್ತದೆ ಎನ್ನುವಂತಿಲ್ಲ. ಎಷ್ಟೋ ವೇಳೆ ದ್ವಿಭಾಷಿಕ ಸನ್ನಿವೇಶಗಳಲ್ಲಿ ನಡೆಯುವ ಭಾಷಾಂಶಳನ್ನು ತಮ್ಮ ಭಾಷಿಕ ಸಂಕಥನಗಳಲ್ಲಿ ಸೇರಿಸಿಕೊಳ್ಳುತ್ತಾರೆ"(ದ್ವಿಬಾಷಿಕತೆ, ೧೯೯೮, ಪುಟ೧೯) ಹಿರಿಯೂರು ಮತ್ತು ಹೊಸಪೇಟೆಯ ತಮಿಳು ಭಾಷಾದ್ವೀಪಗಳಲ್ಲಿ ಕನ್ನಡ-ತಮಿಳಿನ ನುಡಿಬೆರಕೆ ಮತ್ತು ನುಡಿಜಿಗಿತ ಭಾಷಿಕ ಪ್ರಕ್ರಿಯೆಗಳು ಏಕೆ ನಡೆಯುತ್ತವೆ? ಅವುಗಳ ಹಿಂದಿರುವ ಭಾಷಿಕರ ಒತ್ತಡವೇನು ಎಂಬುದನ್ನು ಇಲ್ಲಿ ಪರಿಶೀಲಿಸಿದೆ.

ಬಹುಮಟ್ಟಿಗೆ ನುಡಿಮಿಶ್ರಣದ ಸಂದರ್ಭಗಳು ಈ ಪರಿಸರದಲ್ಲಿ ಕಂಡುಬರುವುದು ಕೆಲವು ಸಂದರ್ಭಗಳಲ್ಲಿ ಮಾತ್ರ. ಅವುಗಳೆಂದರೆ ಕನ್ನಡದ ಭಾಷಿಕ ಪರಿಸರದಲ್ಲಿ ಹೆಚ್ಚು ಭಾಗವಹಿಸುವ ತಮಿಳು ಭಾಷಿಕರು, ವ್ಯಾಪಾರದ ಸಂದರ್ಭಗಳಲ್ಲಿ, ವೈವಾಹಿಕ ಸಂಬಂಧದಿಂದುಂಟಾದ ಸಂದರ್ಭಗಳಲ್ಲಿ. ಹೀಗೆ ನುಡಿಜಿಗಿತ ಮತ್ತು ನುಡಿಬೆರಕೆಯ ಸಂದರ್ಭಗಳನ್ನು ಕಾಣಬಹುದು. ನುಡಿಬೆರಕೆ ಮತ್ತು ನುಡಿಜಿಗಿತವನ್ನು ಹೆಚ್ಚಾಗಿ ತಮಿಳು ಭಾಷಿಕರು ಕನ್ನಡದವರೊಂದಿಗೆ ಮಾತನಾಡುವಾಗ ಹೆಚ್ಚು ಬಳಕೆ ಮಾಡುತ್ತಾರೆ. ಅದನ್ನು ಹೊರತುಪಡಿಸಿದರೆ ಕನ್ನಡಿಗರು ಈ ರೀತಿಯ ತಮಿಳು ಭಾಷೆಯ ನುಡಿಜಿಗಿತ ಮತ್ತು ನುಡಿಬೆರಕೆ ಮಾಡುವುದು ಕಡಿಮೆ. ಇಲ್ಲಿ ತಮಿಳು ಭಾಷಿಕರು ಕನ್ನಡ ಭಾಷಿಕ ಪರಿಸರದಲ್ಲಿ ವ್ಯವಹರಿಸುವಾಗ ಕನ್ನಡವನ್ನು ಬಳಕೆಯ ಭಾಷೆಯಾಗಿ ಆಯ್ಕೆ ಮಾಡಿಕೊಂಡಿರುತ್ತಾರೆ. ಆದರೂ ಬಳಕೆಯ ಮಧ್ಯೆ ತಮಿಳಿನ ಪದ ಗುಚ್ಛಗಳು, ವಾಕ್ಯಗಳು ಬಳಕೆಯಾಗುತ್ತವೆ. ಹೀಗೆ ತಮಿಳಿನ ಪದ-ವಾಕ್ಯಗಳನ್ನು ಬಳಕೆ ಮಾಡುವುದಕ್ಕೆ ಕಾರಣವೆಂದರೆ, ಕನ್ನಡದಲ್ಲಿ ಮಾತನಾಡುವಾಗ ಕನ್ನಡದ ಪದಗಳ ಬಳಕೆಗೆ ಬಾರದೇ ಇದ್ದಾಗ, ವಿಷಯವನ್ನು ಪೂರ್ಣಗೊಳಿಸುವ ಧಾವಂತದಲ್ಲಿದ್ದಾಗ, ಕನ್ನಡದಲ್ಲಿ ಹೆಚ್ಚು ಮಾತನಾಡಲು ಸಾಧ್ಯವಾಗದೇ ಇದ್ದಾಗ, ಅಪರಿಚಿತರೊಡನೆ ಮಾತನಾಡುವಾಗ ತಮಿಳಿನ ಶಬ್ದಗಳನ್ನು ವಾಕ್ಯಗಳನ್ನು ಬಳಕೆ ಮಾಡುತ್ತಾರೆ.

**೫.೫.೧. ನುಡಿಜಿಗಿತ**

ತಮಿಳು ಭಾಷಾದ್ವೀಪಗಳಲ್ಲಿ ನುಡಿಜಿಗಿತವನ್ನು ಹೀಗೆ ವಿವರಿಸಿಕೊಳ್ಳಲಾಗಿದೆ. 'ತಮಿಳು ಭಾಷಿಕರು ಕನ್ನಡಿಗರೊಂದಿಗೆ ಅಥವಾ ಬೇರೆ ಭಾಷಿಕರೊಂದಿಗೆ ಮಾತನಾಡುವಾಗ ತಮಿಳು ಭಾಷೆಯ ವಾಕ್ಯಗಳನ್ನು ಬಳಕೆ ಮಾಡುವ ಭಾಷಿಕ ಸಂಧರ್ಭಕ್ಕೆ ನುಡಿಜಿಗಿತ.' ಎಂದು ವಿವರಿಸಿಕೊಳ್ಳಲಾಗಿದೆ.

ತಮಿಳು ಭಾಷಿಕರು ಕನ್ನಡಿಗರೊಂದಿಗೆ ಮಾತನಾಡುವಾಗ ಕನ್ನಡದ ವಾಕ್ಯಗಳನ್ನು ಬಳಸುತ್ತಲೇ ಕನ್ನಡ ವಾಕ್ಯವು ಪೂರ್ಣಗೊಂಡ ನಂತರ ಮುಂದಿನ ವಾಕ್ಯವನ್ನು ತಮಿಳು ಭಾಷೆಯಲ್ಲಿ ಬಳಕೆ ಮಾಡುವುದು ನುಡಿಜಿಗಿತವಾಗಿದೆ. ಈ ರೀತಿಯ ನುಡಿಜಿತವನ್ನು ಹೆಚ್ಚಾಗಿ ಕನ್ನಡದ ಪರಿಸರದಲ್ಲಿ ಪಾಲ್ಗೊಂಡು, ಬಳಕೆಯ ಸಂದರ್ಭಗಳಲ್ಲಿ ಕನ್ನಡದ ಪದ/ವಾಕ್ಯಗಳು ಬಾರದೇ ಇದ್ದಾಗ ತಮಿಳಿನ ವಾಕ್ಯಗಳನ್ನು ಪ್ರಯೋಗಿಸುತ್ತಾರೆ. ಇನ್ನು ಈ ವಾಕ್ಯಗಳ ಬಳಕೆಯು ಕನ್ನಡಿಗರಿಗೆ ಅರ್ಥವಾಗುತ್ತದೆ. ಇದಕ್ಕೆ ಕಾರಣ ಕನ್ನಡಿಗರು ತಮಿಳು ಭಾಷಿಕರ ನಂಟುಹೊಂದಿರುವ ಕಾರಣ ಈ ರೀತಿಯ ನುಡಿಜಿಗಿತಗಳನ್ನು ಅರ್ಥೈಸಿಕೊಳ್ಳುವ ಭಾಷಿಕ ಸಾಮರ್ಥ್ಯವನ್ನು ಪಡೆದಿರುತ್ತಾರೆ. ಇದಕ್ಕೆ ಉತ್ತರವನ್ನು ಕನ್ನಡದಲ್ಲಿಯೆ ನೀಡುತ್ತಾರೆ. ಹೀಗೆ ನುಡಿಜಿಗಿತದ ಬಳಕೆಯನ್ನು ತಮಿಳು–ಕನ್ನಡ ಬಳಕೆ ಮಾಡುವ ಸಂದರ್ಭಗಳಲ್ಲಿ ಮಾತ್ರ ಕಾಣುತ್ತೇವೆ. ಇನ್ನುಳಿದಂತೆ ಬೇರೆಡೆಗಳಲ್ಲಿ ಕಂಡುಬರುವುದಿಲ್ಲ.

ಉದಾ:

**ಒರ್ ಮಾಟ್ ಸೊಲ್ಡ್,** ಅವನಿಗೆ ಹೇಳ್ತಿನಿ.

**ಕನ್ನಡ, ತೆಲುಂಗ್ ತಮಿಳರ್ ಕಲ್ದಮಾರಿ ಇರುಕು**. ಆದರೆ ತೆಲುಗು ಅವರು ಜಾಸ್ತಿ ಇದಾರೆ.

**ಸತೀಶ ಇಂಗ್ ವಾ ತಂಬಿ, ಎಂಗ್ ಇರುಕ್ಕಾ,** ಎನ್ ಮಾಡ್ತಿದಿಯಾ.

ಹೀಗೆ ಸಂದರ್ಭ ಮತ್ತು ಮಾತನಾಡುವವರನ್ನು ಆಧರಿಸಿ ಕನ್ನಡ ತಮಿಳು ಭಾಷೆಯ ನುಡಿಜಿಗಿತವನ್ನು ಕಾಣಬಹುದು.

**೫.೫.೨. ನುಡಿಬೆರಕೆ**

ತಮಿಳು ಭಾಷಾದ್ವೀಪಗಳಲ್ಲಿ ನುಡಿಬೆರಕೆಯನ್ನು ಹೀಗೆ ವಿವರಿಸಿಕೊಳ್ಳಲಾಗಿದೆ. 'ತಮಿಳು ಭಾಷಿಕರು ಕನ್ನಡಿಗರೊಂದಿಗೆ ಅಥವಾ ಬೇರೆ ಭಾಷಿಕರೊಂದಿಗೆ ಮಾತನಾಡುವಾಗ ತಮಿಳು ಭಾಷೆಯ ಪದಗಳನ್ನು ಬಳಕೆ ಮಾಡುವ ಭಾಷಿಕ ಸಂದರ್ಭಕ್ಕೆ ನುಡಿಬೆರಕೆ. ಅಂದರೆ ತಮಿಳು ಭಾಷಿಕರು ಕನ್ನಡಿಗರೊಂದಿಗೆ ಮಾತನಾಡುವಾಗ ತಮಿಳಿನ ಕೆಲವು ಸಾಂಕೇತಿಕ ಪದಗಳನ್ನು ಬಳಕೆ ಮಾಡುತ್ತಾರೆ. ಇವುಗಳಲ್ಲಿ ಸಂಖ್ಯಾವಾಚಗಕಳು, ನಾಮಪದಗಳು, ಬೈಗುಳಗಳು ಸೇರಿರುತ್ತವೆ. ಇವುಗಳು ಉದ್ದೇಶಪೂರಕವಾಗಿ ಬಳಕೆ ಮಾಡುವುದಲ್ಲ. ಆದರೆ ಮಾತಿನ ಸಂದರ್ಭದಲ್ಲಿ ಬಳಕೆಯ ಭಾಷೆಯ ಪದವೆನ್ನುವಂತೆ ಬಳಕೆ ಮಾಡುತ್ತಾರೆ. ಇಲ್ಲಿ ಪದಗಳು ತಮಿಳು ಭಾಷಿಕ ಪದಗಳಾದರೂ ಕನ್ನಡಿಗರಿಗೆ ಅರ್ಥವಾಗುತ್ತವೆ. ಇದಕ್ಕೆ ಕನ್ನಡಿಗರು ಸಾಮಾನ್ಯವಾಗಿ ಕೆಲವು ನಾಮಪದಗಳನ್ನು, ಸಂಖ್ಯಾವಾಚಕಗಳನ್ನು ಕಲಿತು ಬಳಕೆ ಮಾಡುತ್ತಾರೆ. ಆದ್ದರಿಂದ ಈ ಪದಗಳು ಎರಡು ಭಾಷಿಕ ಪರಿಸರದಲ್ಲಿ ಬಳಕೆಯಲ್ಲಿರುವಂತ್ತೆ. ಈ ಪದಗಳ ಬಳಕೆಯು ಭಾಷಾದ್ವೀಪಗಳಲ್ಲಿ ವಾಸಿಸುವ ಕನ್ನಡ–ತಮಿಳು ಭಾಷಿಕರ ಸಂಪರ್ಕವಿರುವ ಕನ್ನಡಿಗರಿಗೆ ಮಾತ್ರ ಪರಿಚಿತವಾಗಿರುತ್ತವೆ. ಇವರು ಮಾತ್ರ ಕನ್ನಡ–ತಮಿಳು ನುಡಿಬೆರಕೆ ಬಳಕೆಮಾಡುವುದನ್ನು ಕಾಣಬಹುದು.

ನುಡಿಬೆರಕೆಯು ಮೂರನೇ ತಲೆಮಾರಿನ ತಮಿಳು ಭಾಷಿಕರಲ್ಲಿ ಹೆಚ್ಚು ಬಳಕೆ ಮಾಡುವುದು ಕಾಣಬಹುದು. ನಾಲ್ಕನೇ ತಲೆಮಾರಿನ ಮಕ್ಕಳು ನುಡಿಜಿಗಿತದ ಭಾಷಿಕ ಬಳಕೆಯನ್ನು ಮಾಡುವುದು ಕಡಿಮೆ.

ಉದಾ:

**ಮಾರುಕಟ್ಟೆ ಆವರಣ**

ಅಣ್ಣ **ಮೂನ್(ಣ್)** ಟೀ ಕೊಡು

**ಒರ್** ಇಪ್ಪತ್ತು ಮಂದಿ ಇರಬಹುದು

**ತಣ್ಣಿ** ಕೊಡು ಗುರು

ಮನೆಯ ಆವರಣದಲ್ಲಿ

ಹೇ **ಪಂದಿ**, ಎಲ್ಲಿಗೆ ಹೋಗುತ್ತಿದ್ದೀಯ?

ಎನ್ನ ಸುಮ, ಹೇಗಿದಿಯ?

ಲೇ **ಕರ್ಪು**, ಬಾ ನಿನ್ನ ನೋಡಿದಿನಿ

ಮೇಲಿನ ಉದಾಹರಣೆಗಳಲ್ಲಿ ಮೂನ್(ಣ್)–ಮೂರು, ಒರ್–ಒಂದು ಎಂದು ಸಂಖ್ಯಾವಾಚಕಗಳು, ತಣ್ಣಿ–ನೀರು, ಪಂದಿ–ಹಂದಿ ನಾಮಪದಗಳನ್ನು ಬಳಕೆಮಾಡುತ್ತಾರೆ. ಇಲ್ಲಿ ಕರ್ಪು ಎನ್ನುವುದು ಕರಿಯ ಎನ್ನುವ ಅರ್ಥದಲ್ಲಿ ಬಳಕೆಯಾಗಿದೆ.

ಹೀಗೆ ಕನ್ನಡ–ತಮಿಳು ಭಾಷೆಗಳು ಒಂದಕೊಂದು ಮಿಶ್ರಣಗೊಂಡು ಬಳಕೆಯಾಗುತ್ತವೆ. ಇಲ್ಲಿ ಎರಡು ಭಾಷೆಗಳು ಪದಬಳಕೆಯ ಮತ್ತು ವಾಕ್ಯಬಳಕೆಯ ಹಂತದಲ್ಲಿ ಮಿಶ್ರಣಗೊಂಡು ಎರಡು ಭಾಷೆಯ ಪದಗಳು ಪರಸ್ಪರರಿಗೆ ಅರ್ಥವಾಗುತ್ತವೆ. ಆ ಮೂಲಕ ಭಾಷೆಗಳು ಒಂದು ಹಂತದಲ್ಲಿ ಸಮೀಕರಿಸುತ್ತಿರುವುದು ಕಾಣಬಹುದು.

ತಮಿಳು–ಕನ್ನಡ ಭಾಷಿಕರ ನುಡಿಜಿಗಿತ ಮತ್ತು ನುಡಿಬೆರಕೆಯು ಪರಸ್ಪರ ಎರಡೂ ಭಾಷಿಕರು ಭಾಗವಹಿಸುವುದರಿಂದ ನಡೆಯುವ ಭಾಷಿಕ ಪ್ರಕ್ರಿಯೆಯಾಗಿದೆ. ಇಲ್ಲಿ ಕನ್ನಡರು ತಮಿಳನ್ನು, ತಮಿಳರು ಕನ್ನಡವನ್ನು ಮಾತಿನ ಮಧ್ಯ ಬಳಕೆ ಮಾಡುತ್ತಾರೆ. ನುಡಿಜಿಗಿತ ಮತ್ತು ನುಡಿಬೆರಕೆಯ ಸ್ವರೂಪವನ್ನು ಗಮನಿಸಿದರೆ ತಮಿಳು ಭಾಷಿಕರು ಹೆಚ್ಚಾಗಿ ವಸ್ತುವಾಚಕಗಳನ್ನು, ಸಂಖ್ಯಾವಾಚಕಗಳನ್ನು, ನಾಮಪದಗಳನ್ನು ಕನ್ನಡದಲ್ಲಿ ಮಾತನಾಡುವಾಗ ಬಳಸುತ್ತಾರೆ. ಅದೇ ರೀತಿಯಲ್ಲಿ ಕನ್ನಡಿಗರು ವ್ಯಾವಹಾರಿಕ ಸಂದರ್ಭಗಳಲ್ಲಿ ತಮಿಳರೊಂದಿಗೆ ಮಾತನಾಡುವಾಗ ತಮಿಳು ಭಾಷೆಯ ವಸ್ತುವಾಚಕಗಳನ್ನು, ಸಂಖ್ಯಾವಾಚಕಗಳನ್ನು ಬಳಕೆ ಮಾಡುತ್ತಾರೆ. ಇನ್ನು ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರು ಕನ್ನಡಿಗರೊಂದಿಗೆ ನುಡಿಜಿಗಿತ ಮತ್ತು ನುಡಿಬೆರಕೆಯು ಮಾರುಕಟ್ಟೆಯ ಕೇಂದ್ರಗಳಲ್ಲಿ, ಅಂಗಡಿಗಳಲ್ಲಿ, ಹೋಟೆಲ್‌ಗಳಲ್ಲಿ, ಶಾಲಾವಲಯಗಳಲ್ಲಿ, ತಮಿಳು–ಕನ್ನಡಿಗರು ಕೆಲಸ ಮಾಡುವ ವಲಯಗಳಲ್ಲಿ ಹೆಚ್ಚು ಬಳಕೆಯಾಗುವುದು. ಇದನ್ನು ಹೊರತುಪಡಿಸಿದರೆ ಕನ್ನಡ ಮತ್ತು ತಮಿಳು ಭಾಷಿಕರ ಆತ್ಮೀಯ ಸ್ನೇಹಿತರೊಂದಿಗೆ ಮಾತನಾಡುವಾಗ ನುಡಿಬೆರಕೆ ಮತ್ತು ನುಡಿಜಿಗಿತ ಬಳಕೆಯಾಗುತ್ತದೆ.

ನುಡಿಜಿಗಿತ ಮತ್ತು ನುಡಿಬೆರಕೆಯು ತಮಿಳಿನ ಮೂರು ಮತ್ತು ನಾಲ್ಕನೇ ತಲೆಮಾರಿನರಲ್ಲಿ ಬಳಕೆಯಾಗುವುದು ಹೆಚ್ಚು. ಈ ತಲೆಮಾರಿನವರು ಕನ್ನಡದ ಪರಿಸರದೊಂದಿಗೆ ಹೆಚ್ಚಾಗಿ ಭಾಗವಹಿಸುವ ಕಾರಣಕ್ಕೆ ಇವರುಗಳು ಕನ್ನಡವನ್ನು ಬಳಕೆ ಮಾಡುತ್ತಾರೆ. ಕನ್ನಡ ಬಳಕೆ ಮಾಡುವ ಸಂದರ್ಭದಲ್ಲಿ ಬಳಕೆಯ ವೇಗಕ್ಕೋ, ಪದಗಳ ತಿಳಿಯದಿದ್ದಾಗ ತಮಿಳಿನ ಪದಗಳನ್ನು ಬಳಕೆ ಮಾಡುತ್ತಾರೆ. ಅದೇ

ರೀತಿಯಲ್ಲಿ ಕನ್ನಡಿಗರು ತಮ್ಮ ಮಾತಿನಲ್ಲಿ ತಮಿಳಿನ ಪದಗಳನ್ನು ಬಳಕೆ ಮಾಡುತ್ತಾರೆ. ಅದು ಕೆಲವೇ ಸಂದರ್ಭಗಳಲ್ಲಿ ಮಾತ್ರ, ತಮಿಳಿರೊಂದಿಗೆ ವ್ಯವಹಾರ ಮಾಡುವಾಗ ವಸ್ತುವಾಚಕಗಳನ್ನು, ಸಂಖ್ಯಾವಾಚಕಗಳನ್ನು, ಪ್ರಮಾಣವಾಚಕಗಳನ್ನು ತಮಿಳಿನಲ್ಲಿ ಬಳಕೆ ಮಾಡುತ್ತಾರೆ. ಹೀಗೆ ಇವುಗಳು ಕನ್ನಡ ಭಾಷೆಯಲ್ಲಿ ಮಾತನಾಡಿದರು ತಮಿಳಿನ ಪದಗಳು ಅರ್ಥವಾಗಲಿ ಎಂಬ ಕಾರಣಕ್ಕೆ ಬಂದು ಸೇರುತ್ತವೆ. ಇನ್ನು ಸ್ನೇತರು ಮಾತನಾಡುವಾಗ ತಮಿಳು-ಕನ್ನಡ ಭಾಷೆಯ ಪದಗಳನ್ನು ಬಳಕೆ ಮಾಡುತ್ತಾರೆ. ಇವುಗಳನ್ನು ಹೊರತುಪಡಿಸಿದರೆ ಕನ್ನಡ ಪರಿಸರದಲ್ಲಿ ಕೌಶಲ್ಯ ಆಧಾರಿತ ಕೆಲಸಗಳಲ್ಲಿ ಪಾಲ್ಗೊಳ್ಳುವಾಗ ಕೌಶಲ್ಯಗಳನ್ನು ತಿಳಿಯಲು ಕನ್ನಡದ ಪದಗಳನ್ನು ತಮಿಳು ಭಾಷೆಯ ಮಧ್ಯೆ ಬಳಕೆ ಮಾಡುತ್ತಾರೆ. ಹೀಗೆ ಕೆಲವು ವಲಯಗಳಲ್ಲಿ ತಮಿಳು ಅಥವಾ ಕನ್ನಡದ ಪದಗಳನ್ನು ಮಾತಿನ ಮಧ್ಯೆ ಬಳಕೆಮಾಡಿ ನುಡಿಜಿಗಿತ ಮತ್ತು ನುಡಿಬೆರಕೆ ಮಾಡುವುದನ್ನು ಕೊಂಡುಕೊಳ್ಳಲಾಗಿದೆ.

### ೫.೬. ತಮಿಳರ ಸಾಂಸ್ಕೃತಿಕ ಅಭಿವ್ಯಕ್ತಿ ಕ್ರಮಗಳು

ಪ್ರತಿ ಭಾಷಿಕ ಸಮುದಾಯವು ತನ್ನದೇ ಆದ ಸಂಸ್ಕೃತಿ, ಆಚರಣೆ, ವಿಶೇಷತೆಗಳನ್ನು ತನ್ನದಾಗಿಸಿಕೊಂಡಿರುತ್ತವೆ. ಇವುಗಳು ಭಾಷಿಕ ಸಮುದಾಯವು ವಾಸಿಸುವ ಸ್ಥಳ, ರಾಜಕೀಯ, ಧಾರ್ಮಿಕತೆಗಳಿಂದಲೂ ಪ್ರಭಾವಿತಗೊಂಡು ಅಥವಾ ರೂಢಿಗೊಂಡು ಬಳಕೆಯಲ್ಲಿರುತ್ತವೆ. ಈ ರೀತಿಯ ವಿಶೇಷಾಂಶಗಳು ಕೇವಲ ಆಚರಣೆ ಮತ್ತು ರೂಢಿ ನೆಲೆಯಲ್ಲಿ ಮಾತ್ರ ಇರುವುದಿಲ್ಲ. ಅವುಗಳು ಭಾಷಿಕ ಗುಂಪಿನ ಗುರುತಾಗಿ, ವಿಶೇಷಗಳಾಗಿ ಬಳಕೆಯಲ್ಲಿರುತ್ತವೆ. ಭಾರತದಾದ್ಯಂತ ಇಂತಹ ಭಾಷಿಕ ಗುಂಪಿನ ವಿಶೇಷತೆಗಳನ್ನು ಕಾಣಬಹುದು. ಭಾಷಾ ಸಮುದಾಯದ ಉಡುಪು, ಆಹಾರ, ಜೀವನ ಕ್ರಮಗಳು ಪರಿಸರದಲ್ಲಿ ವಿಶೇಷವಾಗಿ ಗುರುತಿಸಲು ಕಾರಣವಾಗುತ್ತವೆ. ಅದರಲ್ಲು ವಿಶೇಷವಾಗಿ ವಲಸೆಯ ಮೂಲಕ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಬಂದು ನೆಲೆಸುವ ಭಾಷಿಕ ಸಮುದಾಯದ ಸಾಂಸ್ಕೃತಿಕ ಆಚರಣೆಗಳು, ಉಡುಪುಗಳು, ಜೀವನ ಕ್ರಮಗಳು ಬಹುಬೇಗ ಗುರುತಿಸಲ್ಪಡುತ್ತವೆ. ಹೀಗೆ ಭಾಷಿಕ ಸಮುದಯವೊಂದಕ್ಕೆ ಭಾಷೆಯೊಂದೇ ಗುರುತಿಸುವ ಆಧಾರವಾಗದೆ. ಆ ಭಾಷಿಕ ಸಮುದಾಯ ಆಹಾರ, ಉಡುಪು, ಸಂಸ್ಕೃತಿಕ ಆಚರಣೆಗಳು, ಜೀವನ ಕ್ರಮಗಳು ಸಮುದಾಯವನ್ನು ಗುರುತಿಸಲು ಆಧಾರವಾಗಿವೆ.

ಉದಾರಹರಣೆಗೆ ಮುಂಡಗೋಡುನ ಟಿಬೆಟಿಯನ್ ನಿರಾಶ್ರಿತರ ಕ್ಯಾಂಪ್‌ಗಳು ಕನ್ನಡದ ಪರಿಸರದಲ್ಲಿ ನೆಲೆಯನ್ನು ಕಂಡುಕೊಂಡಿವೆ. ಈ ಪ್ರದೇಶಗಳಲ್ಲಿರುವ ಕಟ್ಟಡಗಳು, ಜೀವನ ಕ್ರಮ, ಧಾರ್ಮಿಕ ಆಚರಣೆಗಳು, ಉಡುಪುಗಳನ್ನು ಕಂಡಾಕ್ಷಣ ಇದು ಮತ್ತೊಂದು ಭಾಷಿಕ ಗುಂಪಿನವರು ಎಂದು ಬಹುಬೇಗ ಅಲ್ಲಿನ ಜನ ಗುರುತಿಸುತ್ತಾರೆ. ಇದಕ್ಕೆ ಕಾರಣ ಟಿಬೆಟ್‌ನ ಜನರು ಬಳಸುವ ಕಡುಕೆಂಪು ಬಣ್ಣದ ಉದ್ದನೆಯ ಧಿರಿಸು, ಮಹಿಳೆಯರು ಬಳಸುವ ಗೌನ್ ರೂಪದ ವಿಶೇಷ ಉಡುಪುಗಳು ಹೀಗೆ ಇವುಗಳು ಭಾಷಿಕ ಸಮುದಾಯದ ಗುರುತಾಗಿಯೂ ಇದೆ.

ಹೀಗೆ ಪ್ರತಿ ಭಾಷಿಕ ಸಮುದಾಯವು ತನ್ನ ಭಾಷೆಯೊಂದಿಗೆ ತನ್ನದೇ ಆದ ಸಾಂಸ್ಕೃತಿಕ ಅಭಿವ್ಯಕ್ತಿಯನ್ನು ಹೊಂದಿರುತ್ತದೆ. ಇವು ಆಚರಣಾತ್ಮಕ ನೆಲೆಯಲ್ಲಿ ಮತ್ತು ಜೀವನ ಕ್ರಮದಲ್ಲಿಯೂ ಇರುತ್ತದೆ. ಇವುಗಳು ಭಾಷೆಯೊಂದಿಗೆ ನೇರವಾಗಿ ಸಂಬಂಧಿಸದಿದ್ದರೂ ಪರೋಕ್ಷವಾಗಿಯಾದರೂ ಭಾಷಾಂಶಗಳಲ್ಲಿ

ಉಳಿಸಿಕೊಂಡಿರುತ್ತವೆ. ಇವುಗಳನ್ನು ಅಧ್ಯಯನ ಮಾಡುವ ಮೂಲಕ ಸಮುದಾಯದ ಭಾಷಾ ಬಳಕೆ, ಭಾಷೆ-ಸಮುದಾಗಳಿಗೆ ಇರುವ ಸಂಬಂಧಗಳನ್ನು ಕಂಡುಕೊಳ್ಳಬಹುದು. ಈ ಹಿನ್ನೆಲೆಯಲ್ಲಿ ತಮಿಳು ಭಾಷಾದ್ವೀಗಳಲ್ಲಿನ ತಮಿಳರ ಸಾಂಸ್ಕೃತಿಕ ಅಭಿವ್ಯಕ್ತಿ ಕ್ರಮಗಳನ್ನು ಗುರುತಿಸಿಕೊಂಡಿದೆ. ಈ ಅಧ್ಯಯನಕ್ಕೆ ಸಂಬಂಧಿಸಿದಂತೆ 'ಸಾಂಸ್ಕೃತಿಕ ಅಭಿವ್ಯಕ್ತಿ'ಯನ್ನು ಈ ರೀತಿಯಾಗಿ ವಿವರಿಸಿಕೊಂಡಿದೆ. ತಮಿಳು ಭಾಷಿಕರು ಸಮುದಾಯದಲ್ಲಿ ಆಚರಿಸುವ ಹಬ್ಬ, ನಂಬಿಕೆ ಮತ್ತು ಬದುಕಿನ ಕ್ರಮಗಳು ತಮಿಳು ಭಾಷಿಕ ಸಮುದಾಯದ ವಿಶೇಷ ಮತ್ತು ಕನ್ನಡದ ಪರಿಸರದಲ್ಲಿ ತಮಿಳರನ್ನು ಗುರುತಿಸುವ ಕ್ರಮಗಳಾಗಿರುವುದರಿಂದ ಇವುಗಳನ್ನು ತಮಿಳರ ಸಾಂಸ್ಕೃತಿಕ ಅಭಿವ್ಯಕ್ತಿ ಕ್ರಮಗಳು ಎಂದು ವಿವರಿಸಿಕೊಂಡಿದೆ. ಕನ್ನಡದ ಪರಿಸರದಲ್ಲಿ ತಮಿಳರನ್ನು ಭಾಷೆಯಿಂದ ಗುರುತಿಸುವುದರ ಜೊತೆಯಲ್ಲಿ ಅವರುಗಳು ಆಚರಿಸುವ ಕೆಲವು ಹಬ್ಬಗಳು ಮತ್ತು ದಿನ ನಿತ್ಯದ ಬದುಕಿನ ಕ್ರಮಗಳಿಂದ ಇವರು ತಮಿಳು ಭಾಷಿಕರು ಎಂದು ಗುರುತಿಸುತ್ತಾರೆ. ಹೀಗೆ ತಮಿಳು ಭಾಷಿಕರನ್ನು ಗುರುತಿಸಲು ಸಹಕಾರಿಯಾಗಿರುವ ಕೆಲವು ಆಚರಣೆಗಳನ್ನು ಮತ್ತು ಬದುಕಿನ ಕ್ರಮಗಳನ್ನು ಸಂಗ್ರಹಿಸಿ, ವಿಶ್ಲೇಷಿಸಿದೆ.

**೫.೬.೧. ಹಬ್ಬಗಳ ಆಚರಣೆ**

ತಮಿಳು ಭಾಷಾದ್ವೀಪಗಳಲ್ಲಿ ವಾಸವಾಗಿರುವ ಭಾಷಿಕರು ತಮ್ಮ ಆಚರಣೆಗಳಿಗೆ ಸಂಬಂಧಿಸಿದಂತೆ ಹಬ್ಬಗಳನ್ನು ತಮಿಳು ಕ್ಯಾಲೆಂಡರ್‌ಗೆ ಅನುಸಾರವಾಗಿ ಕರ್ನಾಟಕದಲ್ಲಿ ಆಚರಿಸುತ್ತಾರೆ. ವಿಶೇಷವಾಗಿ ತಮಿಳುನಾಡಿನ ಪೊಂಗಲ್, ಆಡಿಮಾಸಮ್, ತೈಪೂಸ್ ಹಬ್ಬಗಳನ್ನು ಆಚರಿಸುತ್ತಾರೆ. ಈ ಹಬ್ಬಗಳನ್ನು ತಮಿಳುನಾಡಿನಲ್ಲಿ ಆಚರಿಸುವಂತೆ ಆಚರಿಸಿದರೂ, ಕೆಲವು ಸಾಂಕೇತಿಕವಾಗಿ ಆಚರಿಸುತ್ತಾರೆ.

**ಪೊಂಗಲ್:**

ಈ ಹಬ್ಬವು ಸುಗ್ಗಿಕಾಲದ ಆಚರಣೆಯಾಗಿದ್ದು, ತಮಿಳು ನಾಡಿನಲ್ಲಿ ಪೊಂಗಲ್ ಎಂಬ ಹೆಸರಿನಿಂದ ಆಚರಿಸಲಾಗುತ್ತದೆ. ಈ ಹಬ್ಬವನ್ನು ನಾಲ್ಕು ದಿನಗಳ ಕಾಲ ಆಚರಿಸಲಾಗುತ್ತದೆ. ಸಾಮಾನ್ಯವಾಗಿ ಪ್ರತಿವರ್ಷ ಜನವರಿಯ ೧೩ ರಿಂದ ೧೬ರವರೆಗೆ ಆಚರಿಸಲಾಗುತ್ತದೆ. ಕೆಲವು ನಂಬಿಕೆಗಳ ಪ್ರಕಾರ ಈ ಹಬ್ಬವನ್ನು ಸೂರ್ಯದೇವರಿಗೆ ಗೌರವ-ಭಕ್ತಿಯನ್ನು ಸಮರ್ಪಿಸಲು ಆಚರಿಸಲಾಗುತ್ತದೆ ಎಂದು ಹೇಳುತ್ತಾರೆ. ಕೃಷಿ ಮತ್ತು ಇತರೆ ಚಟುವಟಿಕೆಗಳಿಗೆ ಬೆಳಕು ಮತ್ತು ಶಕ್ತಿಯನ್ನು ನೀಡಿದ್ದರ ಫಲವಾಗಿ ಭಕ್ತಿಯನ್ನು ಸಲ್ಲಿಸಲಾಗುತ್ತದೆ. ಈ ಹಬ್ಬದಂದು ಜನರು ಹೊಸದಾಗಿ ಬೆಳೆದಿರುವ ಅಕ್ಕಿ, ಹೊಸ ಬೆಲ್ಲದಿಂದ ತಯಾರಿಸಿದ 'ಪೊಂಗಲ್' ತಿನಿಸನ್ನು ಸೂರ್ಯದೇವರಿಗೆ ಅರ್ಪಿಸಿ ಪೂಜಿಸುತ್ತಾರೆ. 'ಪೊಂಗಲ್' ಎಂಬುದನ್ನು ಹಬ್ಬದ ಹೆಸರಾಗಿಯೂ ಮತ್ತು ಒಂದು ಬಗೆಯ ಆಹಾರದ ಹೆಸರಾಗಿಯೂ ಬಳಕೆ ಮಾಡುವುದು ಇಲ್ಲಿ ಕಾಣಬಹುದು.

ಒಂದು ತಿಂಗಳ ಮುಂಚಿತವಾಗಿ ಈ ಹಬ್ಬದ ತಯಾರಿಗಳು ಮನೆಯಲ್ಲಿ ಮಾಡಿಕೊಂಡು ಬರುತ್ತಾರೆ. ಅಂದರೆ ಮನೆಯನ್ನು ಸ್ವಚ್ಚಗೊಳಿಸುವುದು, ಬಣ್ಣ ಮಾಡಿಕೊಂಡು ಮನೆಯ ಬಾಗಿಲಿಗೆ ಸಿಂಗರಿಸುವ ಆಚರಣೆಗಳಿವೆ. ಈ ತಿಂಗಳನ್ನು 'ಮಾರ್ಗಾಳಿ' ಎಂದು ಕರೆಯುವುದು ರೂಢಿಯಲ್ಲಿದೆ. ಹೀಗೆ 'ಪೊಂಗಲ್' ಹಬ್ಬಕ್ಕೆ ಮನೆಯನ್ನು ತಯಾರಿ ಮಾಡಿಕೊಳ್ಳಲಾಗುತ್ತದೆ.

ಈ ಹಬ್ಬದ ಮೊದಲ ದಿನವನ್ನು 'ಬೋಗಿ' ಎಂದು ಕರೆಯುತ್ತಾರೆ. ಈ ದಿನದಂದು ಇಂದ್ರ ದೇವನಿಗೆ ಪೂಜಿಸುತ್ತಾರೆ. ಕೃಷಿಕರಿಗೆ ಮಳೆಯನ್ನು ನೀಡಲಿ ಎಂಬುದು ನಂಬಿಕೆಯಾಗಿದೆ. ಈ ದಿನದಂದು ಸಂಗ್ರಹಿಸಿದ ಕೆಲವು ಹಳೆಯ ವಸ್ತುಗಳನ್ನು ತೆಗೆದು ಹಾಕಿ, ಹೊಸ ಸಾಮಗ್ರಿಗಳನ್ನು ಬಳಕೆಗೆ ಸಿದ್ಧಪಡಿಸುತ್ತಾರೆ. ಮತ್ತು ಎರಡನೇ ದಿನ ಹಬ್ಬಕ್ಕೆ ಕಬ್ಬಿನ ಕೋಲು, ಬೆಣ್ಣೆ ಮುಖ್ಯವಾಗಿರುತ್ತದೆ.

ಪೊಂಗಲ್‌ನ ಮುಖ್ಯ ದಿನ ಎರಡನೇ ದಿನವಾಗಿದೆ. ಇದು ತಮಿಳು ಭಾಷಿಕರ ಕ್ಯಾಲೆಂಡರ್‌ನಲ್ಲಿ ಹತ್ತನೇ ತಿಂಗಳಾಗಿದ್ದು, 'ತೈಪೂಸ್ ಮಾಸಮ್' ಎಂದು ಕರೆಯಲಾಗುತ್ತದೆ. ಈ ದಿನದಂದು ಎಲ್ಲರು ಹೊಸ ಉಡುಗೆ-ತೊಡುಗೆಗಳನ್ನು ಧರಿಸಿ ಪೂಜೆಯನ್ನು ಸಲ್ಲಿಸುತ್ತಾರೆ.

ಮೂರನೇ ದಿನ 'ಮಾಟು ಪೊಂಗಲ್'(maattupponkal) ಎಂದು ಕರೆಯಲಾಗುತ್ತದೆ. ಮಾಟುಪೊಂಗಲ್ ದಿನ ಆಕಳು, ಎತ್ತು, ಎಮ್ಮೆ ಇತರೆ ಸಾಕು ಪ್ರಾಣಿಗಳನ್ನು ತೊಳೆದು ಸಿಂಗರಿಸಿ ಅವುಗಳಿಗೆ ಪೂಜಿಸಿ ಪೊಂಗಲ್‌ನ್ನು ತಿನ್ನಿಸಲಾಗುತ್ತದೆ. ಇದರೊಂದಿಗೆ ಅವುಗಳನ್ನು ದೇವಾಲಯಕ್ಕೆ ಕರೆದುಕೊಂಡು ಹೋಗಿಬರುತ್ತಾರೆ.

ನಾಲ್ಕನೇ ದಿನದಂದು 'ಕನ್ನುಮ್‌ಪೊಂಗಲ್', 'ಕಾನುಪೊಂಗಲ್', 'ಕಾನುಮ್‌ಪೊಂಗಲ್' ಎಂದು ಕರೆಯಲಾಗುತ್ತದೆ. ಈ ದಿನದಂದು ಮಹಿಳೆಯರು ಹರಿಶಿಣದ ಎಲೆಯನ್ನು ಅಕ್ಕಿ ಮತ್ತು ಮನೆಯಲ್ಲಿರುವ ಇತರೆ ಸಾಮಗ್ರಿಗಳಿಗೆ ಬೆರಸಿ ಇಡುತ್ತಾರೆ. ಮತ್ತು ಈ ದಿನದಂದು ತಮ್ಮ ಸ್ನೇಹಿತರ ಮನೆಗೆ, ಸಂಬಂಧಿಕರ ಮನೆಗೆ ಹೋಗಿಬರುತ್ತಾರೆ. ಹೀಗೆ ಪೊಂಗಲ್ ಹಬ್ಬವನ್ನು ಆಚರಿಸುತ್ತಾರೆ.

ತಮಿಳರು ಪೊಂಗಲ್ ಹಬ್ಬವನ್ನು ಸೂರ್ಯನಿಗೆ ಪೂಜಿಸುವ ಸಲುವಾಗಿ ಮತ್ತು ಪ್ರಕೃತಿಯಲ್ಲಿ ಬೆಳೆಯುವ ಕೃಷಿಯಾಧಾರಿತ ಧಾನ್ಯಗಳ ಸಂಕೇತವಾಗಿ ಆಚರಿಸುತ್ತಾರೆ. 'ಪೊಂಗಲ್' ಪದವು 'ಪೊಂಗ್' ಎಂಬ ಪದದಿಂದ ರೂಪುಗೊಂಡಿದೆ ಎನ್ನುತ್ತಾರೆ. ಇದರ ಅರ್ಥ ಕುದಿಯುವ ಅಥವಾ ಕುದ್ದು ಹೊರಬರುವ ಎಂದು ಅರ್ಥವನ್ನು ತಿಳಿಸಲಾಗುತ್ತದೆ. ಡಿಇಡಿ(A DRAVIDIAN ETYMOLOGICAL DICTIONARY) ಯಲ್ಲಿ ಪೊಂಗಲ್ ಅನ್ನು 3658 ponku(ponki) ಎಂಬ ಪದದಿಂದ ವಿವರಿಸಲಾಗಿದೆ. ಪದದ ವಿವರಣೆ ಮುಂದುವರೆಸಿ, pongu-to boil over, burst open, expand onpen, blossm, swell, be reated, exult, be overjoyed ಎಂದು ಅರ್ಥೈಸುತ್ತಾರೆ. ಇನ್ನು ಈ ಪದಕ್ಕೆ ವಿಸ್ತಾರ ರೂಪಗಳನ್ನು ponga>pongalu>pongil ರೀತಿಯಾಗಿ ನೀಡಿದ್ದಾರೆ.(ಪುಟ ೨೯೫) ಎಂದು ಆದರೆ ಸೂರ್ಯನಿಗೆ ಪೂಜೆ ಸಲ್ಲಿಸುವುದೇ ಪೊಂಗಲ್. ಕರ್ನಾಟಕದಲ್ಲಿ ಮಕರ ಸಂಕ್ರಾಂತಿ ಎಂದು ಸೂರ್ಯನು ತನ್ನ ಪಥವನ್ನು ಬದಲಿಸಿವುದರಿಂದ ಈ ಹಬ್ಬವನ್ನು ಆಚರಿಸುತ್ತಾರೆ. ಆದರೆ ತಮಿಳು ಭಾಷಿಕರು ಇದನ್ನು ಪ್ರಕೃತಿ ಮತ್ತು ಕೃಷಿಗೆ ಸಂಬಂಧಿಸಿದ ಹಬ್ಬವಾಗಿ ಆಚರಣೆ ಮಾಡುತ್ತಾರೆ. ಇನ್ನು ಹಬ್ಬದ ಮೂರನೇ ದಿನದಲ್ಲಿ ಕೃಷಿಗೆ ಬಳಕೆಯಾಗುವ ಮತ್ತು ತಾವುಗಳು ಸಾಕಿರುವಂತಹ ಪ್ರಾಣಿಗಳಿಗೆ ಪೂಜೆ ಮಾಡುತ್ತಾರೆ. ಇದು ಸಹ ಕೃಷಿಗೆ ಮತ್ತು ಹಬ್ಬದ ಆಚರಣೆಗೆ ಇರುವ ಸಂಬಂಧವನ್ನು ಸೂಚಿಸುತ್ತದೆ.

**ತಮಿಳರ ಹೊಸವರ್ಷದ ದಿನ:** ಹೊಸವರ್ಷದ ದಿನವನ್ನು 'ವರುಷಪ್ಪೆರಪ್ಪು' ಎಂದು ಕರೆಯಲಾಗುತ್ತದೆ. ಸಾಮನ್ಯವಾಗಿ ಇದು ಏಪ್ರಿಲ್ ತಿಂಗಳ ಮಧ್ಯದಲ್ಲಿ ಬರುತ್ತದೆ. ಇದು ತಮಿಳು ಕ್ಯಾಲೆಂಡರ್‌ನ ಮೊದಲ ತಿಂಗಳಾಗಿದೆ. ಈ ದಿನದಂದು ಮನೆಯ ಮುಂದೆ ಬಣ್ಣದ ರಂಗೋಲಿಗಳನ್ನು(ಕೋಲಮ್) ಹಾಕಿ ಸಿಂಗರಿಸಲಾಗುತ್ತದೆ. ಈ ತಿಂಗಳಲ್ಲಿ ಮಾವಿನ ಹಣ್ಣು ಮತ್ತು ಬೇವಿನ ಹೊಸಚಿಗುರು ಮತ್ತು ಹೂವುಗಳನ್ನು ಬಳಸುತ್ತಾರೆ. ಈ ಎರಡನ್ನು ತಮ್ಮ ಏಳಿಗೆಯ ಪ್ರತೀಕವಾಗಿ ಬಳಸುತ್ತಾರೆ. ಹೀಗೆ ಈ ದಿನದಂದ ಹೊಸ ಬಟ್ಟೆಗಳನ್ನು ಧರಿಸಿ ದೇವಾಲಯಗಳಿಗೆ ಭೇಟಿ ನೀಡುತ್ತಾರೆ. ಈ ದಿನದಲ್ಲಿ ಸ್ತ್ರೀ ದೇವಾಲಯಗಳಿಗೆ ಭೇಟಿ ನೀಡುತ್ತಾರೆ. ನಂತರ ಮಾವಿನಹಣ್ಣು, ಬೆಲ್ಲ ಮತ್ತು ಬೇವಿನ ಹೂವುಗಳಿಂದ ಮಾಡಿದ ತಿನಿಸನ್ನು ತಿನ್ನುತ್ತಾರೆ. ಇದರೊಂದಿಗೆ ಇಂದಿನ ವಿಷೇಶ ಅಡುಗೆಯಾಗಿ ಮಾವಿನ ಕಿಚಡಿಯನ್ನು(ಮಾಂಗ/ಮಾಂಗೈ ಕಿಚಡಿ) ತಯಾರಿಸುತ್ತಾರೆ.

**ನಾಟ್ಯಂಜಲಿ ನೃತ್ಯ ಹಬ್ಬ:** ಈ ಹಬ್ಬವನ್ನು ಫೆಬ್ರವರಿ ಅಥವಾ ಮಾರ್ಚ್ ತಿಂಗಳಿನಲ್ಲಿ ಆಚರಿಸಲಾಗುತ್ತದೆ. ಒಟ್ಟು ಐದು ದಿನಗಳ ಕಾಲ ಆಚರಿಸಲಾಗುತ್ತದೆ. ಸಾಮಾನ್ಯವಾಗಿ ಶಿವರಾತ್ರಿ ಹಬ್ಬದಂದು ಪ್ರಾರಂಭಗೊಳ್ಳುತ್ತದೆ. ನೃತ್ಯಗಾರರು ವಿವಿಧ ಪಾರಂಪರಿಕ ಉಡುಗೆ ತೊಡುಗೆಗಳನ್ನು ಧರಿಸಿ ನೃತ್ಯಗೈಯ್ಯುತ್ತಾರೆ. ಹೀಗೆ ನಟರಾಜನಿಗೆ ನೃತ್ಯದ ಮೂಲಕ ಗೌರವಸಲ್ಲಿಸಲಾಗುತ್ತದೆ. ಈ ಹಬ್ಬವನ್ನು ತಮಿಳುನಾಡಿನ ಚಿದಂಬರಂನಲ್ಲಿರುವ ನಟರಾಜ ದೇವಾಲಯದಲ್ಲಿ ಹೆಚ್ಚು ವೈಭವಯುತವಾಗಿ ಆಚರಿಸಲಾಗುತ್ತದೆ. ಈ ಹಬ್ಬದಂದು ಭರತನಾಟ್ಯ, ಕುಚುಪುಡಿ, ಮೋಹಿನಿಯಾಟಂ, ಕಥಕ್ಕ ಇತರೆ ನೃತ್ಯಗಳನ್ನು ಪ್ರದರ್ಶಿಸಲಾಗುತ್ತದೆ.

**ತೈಪೂಸ್(ತೈಪೂಸಮ್):** ಈ ಹಬ್ಬವನ್ನು ತಮಿಳು ಕ್ಯಾಲಂಡರ್‌ನಂತೆ ತಮಿಳುನಾಡಿನಲ್ಲಿ ತೈ ತಿಂಗಳ ಪೌರ್ಣಮಿ ದಿನದಂದು ಆಚರಿಸಲಾಗುತ್ತದೆ. ಈ ದಿನವು ಸುಬ್ರಹ್ಮಣ್ಯನ ಜನ್ಮದಿನವೆಂದು ಆಚರಿಸಲಾಗುತ್ತದೆ. ಜನರು ತಮ್ಮ ನಂಬಿಕೆ ಮತ್ತು ಭಕ್ತಿಯಿಂದ ಪೂಜಿಸುತ್ತಾರೆ. ಅದರೊಂದಿಗೆ ಜನರು ಅಂದುಕೊಂಡ ಕೆಲಸಗಳು ನೆರವೇರಲೆಂದು ಪ್ರಾರ್ಥಿಸುತ್ತಾರೆ. ಮತ್ತೊಂದು ಅರ್ಥದಲ್ಲಿ ಈ ದಿನವನ್ನು ಪ್ರಾಯಶ್ಚಿತ್ತದ ದಿನವೆಂದು ಸಹ ಭಾವಿಸಿದ್ದಾರೆ. ಈ ಹಬ್ಬದ ವಿಶೇಷವೇನೆಂದರೆ ಭಕ್ತಾದಿಗಳು ಕಾವಡಿ(kavadi) ಹೊರುವುದು. ಕಾವಡಿ ಎಂದರೆ ಬಿದಿರು ಮತ್ತು ಮರದ ಕೋಲಿನಿಂದ ಮಾಡಿರುತ್ತಾರೆ. ಬಿಲ್ಲಿನ ಆಕರದಲ್ಲಿ ಇರುತ್ತದೆ. ಇದನ್ನು ಹೆಗಲ ಮೇಲೆ ಹೊತ್ತು ಕೈಯಿಂದ ಹಿಡಿಯದೆ ಸಮಾನತೆಯನ್ನು ಸಾಧಿಸಿಕೊಂಡು ಸಾಗುತ್ತಾರೆ. ಕಾವಡಿ ಹೊರುವವರು ವಿಶೇಷ ಉಡುಪುಗಳಿಂದ ಸಿದ್ಧಗೊಂಡು ಕಾವಡಿಯನ್ನು ಹೋರುತ್ತಾರೆ. ಅದರೊಂದಿಗೆ ಕೆಲವರು ತಮ್ಮ ಬೆನ್ನಿಗೆ ಅಕ್ಕಿ, ಹಾಲು ಮತ್ತು ಇತರೆ ಧಾನ್ಯ ತುಂಬಿದ ಸಣ್ಣ ಬಿಂದಿಗೆಗಳನ್ನು ಬೆನ್ನಿಗೆ ಲೋಹದ ಮಳೆಗಳಿಂದ ಸುಚ್ಚಿಕೊಂಡು ದೇವಾಲಯಕ್ಕೆ ಸಾಗುತ್ತಾರೆ. ಕೆಲವರು ಇತ್ತೀಚೆಗೆ ಖಾಲಿ ಬಿಂದಿಗೆಗಳನ್ನು ಹೊತ್ತು ಸಾಗುಸಾಗುತ್ತಾರೆ. ಇದು ದೇವರಿಗೆ ಅರ್ಪಿಸುತ್ತಿರುವುದು. ಈ ಸಮಯದಲ್ಲಿ ನೋವಾಗುವುದಿಲ್ಲ ಎಂದು ಹೇಳುತ್ತಾರೆ. ಇದರೊಂದಿಗೆ ದೇಹಕ್ಕೆ ಸುಚ್ಚಿಕೊಂಡಿಂದ್ದರಿಂದ

ಯಾವುದೇ ರಕ್ತಸ್ರಾವವಾಗುವುದಿಲ್ಲ ಎನ್ನುತ್ತಾರೆ. ಹೀಗೆ ಸಾಗಿ ಪೂಜೆ ಸಲ್ಲಿಸುತ್ತಾರೆ. ಕಾವಡಿಯಲ್ಲಿ ಇನ್ನೂ ವಿಶೇಷವೆಂದರೆ 'ಅಗ್ನಿ ಕಾವಡಿ'. ಭಕ್ತರು ಕಾವಡಿಯನ್ನು ಹೊತ್ತು ಬೆಂಕಿಯ ಕೆಂಡದ ಮೇಲೆ ಸಾಗುತ್ತಾರೆ. ಸುಮಾರು ಹತ್ತು ಸಾವಿರ ಜನರು ಕಾವಡಿ ಹೊತ್ತವರು ದೇವಾಲಯವನ್ನು ತಲುಪುತ್ತಾರೆ. ಈ ಹಬ್ಬವನ್ನು ಹೊಸಪೇಟೆ ಪರಿಸರದ ಕಡ್ಡಿರಾಂಪುರ ಗ್ರಾಮದಲ್ಲಿರುವ ಮುರುಗನ ದೇವಾಲಯದಲ್ಲಿ ಮೇಲೆ ತಿಳಿಸಿದಂತೆ ಜನವರಿ–ಫೆಬ್ರವರಿ ತಿಂಗಳಲ್ಲಿ ಹಬ್ಬ ಆಚರಿಸುತ್ತಾರೆ. ಈ ಹಬ್ಬಕ್ಕೆ ಹೊಸಪೇಟೆ ಪರಿಸರದ ತಮಿಳರು ಕಾವಡಿ ಇತರೆ ರೂಢಿಗತ ಆಚರಣೆಗಳನ್ನು ಆಚರಿಸುತ್ತಾರೆ.

**ಕಾರ್ತಿಕ ದೀಪೋತ್ಸವ(ಕಾತೀಗೈ ದೀಪಂ):** ಈ ಹಬ್ಬವನ್ನು ದೀಪದ ಹಬ್ಬ ಎಂದು ಹಾಗೂ ತಮಿಳು ಕ್ಯಾಲೆಂಡರ್‌ನಲ್ಲಿ ಕಾರ್ತಿಕ ಮಾಸದಲ್ಲಿ ಆಚರಿಸಲಾಗುತ್ತದೆ. ಅಂದರೆ ನವಂಬರ್–ಡಿಸೆಂಬರ್ ತಿಂಗಳ ಮಧ್ಯಭಾಗದಲ್ಲಿ ಆಚರಣೆಯಲ್ಲಿದೆ. ಈ ದಿನವನ್ನು ಚಂದ್ರನಿಗೆ ಸಂಬಂಧಿಸಿದ ಒಂದು ದಿನವೆಂದು ಗುರುತಿಸುತ್ತಾರೆ. ಈ ಹಬ್ಬದ ಒಂದು ನಂಬಿಕೆಯಂತೆ ಜೀವನದಲ್ಲಿ ಕತ್ತಲೆಯನು/ಕೆಟ್ಟದನ್ನು ದೂರಮಾಡಿ ಒಳ್ಳೆಯದನ್ನು ಸ್ವೀಕರಿಸುವುದು ಎಂದು ತಿಳಿಯಲಾಗಿದೆ. ದೀಪವನ್ನು ಹೀಗೆಯೇ ಭಾವಿಸಲಾಗಿದೆ. ತಮಿಳುನಾಡಿನಲ್ಲಿ ಹಬ್ಬವನ್ನು ಹತ್ತು ದಿನಗಳ ಕಾಲ ಆಚರಿಸಲಾಗುತ್ತದೆ. ಈ ದಿನದಂದು ಎಲ್ಲರು ಹೊಸ ಬಟ್ಟೆಗಳನ್ನು ಧರಿಸಿ, ತಮ್ಮ ಸಂಬಂಧಿಕರೊಂದಿಗೆ ಶುಭಾಷಯಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ.

ತಿರುವಣ್ಣಮಲೈನಲ್ಲಿ ಆಚರಿಸಿಕೊಂಡಿರುವ ಈ ಹಬ್ಬದ ನಂಬಿಕೆಯಂತೆ ಶಿವನು ತಿರುವಣ್ಣಮಲೈ ಬೆಟ್ಟದ ಮೇಲೆ ಬರುತ್ತಾನೆ. ಬೆಳಕಿನ ಮೂಲಕ ಕಾಣಿಸಿಕೊಳ್ಳುತ್ತಾನೆ ಎಂದು ನಂಬಿಕೆ ಇದೆ. ತುಪ್ಪ ಮತ್ತು ಕರ್ಪೂರವನ್ನು ಬಳಸಿ ದೀಪ ಬೆಳಗಿಸಲಾಗುತ್ತದೆ. 'ಅಣ್ಣಮಲೈಯಕ್ಕೋ ಅರೊಹರ' ಎಂದು ಹೇಳಲಾಗುತ್ತದೆ.

**ಆಡಿ ಪೆರುಕ್ಕು:** ತಮಿಳು ಕ್ಯಾಲೆಂಡರ್‌ನ ಆಡಿ ತಿಂಗಳಲ್ಲಿ ಈ ಹಬ್ಬವನ್ನು ಆಚರಿಸಲಾಗುತ್ತದೆ. ಸಾಮಾನ್ಯವಾಗಿ ಜುಲೈ ತಿಂಗಳ ಮಧ್ಯಭಾಗದಲ್ಲಿ ಆರಂಭವಾಗುತ್ತದೆ. ಶ್ರದ್ಧೆ ಮತ್ತು ಭಕ್ತಿಯಿಂದ ಹಬ್ಬವನ್ನು ಆಚರಿಸುತ್ತಾರೆ. ಈ ತಿಂಗಳ ಎಲ್ಲಾ ಶುಕ್ರವಾರಗಳನ್ನು ವಿಶೇಷ ವಾರಗಳೆಂದು ಪರಿಗಣಿಸಲಾಗಿದೆ. ಅಂದು ಸಾವಿರಾರು ಭಕ್ತರು ಶಕ್ತಿ ದೇವಾಲಯಗಳಿಗೆ(ಹೆಣ್ಣು ದೇವರ ದೇವಾಲಯಗಳಿಗೆ) ಭೇಟಿ ನೀಡುತ್ತಾರೆ. 'ಆಡಿ ಪೆರಕ್ಕು' ಎನ್ನುವುದು ಆಡಿ ತಿಂಗಳ ೧೮ನೇ ದಿನವಾಗಿದೆ. ಈ ದಿನದಂದು ಕಾವೇರಿ ನದಿಗೆ ಪೂಜೆ ಸಲ್ಲಿಸುತ್ತಾರೆ. ಈ ದಿನದಂದು ಗ್ರಾಮೀಣ ಪ್ರದೇಶದ ಜನರು ಮತ್ತು ಇತರರು ಕಾವೇರಿ ನದಿಗೆ ದೀಪವನ್ನು ಪೂಜಿಸಿ ತೇಲಿ ಬಿಡುವ ಮೂಲಕ ಆಚರಿಸುತ್ತಾರೆ. ಈ ಆಚರಣೆಯನ್ನು ಹಿರಿಯೂರು ಪರಿಸರದಲ್ಲಿರುವ ತಮಿಳು ಭಾಷಿಕರು ವೇದಾವತಿ ನದಿಗೆ ಪೂಜೆಯನ್ನು ಸಲ್ಲಿಸುವ ಮೂಲಕ ಮತ್ತು ಹೊಸಪೇಟೆ ಪರಿಸರದಲ್ಲಿರುವ ತಮಿಳು ಭಾಷಿಕರು ತುಂಗಾಭದ್ರಾ ನದಿಗೆ ಪೂಜೆ ಸಲ್ಲಿಸುವ ಮೂಲಕ ಆಚರಿಸುತ್ತಾರೆ. ಇನ್ನು ಈ ಹಬ್ಬದಲ್ಲಿ ಹೊಸದಾಗಿ ಮದುವೆಯಾದ ಗಂಡು ಹೆಣ್ಣು ಒಂಭತ್ತು ವಿವಿಧ ರೀತಿಯ ಧಾನ್ಯಗಳನ್ನು ತೆಗೆದುಕೊಂಡು ಹೋಗಿ ನದಿಯ ತೀರದಲ್ಲಿ ಪೂಜೆಸಲ್ಲಿಸುವುದು ರೂಢಿಯಲ್ಲಿದೆ. 'ಆಡಿ' ಎಂಬ ಪದವು ತಮಿಳರ ಒಂದು ಮಾಸವನ್ನು ತಿಳಿಸುತ್ತದೆ. ಕನ್ನಡದಲ್ಲಿ ಆಶಾಢ ಮಾಸವನ್ನು ತಮಿಳಿನಲ್ಲಿ ಆಡಿಮಾಸಂ ಎಂದು ಕರೆಯುತ್ತಾರೆ.

**ಮಹಾಶಿವರಾತ್ರಿ:** ಶೈವ ದೇವಾಲಯಗಳಲ್ಲಿ ಆಚರಿಸಲ್ಪಡುವ ಹಬ್ಬವಾಗಿದ್ದು, ತಮಿಳು ಕ್ಯಾಲೆಂಡರ್‌ನ 'ಮಸೈ' ತಿಂಗಳಲ್ಲಿ ಬರುತ್ತದೆ. ಸಾಮಾನ್ಯವಾಗಿ ಫೆಬ್ರವರಿ-ಮಾರ್ಚ್ ತಿಂಗಳಲ್ಲಿ ಇರುತ್ತದೆ. ಈ ಹಬ್ಬದಂದು ಶಿವನನ್ನು ಪೂಜಿಸುತ್ತಾರೆ. ತಮಿಳು ಭಾಷಿಕರಲ್ಲಿ ಉನ್ನತವರ್ಗಗಳಾದ ಐಯ್ಯಂಗಾರ್, ಐಯ್ಯರ್, ಮೊದಲಿಯಾರ್, ಚಟ್ಟಿಯಾರ್, ವೆಲ್ಲಾಳರ್ ಸಮುದಾಯದವರು ಆಚರಣೆ ಮಾಡುತ್ತಾರೆ. ಕೆಳವರ್ಗಗಳಲ್ಲಿ ಸಾಮಾನ್ಯವಾಗಿ ಆಚರಿಸುವುದು ಕಾಣುತ್ತೇವೆ.

**ಪಿಲ್ಲಯಾರ್ ಚತುರ್ಥಿ:** ಈ ಹಬ್ಬನ್ನು ಕನ್ನಡದಲ್ಲಿ 'ಗಣೇಶ ಚತುರ್ಥಿ' ಎಂದು ಕರೆಯುತ್ತಾರೆ. ತಮಿಳು ಕ್ಯಾಲೆಂಡರ್‌ನ 'ಅವನಿ' ತಿಂಗಳಲ್ಲಿ ಆಚರಿಸಲಾಗುತ್ತದೆ. ಇಂಗ್ಲಿಷ್ ಕ್ಯಾಲೆಂಡರ್‌ನ ಆಗಸ್ಟ್-ಸೆಪ್ಟೆಂಬರ್ ತಿಂಗಳಲ್ಲಿ ಆಚರಿಸಲಾಗುತ್ತದೆ. ಈ ದಿನದಂದು ಕರ್ನಾಟಕದಲ್ಲಿ ಪೂಜಿಸುವಂತೆ ತಮಿಳುನಾಡಿನಲ್ಲಿ ಗಣೇಶ ಮೂತಿಯನ್ನು ಪೂಜಿಸುತ್ತಿರಲಿಲ್ಲ. ಇವರುಗಳು ಮಣ್ಣಿನಿಂದ ಅಥವಾ ಸಗಣಿಯಿಂದ ಸಣ್ಣ ಮೂರ್ತಿಯನ್ನು ಮಾಡಿ ಅದಕ್ಕೆ 'ಅರುಗಂಪುಲ' ಎನ್ನುವ ಒಂದು ಜಾತಿ ಹುಲ್ಲನ್ನು ಸೇರಿಸಿ ಮೂರ್ತಿಯನ್ನು ಮಾಡಿ ಪೂಜಿಸುತ್ತಾರೆ. ಇದಕ್ಕೆ 'ಪಿಲ್ಲಯಾರ್' ಎಂದು ಬಳಕೆಯಲ್ಲಿದೆ. ಇದು ಕನ್ನಡದ ಪರಿಸರದಲ್ಲಿ 'ಪಿಳ್ಳೆರಾಯ' 'ಪಿಳ್ಳೆಪ್ಪ' ಎಂದು ಬಳಕೆಯಲ್ಲಿದೆ. ಈ ದಿನದಂದು ಮೊದಕವನ್ನು ವಿಶೇಷ ತಿನಿಸಾಗಿ ಮಾಡುತ್ತಾರೆ. ಈ ರೀತಿಯ ಆಚರಣೆಯು ಪ್ರಸ್ತುತ ದಿನಗಳಲ್ಲಿ ಸಾಂಕೇತಿಕವಾಗಿ ನಡೆಯುತ್ತಿದೆ. ಉತ್ತರ ಭಾರತದಲ್ಲಿ ಮಾಡುವಂತೆ ಗಣೇಶ ಮೂರ್ತಿಗಳನ್ನು ತಂದು ಪೂಜಿಸಿ, ನೀರಿಗೆ ಬಿಡುವ ಆಚರಣೆಗಳನ್ನು ಕಾಣಬಹುದು. ಈ ಹಬ್ಬದಿಂದ ಮುಖ್ಯವಾಗಿ ಗಮನಿಸಬೇಕಾಗಿರುವ ಅಂಶವೆಂದರೆ ದಕ್ಷಿಣ ಭಾರತದಲ್ಲಿ ಗಣೇಶನಿಗೆ ಪರ್ಯಾಯವಾಗಿ ಪಿಳ್ಳೆರಾಯನನ್ನು ಮೂರ್ತಿಯಾಗಿ ಮಾಡಿ ಪೂಜಿಸುತ್ತಿದ್ದರು. ಇಂದು ಬದಲಾಗಿ ಕೇವಲ ಸಾಂಕೇತಿಕ ರೂಪವಾಗಿ ಮಾತ್ರ ಬಳಕೆಯಾಗುತ್ತಿದೆ.

**ಗೋಕುಲಾಷ್ಟಮಿ:** ಈ ಹಬ್ಬವನ್ನು ಪಿಲ್ಲಯಾರ್ ಹಬ್ಬದ ಹತ್ತಿರದಲ್ಲಿಯೇ ಆಚರಿಸುತ್ತಾರೆ. ಗೋಕುಲಾಷ್ಟಮಿಯನ್ನು ಕೃಷ್ಣನ ಜನ್ಮಾಷ್ಟಮಿಯಾಗಿ ಆಚರಣೆ ಮಾಡಲಾಗುತ್ತದೆ. ಇದನ್ನು ತಮಿಳು ಕ್ಯಾಲೆಂಡರ್‌ನ ಅವನಿ ತಿಂಗಳಲ್ಲಿ ಆಚರಿಸಲಾಗುತ್ತದೆ. ಈ ಹಬ್ಬವನ್ನು ಕೃಷ್ಣಜನ್ಮಾಷ್ಟಮಿ, ಜನ್ಮ ಅಷ್ಟಮಿ, ಗೋಕುಲಾಷ್ಟಮಿ ಮತ್ತು ಶ್ರೀ ಜಯಂತಿ ಎಂಬ ಹೆಸರುಗಳಿಂದ ಕರೆಯುವುದು ರೂಢಿಯಲ್ಲಿದೆ. ಈ ದಿನದಂದು ಕೃಷ್ಣನಿಗೆ ವಿಶೇಷ ಪೂಜೆ ಮಾಡುತ್ತಾರೆ.

**ನವರಾತ್ರಿ:** ಇಂಗ್ಲಿಷ್ ಕ್ಯಾಲೆಂಡರ್‌ನ ಸೆಪ್ಟೆಂಬರ್ ತಿಂಗಳಲ್ಲಿ ಆಚರಿಸುವ ಈ ಹಬ್ಬವನ್ನು ನವರಾತ್ರಿ ಎನ್ನುತ್ತಾರೆ. ಆದರೆ ತಮಿಳು ಭಾಷಿಕರು ಇದನ್ನು ಭಾಷಾದ್ವೀಪದಲ್ಲಿರುವ ತಮಿಳು ಭಾಷಿಕರು 'ದಸರೆ' ಎಂದು ಬಳಕೆ ಮಾಡುತ್ತಾರೆ. ಒಟ್ಟು ೯ ದಿನಗಳ ಹಬ್ಬವಾಗಿದ್ದು, ಕೊನೆಯ ದಿನ ಆಯುಧ ಪೂಜೆ ಮಾಡುತ್ತಾರೆ. ಈ ಹಬ್ಬದಂದು ಆಯುಧ ಪೂಜೆಯನ್ನು ಸರಸ್ವತಿ ಪೂಜೆ ಎಂದು ಸಹ ಬಳಕೆಯಲ್ಲಿದೆ. ಇದನ್ನು ವಿಜಯದಶಮಿ ಎಂದು ಕರೆಯುತ್ತಾರೆ. ಈ ದಿನದಂದು ಗೊಂಬೆಗಳನ್ನಿಟ್ಟು ಪೂಜಿಸುತ್ತಾರೆ. ಆದರೆ ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿರುವ ತಮಿಳರು ಈ ರೀತಿಯ ಗೊಂಬೆಗಳ ಪೂಜೆಯನ್ನು ಮಾಡುವುದು ಕಡಿಮೆಯಾಗಿದೆ. ಕೆಲವೇ ಕೆಲವು ಮನೆಗಳಲ್ಲಿ ಗೊಂಬೆಗಳ ಪೂಜೆಯನ್ನು ಮಾಡುತ್ತಾರೆ.

**ದೀಪಾವಳಿ:** ಈ ಹಬ್ಬವನ್ನು ಇಂಗ್ಲಿಷ್ ಕ್ಯಾಲೆಂಡರ್‌ನ ನವಂಬರ್ ತಿಂಗಳಲ್ಲಿ ಆಚರಣೆ ಮಾಡುತ್ತಾರೆ. ಈ ಹಬ್ಬವನ್ನು ದೀಪಗಳ ಹಬ್ಬ ಎಂದು ಕರೆಯಲಾಗುತ್ತದೆ. ಉತ್ತರ ಭಾರತದಲ್ಲಿ ದೀಪಾವಳಿ ಹಬ್ಬವನ್ನು ಲಕ್ಷ್ಮೀ ಹಬ್ಬವೆಂದು ಹಾಗೂ ರಾಮನು ೧೪ ವರ್ಷಗಳ ಕಾಲ ಕಾಡಿನ ವನವಾಸದಿಂದ ಮರಳಿದ ಕಾರಣಕ್ಕೆ ಆಚರಿಸುತ್ತಾರೆ. ಆದರೆ ತಮಿಳು ಭಾಷಿಕರ ನಂಬಿಕೆಯಂತೆ ನರಕಾಸುರನನ್ನು ಕೃಷ್ಣ ಕೊಂದಿದ್ದರ ಪ್ರತೀಕವಾಗಿ ಈ ಹಬ್ಬವನ್ನು ಆಚರಿಸುತ್ತಾರೆ.

**ಕಾರ್ತಿಕೇಯ ದೀಪಮ್:** ಈ ಹಬ್ಬವನ್ನು ಇಂಗ್ಲಿಷ್ ಕ್ಯಾಲೆಂಡರ್‌ನ ನವೆಂಬರ್-ಡಿಸೆಂಬರ್ ತಿಂಗಳಲ್ಲಿ ಆಚರಿಸುತ್ತಾರೆ. ತಮಿಳು ಕ್ಯಾಲೆಂಡರ್‌ನಲ್ಲಿ 'ಕಾರ್ತಿಕೈ ಮಾಸಂ' ಎಂದು ಕರೆಯುತ್ತಾರೆ. ಕಾರ್ತಿಕೈ ತಿಂಗಳ ಪೌರ್ಣಮಿಯಂದು ಈ ದಿನವನ್ನು ಆಚರಿಸುತ್ತಾರೆ. ಈ ದಿನ ದೇವಾಲಯಗಳಲ್ಲಿ ಮತ್ತು ಮನೆಯಲ್ಲಿ ಮಣ್ಣಿನ ದೀಪಗಳನ್ನು ವಿಶೇಷವಾಗಿ ರಂಗೋಲಿ ಮತ್ತು ಹೂವುಗಳಿಂದ ಅಲಂಕರಿಸಿ ದೀಪ ಬೆಳಗಿಸುತ್ತಾರೆ. ಅದರೊಂದಿಗೆ ದೇವರುಗಳಿಗೆ ಪೂಜೆಸಲ್ಲಿಸಿ ವಿಶೇಷವಾಗಿ ಆಚರಿಸುತ್ತಾರೆ. ಕೆಲವರು ತಮಿಳುನಾಡಿನ ವಿವಿಧ ದೇವಾಲಯಗಳಿಗೆ ಭೇಟಿ ನೀಡುತ್ತಾರೆ. ಅದೇ ರೀತಿಯಲ್ಲಿ ಕರ್ನಾಟಕದಲ್ಲಿರುವ ತಮಿಳು ಭಾಷಿಕರು ಇಲ್ಲಿನ ವಿವಿಧ ದೇವಾಲಯಗಳಿಗೆ ಭೇಟಿ ನೀಡಿ ಪೂಜಿಸುತ್ತಾರೆ.

**ತಮಿಳು ಭಾಷಿಕರಲ್ಲಿರುವ ಮುಸ್ಲಿಂರು ಆಚರಿಸುವ ಹಬ್ಬಗಳು:**

ತಮಿಳು ಭಾಷಿಕರಲ್ಲಿಯೂ ತಮಿಳುನಾಡಿನಿಂದ ವಲಸೆ ಬಂದಿರುವ ಮುಸ್ಲಿಂ ಧರ್ಮದವರು ಇದ್ದಾರೆ. ಇವರುಗಳು ಹಿರಿಯೂರು ಮತ್ತು ಹೊಸಪೇಟೆಯ ಪರಿಸರದಲ್ಲಿ ವಾಸವಾಗಿದ್ದು, ಇವರುಗಳನ್ನು ಮುಸ್ಲಿಂನ ಲಬ್ಬೆ ಸಮುದಾಯದವರು ಎಂದು ಕರೆಯುತ್ತಾರೆ. ಇವರುಗಳು ರಂಜಾನ್, ಬಕ್ರೀದ್, ಮೊಹರಂ ಹಬ್ಬಗಳನ್ನು ಆಚರಣೆ ಮಾಡುತ್ತಾರೆ.

**ಕ್ರಿಶ್ಚಿಯನ್ ಸಮುದಾಯದವರು ಆಚರಿಸುವ ಹಬ್ಬಗಳು:**

ತಮಿಳಿನ ಗುರುಸ್ವಾಮಿ ಕಂಡಾರ್ ಸಮುದಾಯದವರು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದಿ ಕ್ರಿಶ್ಚಿಯನ್ ಸಂಪ್ರದಾಯವನ್ನು ಆಚರಿಸುತ್ತಿದ್ದಾರೆ. ಇಲ್ಲಿ ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಕ್ರಿಶ್ಚಿಯನ್ ತಮಿಳರು ವಾಸವಾಗಿದ್ದಾರೆ. ಇಂದಿಗೂ ಕ್ರಿಶ್ಚಿಯನ್ ಧರ್ಮಕ್ಕೆ ಸಂಬಂಧಿಸಿದ ಆಚರಣೆಗಳನ್ನು ಆಚರಿಸುತ್ತಾರೆ. ಕ್ರಿಸ್‌ಮಸ್ ಮತ್ತು ಗುಡ್ ಫ್ರೈಡೆ ಹಬ್ಬಗಳನ್ನು ಆಚರಿಸುತ್ತಾರೆ.

ಹೀಗೆ ಕರ್ನಾಟಕದಲ್ಲಿರುವ ತಮಿಳು ಭಾಷಿಕರು ಆಚರಿಸುವ ಹಬ್ಬಗಳನ್ನು ಕಾಣಬಹುದು. ಇನ್ನು ತಮಿಳಿನಾಡಿನಲ್ಲಿ ಕೆಲವು ಹಬ್ಬಗಳ ಆಚರಣೆಯ ಕುರಿತು ತಿಳಿಸುತ್ತಾರೆ. ಅವುಗಳನ್ನು ಇಲ್ಲಿ ಆಚರಿಸುವುದು ಕಡಿಮೆ. ಅವುಗಳೆಂದರೆ ವೈಕುಂಠ ಏಕಾದಶಿ, ಪಂಗುಣಿ ಉತ್ತಿರಮ್, ಸ್ಕಂದಶಷ್ಠಿ, ವೈಗಾಸಿ ವಿಸಗಂ ಹಬ್ಬ ಸೇರಿದೆ.

ತಮಿಳು ಭಾಷಿಕರ ಒಟ್ಟು ಹಬ್ಬಗಳನ್ನು ಗಮನಿಸಿದಾಗ ಗೋಕುಲಾಷ್ಟಮಿ, ನವರಾತ್ರಿ, ದೀಪಾವಳಿ, ಸ್ಕಂದಶಷ್ಠಿ, ವೈಕುಂಠ ಏಕಾದಶಿ, ರಾಮನವಮಿ, ಲಕ್ಷ್ಮಿವ್ರತ ಹೀಗೆ ಬೇರೆ ಬೇರೆ ಹಬ್ಬಗಳು ಉತ್ತರ ಭಾರತದ ಆಚರಣೆಗಳಿಂದ ಬಂದಿರುವವಾಗಿವೆ. ಸಂಸ್ಕೃತ ಭಾಷೆಯಲ್ಲಿ ಬಳಕೆಯಲ್ಲಿರುವಂತೆ ಬಳಕೆಯಲ್ಲಿದೆ. ರೂಪಗಳಿಂದ ಇನ್ನುಳಿದಂತೆ ಆಡಿಪೆರುಕ್ಕು ಪೊಂಗಲ್, ಪಂಗುಣಿ ಉತ್ತಿರೆ, ಪುಳ್ಳಿಯಾರ್ ಹಬ್ಬಗಳು ಮೂಲ ತಮಿಳು ಭಾಷಿಕರ ಸಂಸ್ಕೃತಿಯಿಂದಲೇ ಬಳಕೆಯಲ್ಲಿವೆ. ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಮುರುಗನ್ ಜಾತ್ರೆಯನ್ನು ಮಾಡುವುದು ಕಾಣಬಹುದು. ಅವರು ವಾಸಿಸುವ ಪ್ರದೇಶಗಳಲ್ಲಿ ಮುರುಗನ್ ದೇವಾಲಯವನ್ನು ನಿರ್ಮಿಸಿಕೊಂಡು ಜಾತ್ರೆಗಳನ್ನು ಮಾಡುತ್ತಾರೆ.

**೫.೬.೨. ನಂಬಿಕೆಗಳು**

ಪ್ರತಿ ಮಾನವರ ಜೀವನದಲ್ಲಿಯೂ ಕೆಲವು ಪ್ರಾಕೃತಿಕ ಮತ್ತು ಸ್ವಾಭಾವಿಕ ನಂಬಿಕೆಗಳು ಇರುತ್ತವೆ. ಇವುಗಳು ಮಾನವರ ಜೀವನದ ಬಹು ಹಿಂದಿನಿಂದಲೂ ಕೆಲವು ಅನುಭವದ ಹಿನ್ನೆಲೆಯಿಂದ ಮತ್ತು ಕೆಲವು ಪರಿಸರದ ಹಿನ್ನೆಲೆಯಲ್ಲಿ ರೂಢಿಯಾಗಿರುತ್ತವೆ. ಆದರೆ ಇವುಗಳ ವಾಸ್ತವವಾಗಿ ಏಕೆ ಪ್ರಸ್ತುತ, ಬಳಕೆಯಿಂದ ಆಗುವ ಅನುಕೂಲ ಮತ್ತು ಅನಾನುಕೂಲಗಳ ಕುರಿತ ಚರ್ಚೆಗಳಿವೆ. ಆದರೆ ಸಮುದಾಯಗಳ ಅಧ್ಯಯನಗಳಲ್ಲಿ ಸಮಾನ್ಯವಾಗಿ ಬದುಕಿನಲ್ಲಿ ರೂಢಿಸಿಕೊಂಡಿರುವ ನಂಬಿಕೆ ಮತ್ತು ಆಚರಣೆಗಳನ್ನು ಗುರುತಿಸುವ ಆ ಮೂಲಕ ಭಾಷೆ, ಸಮುದಾಯ, ಸಂಸ್ಕೃತಿ, ಪರಿಸರಕ್ಕಿರುವ ಸಂಬಂಧಗಳನ್ನು ತಿಳಿಯಲಾಗುತ್ತದೆ. ಈ ನಂಬಿಕೆಗಳು ಪರಿಸರದ ಸ್ವಾಭಾವಿಕ ಗುಣಗಳನ್ನು ಅನುಸರಿಸಿ ರಚನೆಯಾಗಿರುತ್ತವೆ. ಈ ಹಿನ್ನೆಲೆಯಲ್ಲಿ ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿರುವ ತಮಿಳು ಭಾಷಿಕರಲ್ಲಿ ಬಳಕೆಯಲ್ಲಿರುವ ನಂಬಿಕೆಗಳನ್ನು ಸಂಗ್ರಹಿಸಿ ಕೆಲವು ವಿಶೇಷತೆಯನ್ನು ಕಂಡುಕೊಳ್ಳಲಾಗಿದೆ. ಈ ಸಮುದಾಯಗಳಲ್ಲಿ ಬಳಕೆಯಲ್ಲಿರುವ ನಂಬಿಕೆಗಳು ಬಹುತೇಕ ಕನ್ನಡದ ಪರಿಸರದಲ್ಲಿ ಬಳಕೆಯಲ್ಲಿರುವ ನಂಬಿಕೆಗಳಿಗೆ ಸಮಾನವಾಗಿರುವುದು ಕಾಣಬಹುದು. ತಮಿಳು ಭಾಷಿಕರಲ್ಲಿ ಬಳಕೆಯಲ್ಲಿರುವ ನಂಬಿಕೆಗಳು ಈ ಕೆಳಗಿನಂತಿವೆ.

**ಪ್ರಯಾಣ ಸಂದರ್ಭದಲ್ಲಿ ಬಳಕೆಯಾಗುವ ನಂಬಿಕೆಗಳು:**

* ಎಲ್ಲಾದರೂ ಹೊರಡುವ ಮುನ್ನ ಎಡದಿಂದ ಬಲಕ್ಕೆ ಗರುಡ, ನಾಯಿ, ಅಳಿಲು ಹೋದರೆ ಒಳ್ಳೆಯದು ಎಂದು ನಂಬಿಕೆಯಿದೆ.
* ಎಲ್ಲಾಗಾದರೂ ಹೋಗುವ ಮುನ್ನ ಹಾವು, ಬೆಕ್ಕು, ಸನ್ಯಾಸಿ, ಒಂಟಿ ಬ್ರಾಹ್ಮಣ, ವಿಧವೆ ಅಡ್ಡ ಬಂದರೆ ಒಳ್ಳೆಯ ಶಕುನವಲ್ಲ.
* ಎಲ್ಲಿಗಾದರೂ ಹೊರಡುವ ಮುನ್ನ ಮನೆಯ ಮೇಲೆ ಗರುಡ ಸುತ್ತಿದರೆ ಒಳ್ಳೆಯ ಸಂಕೇತವೆಂದು ನಂಬುತ್ತಾರೆ.
* ಸೋಮವಾರ ಅಥವಾ ಶನಿವಾರ ಪೂರ್ವದಿಕ್ಕಿಗೆ ಹೋಗಬಾರದು.
* ಮಂಗಳವಾರ ಅಥವಾ ಬುಧವಾರ ಉತ್ತರಧಿಕ್ಕಿಗೆ ಹೋಗಬಾರದು.

* ಭಾನುವಾರ ಆತವಾ ಶುಕ್ರವಾರ ಪಶ್ಚಿಮಕ್ಕೆ ಹೋಗಬಾರದು.

* ಎಲ್ಲಿಗಾದರೂ ಹೋಗುವ ಮುನ್ನ ಹೂವ, ಮುತ್ತೈದೆ ಅಥವಾ ತಂಬಿದ ಕೊಡ ಎದುರಾದರೆ ಒಳ್ಳೆಯ ಸಂಕೇತ.

* ರಾಹು ಕಾಲದಲ್ಲಿ ಪ್ರಯಾಣ ಆರಂಭಿಸುವುದಿಲ್ಲ.

* ಶುಕ್ರವಾರದಂದು ಹೆಣ್ಣುಮಕ್ಕಳನ್ನು ಮನೆಯಿಂದ ತವರು ಮನೆಗೆ ಅಥವಾ ಗಂಡನ ಮನೆಗೆ ಕಳುಹಿಸುವುದಿಲ್ಲ.

**ಮಕ್ಕಳ ಬಗೆಗಿನ ನಂಬಿಕೆಗಳು:**

* ಚಿಕ್ಕಮಕ್ಕಳಿಗೆ ಮಾತು ಬರುವ ಮುನ್ನ ಕನ್ನಡಿಯನ್ನು ತೋರಿಸಬಾರದು.

* ಮಗುವಿನ ಮೊದಲ ಹಲ್ಲು ಬಿದ್ದಾಗ ಅದನ್ನು ಎಚ್ಚರದಿಂದ ಸಗಣಿ ಉಂಡೆಯಲ್ಲಿ ಇಟ್ಟು ಮನೆ ಮೇಲಿನ ಛಾವಣಿಗೆ ಎಸೆಯಬೇಕು.

* ಮೊದಲ ಎರಡು ಮಕ್ಕಳು ಹುಟ್ಟುತ್ತಲೇ ಸತ್ತರೆ, ಮೂರನೇ ಮಗು ಹುಟ್ಟಿದಾಕ್ಷಣ ಮಗುವಿನ ಮೂಗಿಗೆ ಚಿನ್ನದ ಸೂಜಿ ಸುಚ್ಚುತ್ತಾರೆ. ಈ ಮಗುವಿಗೆ ಕುಪ್ಪುಸ್ವಾಮಿ, ಕುಪ್ಪಮ್ಮ, ಪಕ್ಕುರಿ ಎಂದು ಹೆಸರುಗಳನ್ನು ಇಡುತ್ತಾರೆ.

**ಸೂರ್ಯನನ್ನು ಆಧರಿಸಿ ಇರುವ ನಂಬಿಕೆಗಳು:**

* ಕತ್ತಲಾದ ಮೇಲೆ ತಲೆಗೂದಲು ಮತ್ತು ಉಗುರುಗಳನ್ನು ಕತ್ತರಿಸಬಾರದು.

* ಹಾವು, ಕ್ಷೌರಿಕ, ಕತ್ತೆ ಇತರೆ ಕೆಲವು ಹೆಸರುಗಳನ್ನು ಹೇಳುವಂತಿಲ್ಲ. ಈ ಹೆಸರುಗಳನ್ನು ಸೂರ್ಯಾಸ್ತಮಾನದ ನಂತರ ಬಳಕೆಯಿಂದ ನಿರ್ಬಂಧಿಸಿದೆ.

* ಸೂಜಿ, ಉಪ್ಪು, ಕುಂಕುಮ ವಸ್ತುಗಳನ್ನು ಸೂರ್ಯಾಸ್ತಮಾನದ ನಂತರ ಕೊಡುವುದಿಲ್ಲ.

* ಸೂರ್ಯಾಸ್ತಮಾನದ ನಂತರ ಮನೆಯಿಂದ ಉರಿಯುವ ಕೆಂಡವನ್ನು ಕೊಡುವುದಿಲ್ಲ.

* ಸೂರ್ಯೋದಯದ ನಂತರ ಅಥವಾ ಬೆಳಗ್ಗೆ ಎದ್ದಾಕ್ಷಣ ತುಂಬಿದ ಕೊಡ, ಧ್ವಜ, ಸೂರ್ಯನ ಬೆಳಕು, ಅರಿಶಿನ ಇವುಗಳನ್ನು ನೋಡಿದರೆ ಶುಭ ಸಂಕೇತ.

**ಧಾರ್ಮಿಕ ನಂಬಿಕೆಗಳು:**

* ಮಕ್ಕಳ ಮೊದಲ ಮುಡಿಯನ್ನು ಮನೆಯ ದೇವರಿಗೆ ಅರ್ಪಿಸಬೇಕು.

* ತೆಂಗಿನ ಕಾಯನ್ನು ಒಡೆದಾಗ ಅದು ಎರಡು ಸಮವಾದ ಭಾಗಗಳಾಗಿ ಸೀಳಬೇಕು. ಕಾಯಿಯು ಕಣ್ಣಿನ ಮೇಲೆ ಸೀಳಿಕೊಳ್ಳಬಾರದು.

* ದೇವರಿಗೆ ಹೊಡದ ತೆಂಗಿನ ಕಾಯಿಯಲ್ಲಿ ಕೊಳೆತ ತೆಂಗಿನಕಾಯಿ ಭಕ್ತನಿಗೆ ಬರಬಾರದು. ಇದು ವಿಪತ್ತಿನ ಸಂಕೇತ.

**ದಿಕ್ಕುಗಳ ಕುರಿತು ಇರುವ ನಂಬಿಕೆಗಳು:**

* ಉತ್ತರಕ್ಕೆ ತಲೆಹಾಕಿ, ದಕ್ಷಿಣಕ್ಕೆ ಕಾಲುಚಾಚಿ ಮಲಗಬಾರದು.

* ತೋಟದಲ್ಲಿ ಬಾಳೆಯ ಗಿಡ ಯಾವ ದಿಕ್ಕಿಗೆ ಬೆಳೆಯುತ್ತದೆ ಎಂಬುದರ ಬಗ್ಗೆ ಒಂದು ನಂಬಿಕೆ ಇದೆ. ಅದು ಉತ್ತರ ದಿಕ್ಕಿಗೆ ಮೊಳಕೆಯೊಡೆದರೆ ಅದು ಮುಂದಿನ ಅನಾಹುತವೊಂದನ್ನು ಸೂಚಿಸುತ್ತದೆ. ಬೇರೆಯ ದಿಕ್ಕಿಗೆ ಮೊಳಕೆಯೊಡೆದರೆ ಅಭಿವೃದ್ಧಿ ಸಂಕೇತವಾಗಿದೆ ಎಂದು ನಂಬಿಕೆಯಿದೆ.

**ನಕ್ಷತ್ರಗಳ ಕುರಿತು ಇರುವ ನಂಬಿಕೆಗಳು:**

* ಮಕ್ಕಳು ಚಿತ್ತಿರೈ ನಕ್ಷತ್ರದಲ್ಲಿ, ಸ್ವಾತಿ ನಕ್ಷತ್ರದಲ್ಲಿ ಹುಟ್ಟಬಾರದು.

* ಮೂಲ ನಕ್ಷತ್ರದಲ್ಲಿ ಗಂಡು ಮಗು ಹುಟ್ಟಬಹುದು. ಆದರೆ ಈ ನಕ್ಷತ್ರದಲ್ಲಿ ಹೆಣ್ಣುಮಗು ಹುಟ್ಟಬಾರದು.

* ಅವಿಟ್ಟಂ ನಕ್ಷತ್ರದಲ್ಲಿ ಹುಟ್ಟುವ ಹೆಣ್ಣು ಹೊಟ್ಟಿನ ಗಡಿಗೆಯಲ್ಲೂ ಸಹ ಚಿನ್ನವನ್ನು ಕಾಣುತ್ತಾಳೆ.

* ಒಂದು, ಎರಡನೇ, ಮೂರನೇಯ ಹೀಗೆ ಹೆಣ್ಣುಮಕ್ಕಳು ಹುಟ್ಟಿನ ಸರಣಿಯಲ್ಲಿ ಬೆಸಸಂಖ್ಯೆಯನ್ನು ಪಡೆದು ಹುಟ್ಟಬೇಕು. ನಾಲ್ಕನೆಯವಳಾಗಿ ಹುಟ್ಟಿದ ಮಗಳು ಮನೆಯನ್ನು ಹಾಳು ಮಾಡುತ್ತಾಳೆ.

ಹೀಗೆ ತಮಿಳು ಭಾಷಿಕರು ತಮ್ಮ ಬದುಕಿನಲ್ಲಿ ಕೆಲವು ನಂಬಿಕೆಗಳನ್ನು ಬಳಕೆ ಮಾಡುತ್ತಿರುವುದು ಕಾಣಬಹುದು. ಕೆಲವುಗಳ ಬಳಕೆಯಲ್ಲಿ ತಮಿಳು ಭಾಷೆಯ ಪದಗಳನ್ನು ಬಳಕೆ ಮಾಡುತ್ತಾರೆ. ಮೇಲೆ ತಿಳಿಸಿದಂತೆ ನಕ್ಷತ್ರಗಳ ಕುರಿತಂತೆ ನಂಬಿಕೆಗಳನ್ನು ಹೇಳುವಾಗ ನಕ್ಷತ್ರಗಳ ಹೆಸರುಗಳನ್ನು ತಮಿಳಿನಲ್ಲಿ ಬಳಕೆ ಮಾಡುವ ಮೂಲಕ(ಚಿತ್ತಿರೈ, ಅವಿಟ್ಟಂ) ನಂಬಿಕೆಗಳ ಬಳಕೆ ಮಾಡುತ್ತಿರುವುದು ಕಾಣಬಹುದು. ಭಾಷಾದ್ವೀಪಗಳಲ್ಲಿ ವಾಸವಾಗಿರುವ ತಮಿಳು ಭಾಷಿಕರು ಕನ್ನಡದಲ್ಲಿ ಕೆಲವು ನಂಬಿಕೆ ಅಥವಾ ಆಚರಣೆಗಳನ್ನು ತಿಳಿಸಿದರು ಇದರಲ್ಲಿ ಕೆಲವು ನಾಮಪಗಳನ್ನು ತಮಿಳಿನ ಪದಗಳನ್ನು ಬಳಕೆ ಮಾಡುತ್ತಾರೆ. ಈ ಮೂಲಕ ತಮಿಳು ಭಾಷಾಪ್ರಯೋಗಗಳು ಇನ್ನು ಹಾಗೆಯೇ ಉಳಿದುಕೊಂಡಿವೆ.

ಒಟ್ಟಾರೆಯಾಗಿ ತಮಿಳು ಭಾಷಿಕರ ಬಳಕೆಯಲ್ಲಿರುವ ನಂಬಿಕೆಗಳು ಪರಿಸರದ ದಿಕ್ಕುಗಳು, ನಕ್ಷತ್ರಗಳು, ನೈಸರ್ಗಿಕ ಬದಲಾವಣೆಗಳು ಮತ್ತು ಇತರೆ ಸಾಮಾಜಿಕ ಅಂಶಗಳನ್ನು ಬಳಕೆ ಮಾಡುತ್ತಿದ್ದಾರೆ. ಕಾಣಬಹುದು.

**೩.೬.೩. ಬದುಕಿನ ಕ್ರಮಗಳು:**

ಬದುಕಿನ ಕ್ರಮಗಳು ಎಂದು ತಮಿಳು ಭಾಷಿಕರು ಜೀವನ ಶೈಲಿಯನ್ನು, ಭಾಷಾದ್ವೀಪಗಳಲ್ಲಿ ವಿಶೇಷವಾಗಿ ಕಂಡುಬರುವ ಅಂಶಗಳು(ತಮಿಳು ಭಾಷಿಕರ ಸಮಾಜ, ಮನೆಗಳು) ಸೇರಿವೆ. ಈ ಉಪ ಘಟಕದಲ್ಲಿ ತಮಿಳರ ಬದುಕಿನ ಕ್ರಮಗಳನ್ನು ಸಂಗ್ರಹಿಸಿ ಕನ್ನಡದ ಪರಿಸರದಲ್ಲಿ ತಮಿಳರನ್ನು ಬದುಕಿನ ಕ್ರಮದ ಮೂಲಕ ಗುರುತಿಸುವುದನ್ನು ವಿವರಿಸುವ ಉದ್ದೇಶ: ಕನ್ನಡದ ಪರಿಸರದಲ್ಲಿರುವ ತಮಿಳು ಭಾಷಿಕರು ಕೇವಲ ಭಾಷೆಯೊಂದರಿಂದಲೇ ತಮಿಳರೆಂದು ಗುರುತಿಸಿಕೊಳ್ಳುವುದಿಲ್ಲ. ಅವರುಗಳನ್ನು ಉಡುಪು, ಜೀವನ ಶೈಲಿ, ಮನೆಯಲ್ಲಿ ಆಚರಿಸುವ ಕೆಲವು ಆಚರಣೆಗಳಿಂದಾಗಿ ಅವರನ್ನು ತಮಿಳು ಭಾಷಿಕರು ಎಂದು ಗುರುತಿಸುತ್ತಾರೆ. ಆದ್ದರಿಂದ ಇವುಗಳಲ್ಲೆವು ತಮಿಳು ಭಾಷಿಕರ ಅಭಿವ್ಯಕ್ತಿ ಕ್ರಮಗಳಾಗಿವೆ. ಭಾಷಿಕವಾಗಿ

ತಮಿಳು ಭಾಷೆ ಅಭಿವ್ಯಕ್ತಿ ಕ್ರಮವಾದರೆ, ಬದುಕಿನ ಕ್ರಮಗಳು ತಮಿಳ ಸಮುದಾಯದ ಬದುಕಿನ ಅಭಿವ್ಯಕ್ತಿ ಕ್ರಮಗಳಾಗಿವೆ. ಇದರಿಂದ ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳರನ್ನು ಕೆಲವು ಬದುಕಿನ ಕ್ರಮಗಳಿಂದ ಇವರು ತಮಿಳು ಭಾಷಿಕರು ಅಥವಾ ತಮಿಳು ಸಮುದಾಯಗಳವರು ಎಂದು ಗುರುತಿಸುತ್ತಾರೆ. ಬದುಕಿನ ಕ್ರಮಗಳು:

* ಮನೆಗಳ ಮುಂದೆ ಹಾಕುವ ರಂಗೋಲಿಗಳಿಂದ ಬಳಸುವುದು
* ಮಹಿಳೆಯರು ತೊಡುವ ತಾಳಿ ಮತ್ತು ಮೂಗುತಿ
* ಉಡುಪುಗಳು

**ಮನೆಗಳ ಮುಂದೆ ಹಾಕುವ ರಂಗೋಲಿಗಳಿಂದ**

ತಮಿಳು ಭಾಷಿಕರ ಮನೆಯ ಮುಂದೆ ಇಂದಿಗೂ ಅಂಗಳಕ್ಕೆ ಆಕಳ/ಎಮ್ಮೆಯ ಸಗಣಿಯಿಂದ ಬಳಿದು ಬೃಹತ್ ಗಾತ್ರದ ಮತ್ತು ಬಣ್ಣ-ಬಣ್ಣದ ರಂಗೋಲಿಗಳನ್ನು ಹಾಕುತ್ತಾರೆ. ರೂಢಿಯಲ್ಲಿದೆ. ಇವುಗಳನ್ನು ತಮಿಳು ಭಾಷೆಯಲ್ಲಿ 'ಕೋಲಂ' ಎಂದು ಕರೆಯಲಾಗುತ್ತದೆ. ಇವರಲ್ಲಿ ಸಾಮಾನ್ಯವಾಗಿ ದಿನನಿತ್ಯದಲ್ಲಿ ಸಾಮಾನ್ಯ ರಂಗೋಲಿಗಳನ್ನು ಹಾಕುತ್ತಾರೆ. ಆದರೆ ವಿಶೇಷ ದಿನಗಳಲ್ಲಿ ಬಣ್ಣ ಬಣ್ಣದಿಂದ ಕೂಡಿದ ಬೃಹತ್ ರಂಗೋಲಿಗಳನ್ನು ಹಾಕುತ್ತಾರೆ. ಇದರೊಂದಿಗೆ ಸಗಣಿಯಿಂದ ಮಾಡಿದ 'ಪಿಲ್ಲರಾಯ', 'ಪುಳ್ಳೈಯಾರ್' ಗಣೇಶನ ಮೂರ್ತಿಗಳನ್ನು ಮಾಡಿ ಇಡುತ್ತಾರೆ. ಇದರೊಂದಿಗೆ ರಂಗೋಲಿಯ ಮೇಲೆ ಹೂವುಗಳನ್ನು ಅದರಲ್ಲೂ ವಿಶೇಷವಾಗಿ ತಂಕಟೆ(ಹಳದಿ ಬಣ್ಣದ) ಹೂಗಳನ್ನು ಬಳಸಿ ಸಿಂಗಾರ ಮಾಡುತ್ತಾರೆ. ಈ ಒಟ್ಟು ಗುಣಗಳನ್ನು ಹೊಂದಿರುವ ರಂಗೋಲಿಗಳನ್ನು ನೋಡಿದಾಕ್ಷಣ ಕನ್ನಡಿಗರು ಇದು ತಮಿಳು ಭಾಷಿಕರ ಮನೆ ಎಂದು ಗುರುತಿಸುತ್ತಾರೆ. ಈ ಸಾಂಸ್ಕೃತಿಕ ಅಭಿವ್ಯಕ್ತಿ ಕ್ರಮವು ಮೂಲ ತಮಿಳು ನಾಡಿನಲ್ಲಿ ಹೆಚ್ಚಾಗಿ ಬಳಕೆಯಲ್ಲಿದೆ. ಅಲ್ಲಿ ಕೋಲಂ(ರಂಗೋಲಿ)ಗೆ ವಿಶೇಷ ದಿನಗಳಲ್ಲಿ ಹೆಚ್ಚಿನ ಸ್ಥಾನವಿದೆ. ವಿಶೇಷ ದಿನಗಳಾದ ಪೊಂಗಲ್, ಆಡಿಪೆರುಕು, ದಿಪಾವಳಿ, ದಸರೆ ಹಬ್ಬಗಳಲ್ಲಿ ಇವುಗಳನ್ನು ಹೆಚ್ಚು ಬಳಕೆ ಮಾಡುತ್ತಾರೆ. ಹೀಗೆ ತಮಿಳುನಾಡಿನಲ್ಲಿ ಬಳಕೆಯಲ್ಲಿರುವ ಈ ಬದುಕಿನ ಕ್ರಮವು ಕರ್ನಾಟಕದಲ್ಲಿಯೂ ಬಳಕೆಯಲ್ಲಿರುವುದು ಕಾಣಬಹುದು. ಇಂದು ತಮಿಳು ಭಾಷಿಕರ ಮನೆಗಳು ಆಧುನಿಕರಣಗೊಳ್ಳುತ್ತಿರುವ ಕಾರಣದಿಂದಾಗಿ ಮತ್ತು ಮನೆಯಂಗಳದ ಕೊರತೆಯಿಂದಾಗಿ ಕೋಲಂಗಳ ಬಳಕೆಯು ಕಡಿಮೆಯಾಗುತ್ತಿದೆ. ಅದರಲ್ಲೂ ಉನ್ನತ ವರ್ಗಗಳಲ್ಲಿ ಇವುಗಳ ಬಳಕೆ ಕಡಿಮೆಯಾಗಿದೆ. ಆದರೆ ಕೆಳವರ್ಗಗಳು ವಾಸಿಸುವ ಪ್ರದೇಶಗಳಲ್ಲಿ ಇವುಗಳನ್ನು ಹೆಚ್ಚಾಗಿ ಕಾಣಬಹುದು.

*** ಸ್ತ್ರೀಯರು ತೊಡುವ ತಾಳಿ ಮತ್ತು ಮೂಗುತಿ**

ದಕ್ಷಿಣ ಭಾರತದ ಮಹಿಳೆಯರು ತೊಡುವ ಆಭರಣಗಳಲ್ಲಿ ತಾಳಿಯು ಒಂದು. ಸ್ತ್ರೀಯರ ತಾಳಿ ಬಳಕೆಯ ಹಿನ್ನೆಲೆಯು ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದಿದೆ. ಆದರೆ ಇದರ ಬಳಕೆಯ ಕುರಿತು ಭಿನ್ನ ಭಿನ್ನ ಚರ್ಚೆಗಳಿವೆ. ಈ ತೊಡುಗೆಯನ್ನು ಬಳಕೆ ಮಾಡುತ್ತಿರವ ಕುರಿತು ಮಂಡಿಸುತ್ತಿರುವ ಉದ್ದೇಶ ಬೇರೆ. ಅಂದರೆ ತಮಿಳರ ಬದುಕಿನ ಅಭಿವ್ಯಕ್ತಿ ಕ್ರಮಗಳಲ್ಲಿ ಒಂದಾದ ಸ್ತ್ರೀಯರು ತೊಡುವ ತಾಳಿಯು ಕನ್ನಡಿಗರು ಬಳಸುವ ತಾಳಿಗಿಂತಲೂ ಭಿನ್ನವಾಗಿರುತ್ತದೆ. ಆದ್ದರಿಂದ ಈ ತಾಳಿಯ ಬಳಕೆಯನ್ನು ತಮಿಳರ ಬದುಕಿನ ಕ್ರಮದಲ್ಲಿ ವಿಶೇಷ ಅಂಶವೆಂದು ಹಾಗೂ ತಮಿಳರ ಅಭಿವ್ಯಕ್ತಿ ಕ್ರಮವೆಂದು ಗುರುತಿಸಿದೆ.

ತಮಿಳರ ಸ್ತ್ರೀಯರು ಬಳಕೆ ಮಾಡುವ ತಾಳಿಯು ಹಳದಿ ದಾರ ಮತ್ತು ಅದಕ್ಕೆ ಕೆಲವು ಮಣಿಗಳನ್ನು, ಬಂಗಾರದ ಪದಕ, ನಾಣ್ಯವನ್ನು ಸೇರಿಸಿ ಬಳಸುತ್ತಾರೆ. ಕರ್ನಾಟಕದಲ್ಲಿಯೂ ಅರಿಶಿಣ ದಾರಿದಿಂದ ಹರಿಶಿನಕೊಂಬನ್ನು ಕಟ್ಟಿ ಸಿದ್ಧಪಡಿಸಿದ ಎಳೆಯನ್ನು ತಾಳಿ ಎಂದು ಕರೆಯುತ್ತಾರೆ. ಆದರೆ ಇದು ಕೇವಲ ಮದುವೆ ಸಮಯದಲ್ಲಿ ಮಾತ್ರ ಬಳಕೆ ಮಾಡುತ್ತಾರೆ. ನಂತರದಲ್ಲಿ ಬೇರೆ ಕರಿಮಣಿಗಳನ್ನು, ಕೆಂಪು ಹವಳಗಳನ್ನು, ಬಂಗಾರದಿಂದ ಮಾಡಿದ ಸರವನ್ನು ಹಾಕಿಕೊಳ್ಳುತ್ತಾರೆ. ಇದನ್ನು ತಾಳಿಯಾಗಿ ಬಳಕೆಯಾಗುತ್ತದೆ. ಆದರೆ ತಮಿಳು ಭಾಷಿಕರು ಇಂದಿಗೂ ಪೂರ್ಣ ಪ್ರಮಾಣದಲ್ಲಿ ಅರಿಶಿಣ ದಾರವನ್ನು ತಾಳಿಯೆಂದು ಬಳಕೆ ಮಾಡುತ್ತಾರೆ. ಮಹಿಳೆಯರಲ್ಲಿ ಈ ರೀತಿ ತಾಳಿಯ ಬಳಕೆಯಿಂದಾಗಿ ಇವರನ್ನು ತಮಿಳರು ಎಂದು ಗುರುತಿಸುತ್ತಾರೆ. ಇದರೊಂದಿಗೆ ಇವರು ಬಳಸುವ ಮೂಗುತಿಯೂ ಕೂಡ ಇವರನ್ನು ಗುರುತಿಸುವ ಕ್ರಮವಾಗಿದೆ. ಅಂದರೆ ತಮಿಳು ಭಾಷಿಕರು ಬಳಸುವ ಮೂಗುತಿಯು ಗಾತ್ರದಲ್ಲಿ ಕನ್ನಡಿಗರು ಬಳಸುವ ಮೂಗುತ್ತಿಗಿಂತಲೂ ದೊಡ್ಡದಿರುತ್ತದೆ. ಆದ್ದರಿಂದ ಇವರು ಬಳಸುವ ಮೂಗುತ್ತಿಯನ್ನು ನೋಡಿದಾಕ್ಷಣದಲ್ಲಿ ಇವರು ತಮಿಳು ಭಾಷಿಕರು ಎಂದು ಗುರುತಿಸುತ್ತಾರೆ.

ಆದರೆ ಕನ್ನಡ ಪರಿಸರದಲ್ಲಿ ಬೆಳೆದಿರುವ ಮೂರು ಮತ್ತು ನಾಲ್ಕನೇ ತಲೆಮಾರಿನ ಸ್ತ್ರೀಯರು ಈ ರೀತಿಯ ತಾಳಿಯನ್ನು ಬಳಕೆ ಮಾಡುವುದು ಕಡಿಮೆಯಾಗಿದೆ. ಅದರಲ್ಲೂ ಕೆಲವು ಉನ್ನತ ವರ್ಗಗಳಲ್ಲಿನ ಸ್ತ್ರೀಯರು ಈ ಶೈಲಿಯ ತಾಳಿಯನ್ನು ಬಳಕೆಯನ್ನು ಕಡಿಮೆ ಮಾಡಿದ್ದಾರೆ. ಆದರೆ ಕೆಳವರ್ಗದವರಲ್ಲಿ ಹಳೆಯ ರೀತಿಯಲ್ಲಿ ಅರಿಶಿಣದ ದಾರವನ್ನೇ ತಾಳಿಯಾಗಿ ಬಳಕೆ ಮಾಡುತ್ತಾರೆ. ಇವರುಗಳು ತಾಳಿಯ ಬಳಕೆಯು ವ್ಯತ್ಯಾಸವಾಗದಿರುವುದಕ್ಕೆ ಕಾರಣ ಆರ್ಥಿಕ ಪರಿಸ್ಥಿತಿಯೂ ಇರಬಹುದು.

*** ಉಡುಪುಗಳು**

ವ್ಯಕ್ತಿಯ ಉಡುಪುಗಳು ಹಲವು ಸಂದರ್ಭಗಳಲ್ಲಿ ಸಾಮಾಜಿಕವಾಗಿ ಅಳೆಯುವ ಮಾಪನವಾಗಿರುತ್ತದೆ. ಇವು ಒಂದು ಸಮುದಾಯದ ಅಥವಾ ವರ್ಗದ ಗುರುತಾಗಿ ಬಳಕೆಯಾಗುತ್ತಿವೆ. ಜಾಗತೀಕರಣದಿಂದಾಗಿ ಇವುಗಳು ಇನ್ನು ಭಿನ್ನವಾಗಿವೆ. ಈ ರೀತಿಯ ಉಡುಪುಗಳು ಸಹ ಒಂದು ಸಮುದಾಯವನ್ನು, ಒಂದು ವರ್ಗವನ್ನು ಗುರುತಿಸುವಲ್ಲಿ ಮುಖ್ಯವಾಗಿವೆ. ಹಾಗೆಯೇ ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿರುವ ತಮಿಳು ಭಾಷಿಕರು ಕೆಲವು ಸಂದರ್ಭಗಳಲ್ಲಿ ಉಡುಪಿನಿಂದಲೂ ಗುರುತಿಸಲ್ಪಡುತ್ತಾರೆ.

ತಮಿಳು ಭಾಷೆಯ ಪುರುಷರು ಸಾಮಾನ್ಯವಾಗಿ ಬಿಳಿ ಅಂಗಿ ಮತ್ತು ಬಿಳಿ ಪಂಚೆ/ಲುಂಗಿಯನ್ನು ಹೆಚ್ಚಾಗಿ ಬಳಕೆ ಮಾಡುತ್ತಿದ್ದರು. ಇಂದು ಅವುಗಳ ಬಳಕೆಯು ಕಡಿಮೆಯಾಗಿದೆ. ಕನ್ನಡದ ಪರಿಸರದಲ್ಲಿ ಬೆರೆತಿರುವ ಕಾರಣ, ಪರಿಸರದ ಬದಲಾವಣೆಯ, ಪರಿಸರದ ಪ್ರಭಾವದಿಂದಾಗಿ ಪ್ಯಾಂಟ್ ಮತ್ತು ಶರ್ಟ್‌ಗಳನ್ನು ಬಳಕೆ ಮಾಡುತ್ತಿದ್ದಾರೆ. ಇಂದಿಗೂ ಎರಡು ಮತ್ತು ಮೂರನೇ ತಲೆಮಾರಿನ ಪುರುಷರು ಬಿಳಿ ಸ್ಲಾಗ್(ಅಂಗಿ), ಪಂಚೆಯನ್ನು ಬಳಕೆ ಮಾಡುತ್ತಾರೆ. ಇದು ಹೆಚ್ಚಾಗಿ ಹಿರಿಯೂರು ಪರಿಸರದ ಗ್ರಾಮಾಂತರ ಪ್ರದೇಶಗಳಲ್ಲಿ ಕಂಡುಬರುತ್ತದೆ.

ಸ್ತ್ರೀಯರು ಉಡುವ ಸೀರೆ ಪದ್ಧತಿಯು ಕನ್ನಡಿಗರಿಗಿಂತ ಭಿನ್ನವಾಗಿರುತ್ತದೆ. ಆದರೆ ಈ ರೀತಿಯ ಸೀರೆ ಉಡುವ ಪದ್ಧತಿಯು ಕಡಿಮೆಯಾಗಿದೆ. ಈ ಹಳೆಯ ಪದ್ಧತಿಯನ್ನು 'ಮಡಿ ಚೀರ(ರಾ)' ಎಂದು ಬಳಕೆ ಮಾಡುತ್ತಾರೆ. ಇದು ತಮಿಳುನಾಡಿನಲ್ಲಿ ಮೊದಲು ಬ್ರಾಹ್ಮಣ ಸಮುದಾಯದ ಹೆಣ್ಣುಮಕ್ಕಳಲ್ಲಿ

ಬಳಕೆಯಲ್ಲಿತ್ತು. ನಂತರದಲ್ಲಿ ಇದು ಬೇರೆ ಸಮುದಾಯದ ಸ್ತ್ರೀಯರಲ್ಲಿಯೂ ಬಳಕೆ ಬಂದಿತು ಎಂದು ಹೇಳುತ್ತಾರೆ. ಈ ಸೀರೆಯನ್ನು ಉಡುವ ಶೈಲಿ ಸೀರೆಯ ಸೆರಗು ಬೆನ್ನ ಹಿಂಭಾಗದಿಂದ ಮುಂಭಾಗಕ್ಕೆ ಇರುತ್ತದೆ. ಹೀಗೆ ಇದು ಕನ್ನಡಿಗರು ಉಡುವ ಸೀರೆಗಿಂತಲೂ ಭಿನ್ನವಾಗಿರುತ್ತದೆ. ಹೀಗೆ ಇದು ತಮಿಳು ಭಾಷಿಕ ಸ್ತ್ರೀಯರ ಗುರುತಾಗಿ ಬಳಕೆಯಲ್ಲಿದೆ. ಇನ್ನು ವಿಧವೆಯಾಗಿರುವವರು ಇದೇ ಶೈಲಿಯಲ್ಲಿ ಬಿಳಿ ಸೀರೆಯನ್ನು ಉಡುತ್ತಿದ್ದರು. ಈ ಶೈಲಿಯನ್ನು ತಮಿಳು ನಾಡಿನ ಕೃಷ್ಣಗಿರಿ ಜಿಲ್ಲೆಯಿಂದ ಬಂದ ತಮಿಳು ಭಾಷಿಕರು ಬಳಕೆ ಮಾಡುತ್ತಿದ್ದರು. ಆದರೆ ಇಂದು ಈ ಶೈಲಿಯ ಉಡುಗೆಯ ಪದ್ಧತಿಯನ್ನು ಬಿಟ್ಟು, ಕರ್ನಾಟಕದ ಸ್ತ್ರೀಯರು ಉಡುವ ರೀತಿಯಲ್ಲಿಯೇ ಸೀರೆಯನ್ನು ಉಡುವುದನ್ನು ರೂಢಿಸಿಕೊಂಡಿದ್ದಾರೆ. ತಮ್ಮ ಹಳೆಯ ಪದ್ಧತಿಯನ್ನು ಬಿಟ್ಟಿದ್ದಾರೆ. ಇದು ಕನ್ನಡದ ಪರಿಸರ ಪ್ರಭಾವದಿಂದಾಗಿ ಬದಲಾಗಿರುವುದು ಕಾಣಬಹುದು. ಅಲ್ಲದೆ ಮೂರು ಮತ್ತು ನಾಲ್ಕನೇ ತಲೆಮಾರಿನ ಸ್ತ್ರೀಯರು ಕನ್ನಡ ಪರಿಸರದಲ್ಲಿ ಶಿಕ್ಷಣ ಮತ್ತು ಸಾಮಾಜಿಕ ಕಾರಣಕ್ಕೆ ಭಾಗಿಗಳಾಗಿರುವುದರಿಂದ ಇವರು ತಮ್ಮ ಹಳೆಯ ಪದ್ಧತಿಯಿಂದ ಬದಲಾಗಿದ್ದಾರೆ.

ಹೀಗೆ ತಮಿಳು ಭಾಷಿಕರ ಬದುಕಿನ ಕ್ರಮದಲ್ಲಿರುವ ಕೆಲವು ಪ್ರಾತಿನಿಧಿಕ ಅಂಶಗಳನ್ನು ಇಲ್ಲಿ ವಿವರಿಸಲಾಗಿದೆ. ಕನ್ನಡದ ಪರಿಸರದಲ್ಲಿ ಇವುಗಳು ತಮಿಳರನ್ನು ಗುರುತಿಸಲು ಇರುವ ಕೆಲವು ಬದುಕಿನ ಕ್ರಮಗಳಾಗಿವೆ. ಕನ್ನಡ ಪರಿಸರದಲ್ಲಿ ಪಾಲ್ಗೊಳ್ಳುವ ಮೂಲಕ ಬದುಕಿನ ಕ್ರಮದಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಳ್ಳುತ್ತಿರುವುದು ಕಾಣಬಹುದು. ಇದಕ್ಕೆ ಕನ್ನಡ ಪರಿಸರ ಒಂದು ರೀತಿಯ ಕಾರಣವಾದರೆ, ಪ್ರಾಕೃತಿಕ ಪರಿಸರವು ಮತ್ತೊಂದು ರೀತಿಯಲ್ಲಿ ಕಾರಣವಾಗಿದೆ. ಇದರೊಂದಿಗೆ ಕರ್ನಾಟಕದ ಜನರಲ್ಲಿ ಆಗುತ್ತಿರುವ ಸಾಮಾಜಿಕ ಮತ್ತು ಜಾಗತಿಕ ಬದಲಾವಣೆಗಳು ಕಾರಣವಾಗಿವೆ.

ಒಟ್ಟಾರೆಯಾಗಿ ತಮಿಳು ಭಾಷಾದ್ವೀಪಗಳಲ್ಲಿರುವ ತಮಿಳು ಭಾಷಿಕರು ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಸಾಮಾಜಿಕವಾಗಿ ಮತ್ತು ಅರ್ಥಿಕವಾಗಿ ಪಾಲ್ಗೊಳ್ಳುವ ಮೂಲಕ ತಮ್ಮ ಜೀವನವನ್ನು ನಿರ್ಮಿಸಿಕೊಂಡಿದ್ದಾರೆ. ಆ ಮೂಲಕ ತಮ್ಮ ಭಾಷೆ ಮತ್ತು ಸಂಸ್ಕೃತಿಯಲ್ಲಿ ಕೆಲವನ್ನು ಉಳಿಸಿಕೊಂಡಿದ್ದಾರೆ. ಇನ್ನು ಕೆಲವನ್ನು ಕನ್ನಡದೊಂದಿಗೆ ಸಮೀಕರಿಸಿಕೊಂಡಿದ್ದಾರೆ. ಇದಕ್ಕೆ ಕನ್ನಡ ಪರಿಸರೊಂದಿಗೆ ಭಾಷಿಕರಲ್ಲಿ ಆಧುನಿಕತೆಯಿಂದ ಆಗುತ್ತಿರುವ ಒತ್ತಡ ಮತ್ತು ಬದಲಾವಣೆಗಳು ಕನ್ನಡಿಗರೊಂದಿಗೆ ಹೊಂದುವ ಮತ್ತು ಬದಲಾವಣೆಯಾಗುವಂತಹ ಸಂದರ್ಭಗಳನ್ನು ತರುತ್ತಿವೆ. ಇದರೊಂದಿಗೆ ಕನ್ನಡದಲ್ಲಿ ಶಿಕ್ಷಣ ಪಡೆಯುತ್ತಿರುವ ಮೂರು ಮತ್ತು ನಾಲ್ಕನೇ ತಲೆಮಾರಿನ ತಮಿಳು ಭಾಷಿಕರು ಕನ್ನಡ ಮತ್ತು ತಮಿಳನ್ನು ಸಮಾನವಾಗಿ ಕಾಣುವ ಆ ಮೂಲಕ ಕನ್ನಡದ ಪರಿಸರದಲ್ಲಿ ತಮಿಳುರು ಅನ್ಯಭಾಷಿಕರಲ್ಲ ಎನ್ನುವ ಹಂತಕ್ಕೆ ತಲುಪಿರುವುದು ಕಂಡುಬರುತ್ತದೆ. ಆದರೆ ಇವುಗಳನ್ನು ಹೊರತುಪಡಿಸಿಯೂ ತಮಿಳು ಭಾಷಿಕರು ಭಾಷಾದ್ವೀಪಗಳ ಆವರಣದಲ್ಲಿ ತಮ್ಮ ಭಾಷೆ, ಸಂಸ್ಕೃತಿ, ಸಮುದಾಯಗಳನ್ನು ಆಚರಣೆಯ ನೆಲೆಯಲ್ಲಿ, ಭಾಷೆಯ ನೆಲೆಯಲ್ಲಿ ಉಳಿಸಿಕೊಂಡಿದ್ದಾರೆ. ಇದರೊಂದಿಗೆ ತಮಿಳರ ಅಭಿವ್ಯಕ್ತಿ ಕ್ರಮದಲ್ಲಿಯೂ ವಿಶೇಷವಾಗಿರುವುದರಿಂದ ಕನ್ನಡಿಗರು ಸಹ ಇವರನ್ನು ಕೆಲವು ಸಂದರ್ಭಗಳಲ್ಲಿ ವಿಶೇಷವಾಗಿ ಕಾಣುತ್ತಾರೆ. ತಮಿಳು ಭಾಷಿಕರು ಎಂದು ಗುರುತಿಸುತ್ತಾರೆ. ತಮಿಳುನಾಡಿನಿಂದ ಬೇರೆ ಬೇರೆ ಕಾರಣಕ್ಕೆ ವಲಸೆ ಬಂದು ನೆಲೆಸಿರುವ ತಮಿಳು ಭಾಷಿಕರು ತಮ್ಮ ಪಾರಂಪಾರಿಕ ವೃತ್ತಿಗಳನ್ನು ಕೆಲವರು ಬಿಟ್ಟಿದ್ದಾರೆ. ಇನ್ನು ಕೆಲವರು ಮುಂದುವರೆಸಿದ್ದಾರೆ. ಸಾಮಾಜಿಕವಾಗಿ ಕನ್ನಡದ ಪರಿಸರದಲ್ಲಿ ಸಂರಚಿತವಾಗಿರುವ ತಮಿಳು ಭಾಷಿಕರು ಕನ್ನಡಿಗರೊಂದಿಗೆ ತಮ್ಮ

ಆರ್ಥಿಕ ಮತ್ತು ಸಾಮಾಜಿಕ ಚಟುವಟಿಕೆಗಳಲ್ಲಿ ಪಾಲ್ಗೊಂಡಿದ್ದಾರೆ. ಇನ್ನು ತಮ್ಮ ಮನೆಯ ಆವರಣದಲ್ಲಿ ತಮಿಳನ್ನು ಮುಖ್ಯ ಭಾಷೆಯಾಗಿ ಬಳಕೆ ಮಾಡುತ್ತಾ, ಪರಿಸರದ ಭಾಷೆಯಾಗಿ ಕನ್ನಡವನ್ನು ಬಳಕೆ ಮಾಡುತ್ತಾರೆ. ಇದರೊಂದಿಗೆ ಲಿಂಗ ಮತ್ತು ವರ್ಗವಾರು ತಮಿಳು ಭಾಷೆಯನ್ನು ಸಂಗೋಪನೆ ಮಾಡುವುದು ಕಾಣಬಹುದು. ತಮಿಳು ಭಾಷೆಯನ್ನು ಕೆಳವರ್ಗದವರು ತಮಿಳು ಭಾಷೆಯನ್ನು ದಿನನಿತ್ಯದ ಬಹುತೇಕ ಆವರಣಗಳಲ್ಲಿ ಹೆಚ್ಚಾಗಿ ಬಳಸುವ ಮೂಲಕ ತಮಿಳನ್ನು ಸಂಗೋಪನೆ ಮಾಡುತ್ತಿದ್ದಾರೆ. ಇನ್ನು ಲಿಂಗಾಧಾರಿತವಾಗಿ ಸ್ತ್ರೀಯರು ತಮ್ಮ ಮನೆಯಲ್ಲಿ, ಬಾಹ್ಯದಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡುವುದರಿಂದ ಮತ್ತು ತಮ್ಮ ಮಕ್ಕಳೊಂದಿಗೆ ತಮಿಳು ಬಳಕೆ ಮಾಡುವುದರಿಂದ ಇವರು ಮಕ್ಕಳಿಗೆ ತಮಿಳು ಭಾಷೆಯ ಹೆಚ್ಚಿನ ಜ್ಞಾನವನ್ನು ದಾಟಿಸುವಲ್ಲಿ ಮುಖ್ಯವಾದ ಪಾತ್ರವಹಿಸಿದ್ದಾರೆ. ತಮಿಳರು ತಮ್ಮ ಸಾಮಾಜಿಕ ಮತ್ತು ಆರ್ಥಿಕ ಚಟುವಟಿಕೆಗಳಿಗಾಗಿ ಕನ್ನಡದ ಪರಿಸರದಲ್ಲಿ ಭಾಗವಹಿಸುವ ಮೂಲಕ ಕನ್ನಡವನ್ನು ದ್ವಿಭಾಷಿಕ ನಂಟನ್ನು ಹೊಂದಿದ್ದಾರೆ. ಇನ್ನು ಮೂರನೇ ತಲೆಮಾರಿನವರು ಕನ್ನದ ಪರಿಸರದೊಂದಿಗೆ ಬೆರೆತಿರುವ ಕಾರಣಕ್ಕೆ ಇವರಲ್ಲಿ ಹೆಚ್ಚಿನದಾಗಿ ತಮಿಳು ಕನ್ನಡ, ಕನ್ನಡ ತಮಿಳು ನುಡಿಜಿಗಿತ ಮತ್ತು ನುಡಿಬೆರಕೆಯನ್ನು ಬಳಕೆ ಮಾಡುತ್ತಾರೆ. ತಮಿಳು ಭಾಷಿಕರು ತಮ್ಮ ಸಾಂಸ್ಕೃತಿಕ ಆಚರಣೆ ಮತ್ತು ಬದುಕಿನ ಕ್ರಮಗಳಿಂದಾಗಿ ಕನ್ನಡದ ಪರಿಸರದಲ್ಲಿ ವಿಶೇಷವಾಗಿ ಕಂಡುಬರುತ್ತಾರೆ. ಈ ಆಚರಣೆ ಮತ್ತು ಸಂಸ್ಕೃತಿಗಳು ಕೆಲವು ಬಾಹ್ಯಪರಿಸರದ ಒತ್ತಡಗಳಿಂದ, ಶಿಕ್ಷಣದಿಂದಾಗಿ ಕೆಲವು ಬದಲಾವಣೆಯಿಂದಾಗಿ ಬದಲಾಗುತ್ತಿವೆ.

* * *

# ಅಧ್ಯಾಯ: ಆರು

## ಭಾಷಾದ್ವೀಪಗಳ ತಮಿಳು ಭಾಷಾ ಸ್ವರೂಪ

೬.೧. ಸಂಬಂಧ ವಾಚಕಗಳು

೬.೨. ವ್ಯಕ್ತಿನಾಮಗಳು

೬.೩. ಸಂಖ್ಯಾವಾಚಕಗಳು

೬.೪. ವ್ಯಾವಹಾರಿಕ ಭಾಷೆಯಾಗಿ ಕನ್ನಡ ಅಥವಾ ತಮಿಳು

## ಅಧ್ಯಾಯ: ಆರು

# ತಮಿಳು ಭಾಷಾ ರಚನೆ

ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ವಲಸೆ ಬಂದು ನೆಲಸಿರುವ ತಮಿಳು ಭಾಷಿಕರು ಸುಮಾರು ವರ್ಷಗಳು ಕನ್ನಡಿಗರ ಪರಿಸರದಲ್ಲಿ ತಮ್ಮ ಸಮುದಾಯವನ್ನು ಕಟ್ಟಿಕೊಂಡಿದ್ದಾರೆ. ಇವರುಗಳು ತಾವು ವಾಸಿಸುವ ಸ್ಥಳಗಳಲ್ಲಿ ತಮಿಳನ್ನು ಬಳಕೆ ಮಾಡಿಕೊಂಡು ಭಾಷಾದ್ವೀಪಗಳಾಗಿ ರಚಿಸಿಕೊಂಡಿದ್ದಾರೆ. ಈ ರೀತಿಯ ಭಾಷಾದ್ವೀಪಗಳಲ್ಲಿ ಭಾಷಾ ಬಳಕೆಯು ಹೇಗೆ ಉಳಿದುಕೊಂಡಿದೆ. ಈ ರೀತಿಯ ಭಾಷಾ ಬಳಕೆಯಿಂದ ತಮಿಳು ಭಾಷಿಕರ ವಲಸೆಯ ಇತಿಹಾಸವನ್ನು, ಪರಿವರ್ತನೆಯ ಸಾಮಾಜಿಕ ಅಂಶಗಳನ್ನು ಹಾಗೂ ಭಾಷಿಕ ಪ್ರಕ್ರಿಯೆಗಳನ್ನು ತಿಳಿಯುವ ಉದ್ದೇಶದಿಂದ ತಮಿಳು ಭಾಷಾ ರಚನೆಯ ಕೆಲವು ಅಂಶಗಳನ್ನು ಆಧಾರವಾಗಿರಿಸಿಕೊಂಡು ತಿಳಿದುಕೊಳ್ಳುವುದು. ಈ ಅಧ್ಯಾಯದಲ್ಲಿ ಭಾಷಾಂಶಗಳಾದ ಸಂಬಂಧವಾಚಕಗಳು, ಸಂಖ್ಯಾವಾಚಕಗಳು, ಕ್ರಮವಾಚಕಗಳ ಮೂಲಕ ತಮಿಳು ಭಾಷೆಯ ಕೆಲವು ರಚನೆ ಮತ್ತು ಬಳಕೆಯನ್ನು ಕಂಡುಕೊಂಡಿದೆ. ಮತ್ತು ತಮಿಳು ಭಾಷೆಯು ತಲೆಮಾರುಗಳು ಅಂತರದಲ್ಲಿ ಬಳಕೆಯಾಗುವುದನ್ನು ಕಂಡುಕೊಳ್ಳುವುದು ಮುಖ್ಯವಾಗಿ ತಲೆಮಾರಿನಿಂದ ತಲೆಮಾರಿಗೆ ಸಂಬಂಧವಾಚಕಗಳು, ಸಂಖ್ಯಾವಾಚಕಗಳ ಬಳಕೆಯು ಹಾಗೆಯೇ ಉಳಿದುಕೊಂಡಿದೆಯೇ? ಅಥವಾ ಬದಲಾವಣೆಯಾಗಿದೆಯೇ? ಕಂಡುಕೊಂಡಿದೆಯೇ? ಬದಲಾವಣೆಯಾಗಿದ್ದರೆ ಯಾವ ಕಾರಣಕ್ಕೆ? ಎಂಬ ಅಂಶಗಳನ್ನು ಕಂಡುಕೊಳ್ಳುವ ಉದ್ದೇಶ ಹೊಂದಿದೆ. ಈ ಅಧ್ಯಾಯದ ಕೊನೆ ಉಪಘಟಕದಲ್ಲಿ ಕನ್ನಡದ ಪರಿಸರದಲ್ಲಿ ವ್ಯಾಪಾರಿಗಳಾಗಿರುವ ತಮಿಳು ಭಾಷಿಕರು ವ್ಯಾವಹಾರಿಕ ಭಾಷೆಯಾಗಿ ಯಾವ ಭಾಷೆಯನ್ನು ಬಳಕೆ ಮಾಡುತ್ತಾರೆ. ಆ ಭಾಷೆಬಳಕೆ ಮಾಡಲು ಇರುವ ಒತ್ತಡಗಳೇನು ಎಂಬುದನ್ನು ಕಂಡುಕೊಳ್ಳುವುದು ಉದ್ದೇಶವಾಗಿದೆ.

### ೬.೧. ಸಂಬಂಧ ವಾಚಕಗಳು

ಸಾಮಾಜಿಕವಾಗಿ ವ್ಯಕ್ತಿಗಳನ್ನು ಗುರುತಿಸಲು ವ್ಯಕ್ತಿನಾಮಗಳನ್ನು ಬಳಸುತ್ತೇವೆ. ಹಾಗೆಯೇ ಪರಸ್ಪರ ರಕ್ತಸಂಬಂಧ ಅಥವಾ ವೈವಾಹಿಕ ಸಂಬಂಧವನ್ನು ಹೊಂದಿರುವವರನ್ನು ವ್ಯಕ್ತಿನಾಮಗಳ ಜೊತೆಯಲ್ಲಿಯೇ ಸಂಬಂಧವಾಚಕಗಳನ್ನು ಬಳಸುವುದು ಕಾಣುತ್ತೇವೆ. ಇನ್ನು ರಕ್ತಸಂಬಂಧ ಹೊಂದಿರುವವರು ಹಿರಿಯವರಾಗಿದ್ದರೆ ಅವರನ್ನು ವ್ಯಕ್ತಿನಾಮ ಬಳಸದೇ ಸಂಬಂಧವಾಚಕಗಳನ್ನು ಬಳಸಿ ಸಂಬೋಧಿಸುವ ಅಥವಾ ಗುರುತಿಸುವುದು ಕಾಣಬಹುದು. ಅಂದರೆ ವ್ಯಕ್ತಿ-ವ್ಯಕ್ತಿಗಳ ನಡುವೆ ರಕ್ತಸಂಬಂಧ/ವೈವಾಹಿಕ ಸಂಬಂಧಗಳಿಂದ ಉಂಟಾಗುವ ಬಂಧುತ್ವವನ್ನು ಈ ಸಂಬಂಧವಾಚಕಗಳಿಂದ ಗುರುತಿಸಲಾಗುತ್ತದೆ.

ಈ ರೀತಿಯ ಸಂಬಂಧವಾಚಕಗಳ ಕುರಿತಂತೆ ಅನೇಕ ಮಾನವಶಾಸ್ತ್ರ ಅಧ್ಯಯನಕಾರರು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ೧೯೭೧ರಲ್ಲಿ ಮೋರ್ಗನ್ಸ್ ಅವರು ಸಿಸ್ಟಮ್ಸ್ ಆಫ್ ಕಾನ್ಸುಂಗಿನಿಟಿ ಮತ್ತು ಮಾನವ ಕುಟುಂಬದ ಸಂಬಂಧಗಳ ಕುರಿತು ಅಧ್ಯಯನ ನಡೆಸಿದ್ದಾರೆ. ರಾಬಿನ್ ಫಾಕ್ಸ್ ಅವರು ಸಹ ಸಂಬಂಧವಾಚಕಗಳ ಕುರಿತು ಅಧ್ಯಯನ ಮಾಡಿರುವುದು ತಿಳಿಯಬಹುದು. ಈ ಸಂಬಂಧವಾಚಕಗಳ ಕುರಿತು ಕೇಂಬ್ರಿಡ್ಜ್ ಡಿಕ್ಷನರಿಯ ವ್ಯಾಖ್ಯಾನ;

'Kinship terms are part of a language and operate as signs with signifiers and signified usage of kinship terms indicates memberships of language group'

ಮತ್ತು ರಾಬಿನ್ ಫಾಕ್ಸ್ ಅವರು ಸಂಬಂಧವಾಚಕಗಳ ಕುರಿತು ಈ ರೀತಿಯಾಗಿ ಹೇಳುತ್ತಾರೆ;

'The study of kinship is the study of what man does with these basic facts of life-mating, gestation, parenthood, socialization, siblingship etc'(Wikipidia:htps://en.wikipedia.org/wiki/kinship)

ಹೀಗೆ ಈ ಮೇಲಿನ ಎರಡು ವ್ಯಾಖ್ಯಾನಗಳನ್ನು ಗಮನಿಸಿದಾಗ ಮುಖ್ಯವಾಗಿ ತಿಳಿದು ಬರುವ ಅಂಶಗಳೆಂದರೆ ಸಂಬಂಧವಾಚಕಗಳು ಭಾಷೆಯ ಒಂದು ಅಂಗ, ಇವುಗಳು ಭಾಷೆಯಲ್ಲಿನ ಸದಸ್ಯರನ್ನು ಗುರುತಿಸಲು ಬಳಸಲಾಗುತ್ತದೆ. ಹಾಗೂ ಇವುಗಳು ವ್ಯಕ್ತಿ–ವ್ಯಕ್ತಿಗಳ ಸಂಬಂಧದಿಂದ ರೂಪಗೊಳ್ಳುತ್ತವೆ ಎಂದು ತಿಳಿಯುತ್ತದೆ.

ರಕ್ತಸಂಬಂಧಗಳನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ವರ್ಗೀಕರಿಸಿರುವುದನ್ನು ಕಾಣಬಹುದು. ಅವುಗಳೆಂದರೆ,

೧. ರಕ್ತಸಂಬಂಧಗಳು(Consanguineous Kinship)

೨. ವೈವಾಹಿಕ ಸಂಬಂಧಗಳು(Affinal Kinship)

ರಕ್ತಸಂಬಂಧಗಳು ಎಂದರೆ ವ್ಯಕ್ತಿಯಿಂದ ವ್ಯಕ್ತಿಗೆ ರಕ್ತಸಂಬಂಧದಿಂದ ಉಂಟಾಗುವ ಸಂಬಂಧವನ್ನು ರಕ್ತಸಂಬಂಧ ಎಂದು ಕರೆಯಲಾಗುತ್ತದೆ. ಈ ಸಂಬಂಧವು ತಂದೆ–ಮಗ/ಮಗಳು ತಾಯಿ–ಮಗ\ಮಗಳು ಹೀಗೆ ಒಂದೇ ರಕ್ತವನ್ನು ಹಂಚಿಕೊಂಡು ಹುಟ್ಟುವವರ ನಡುವೆ ಬೆಳೆಯುವ ರಕ್ತಸಂಬಂಧವಾಗಿದೆ. ಈ ರಕ್ತಸಂಬಂಧವನ್ನು ತಲೆಮಾರುಗಳ ಹಂತಗಳಿಗೆ ಅನುಗುಣವಾಗಿ ಮೂರು ರೀತಿಯಾಗಿ ವಿವರಿಸಲಾಗಿದೆ.

೧. Primary Kin– ತಂದೆಯಿಂದ ಉಂಟಾದ ಸಂಬಂಧ

೨. Secondary Kin–ತಂದೆಯ ತಮ್ಮನಿಂದ ಉಂಟಾದ ಸಂಬಂಧ

೩. Tertiary Kin–ತಂದೆ ಮತ್ತು ತಂದೆಯ ತಮ್ಮನನ್ನು ಹೊರತುಪಡಿಸಿ ಉಂಟಾಗುವ ಸಂಬಂಧವಾಗಿದೆ.

ಹೀಗೆ ಇಲ್ಲಿ ತಂದೆ/ತಾಯಿಯನ್ನು ಮುಖ್ಯವಾಗಿರಿಸಿಕೊಂಡು ಸಂಬಂಧಗಳನ್ನು ವರ್ಗೀಕರಿಸಲಾಗಿದೆ.

ವೈವಾಹಿಕ ಸಂಬಂಧಗಳು; ವೈವಾಹಿಕ ಕಾರಣದಿಂದ ಉಂಟಾಗುವ ಸಂಬಂಧಗಳನ್ನು ವೈವಾಹಿಕ ಸಂಬಂಧಗಳು ಎಂದು ಕರೆಯಲಾಗುತ್ತದೆ. ವ್ಯಕ್ತಿಯು ಮದುವೆಯ ನಂತರ ಹೊಸ ಸಂಬಂಧಗಳನ್ನು ಹೊಂದುತ್ತಾನೆ. ಅದರಲ್ಲಿ ಗಂಡ/ಹೆಂಡತಿಯ ಸಂಬಂಧ, ಅತ್ತೆ/ಮಾವ ಹೀಗೆ ಹಲವು ಹೊಸ ಸಂಬಂಧಗಳನ್ನು ಪಡೆಯುತ್ತಾನೆ. ಇವುಗಳನ್ನು ವೈವಾಹಿಕ ಸಂಬಂಧಗಳು ಎಂದು ಕರೆಯಲಾಗುತ್ತದೆ.

ಅಧ್ಯಯನದ ಈ ಭಾಗದಲ್ಲಿ ತಮಿಳು ಭಾಷಿಕರ ರಕ್ತಸಂಬಂಧಗಳ ಕುರಿತು ಅಧ್ಯಯನ ಮಾಡುವುದರಿಂದ ತಮಿಳು ಭಾಷಿಕರಲ್ಲಿರುವ ರಕ್ತಸಂಬಂಧಗಳ ತಿಳಿಯಬಹುದು. ತಮಿಳು ಭಾಷಿಕರ ವಿವಿಧ ಸಾಮಾಜಿಕ ವಲಯಗಳಲ್ಲಿ ಬಳಕೆಯಾಗುವ ಸಂಬಂಧವಾಚಕಗಳ ಕುರಿತು ತಿಳಿಯಬಹುದಾಗಿದೆ.

**ತಮಿಳು ಭಾಷಾದ್ವೀಪಗಳಲ್ಲಿ ಬಳಕೆಯಲ್ಲಿರುವ ತಮಿಳು ಭಾಷಿಕರ ಸಂಬಂಧವಾಚಕಗಳು**

| | **ಸಂಬಂಧವಾಚಕಗಳು** |
|---|---|
| ೧. ತಂದೆ | ಅಣ್ಣ/ಅಪ್ಪ |

ಇಲ್ಲಿ 'ಅಣ್ಣ' ಸಂಬಂಧವಾಚಕವನ್ನು ತಂದೆಗೆ ಬಳಕೆ ಮಾಡಲಾಗುತ್ತದೆ. ಈ ಸಂಬಂಧವಾಚಕವು ಪ್ರಾಚೀನ ತಮಿಳಿನ ರೂಪವಾಗಿದೆ. ಇದನ್ನು ಕೋಯಿಮತ್ತೂರು ಜಿಲ್ಲೆಯ ಗೌಂಡರ್‌ಸಮುದಾಯದ ತಮಿಳು ಭಾಷಿಕರು ಬಳಕೆಯ ಮಾಡುತ್ತಿದ್ದಾರೆ. ಹಿರಿಯೂರು ಪರಿಸರದ ಆದಿವಾಲ ಮತ್ತು ಪಟ್ರಳ್ಳಿ ಹಾಗೂ ಹೊಸಪೇಟೆಯ ನಿಶಾನಿ ಕ್ಯಾಂಪ್‌ನಲ್ಲಿ ಬಳಕೆ ಮಾಡುತ್ತಿರುತ್ತಾರೆ. ಇದನ್ನು ಹೊರತುಪಡಿಸಿದಂತೆ ಬೇರೆ ಸಮುದಾಯಗಳಲ್ಲಿ ಈ ರೂಪವನ್ನು ಬಳಕೆ ಮಾಡುತ್ತಿರುವುದು ಕಂಡುಬಂದಿರುವುದಿಲ್ಲ. ಇನ್ನು 'ಅಣ್ಣ' ಮತ್ತು 'ಅಪ್ಪ' ಎರಡೂ ರೂಪಗಳು ಸಂಬೋಧನಾ ರೂಪಗಳಾಗಿ ಬಳಕೆಯಾಗುತ್ತಿವೆ.

| | |
|---|---|
| ೨. ತಾಯಿ | ಆಯಿ/ಅಮ್ಮ |

ತಾಯಿಗೆ ಸಂಬಂಧವಾಚಕವಾಗಿ 'ಆಯಿ' ಎಂದು ಬಳಕೆ ಮಾಡಲಾಗುತ್ತಿದೆ. ಇದು ತಮಿಳುನಾಡಿನ ನಾಮಕಲ್ ಮತ್ತು ಸೇಲಂ ಜಿಲ್ಲೆಗಳಿಂದ ಬಂದಿರುವ ವಲಸಿಗರಲ್ಲಿ ಬಳಕೆಯಲ್ಲಿದೆ. ಅಲ್ಲದೇ ಇಂದು ಬಹುತೇಕ ತಮಿಳು ಭಾಷಿಕರಲ್ಲಿ ಈ ರೂಪವು ಬಳಕೆಯಾಗುತ್ತಿಲ್ಲ. ಇನ್ನುಳಿದಂತೆ 'ಅಮ್ಮ' ಎಂಬ ರೂಪವನ್ನು ತಾಯಿಗೆ ಬಳಸುತ್ತಿದ್ದಾರೆ. ಇದು ಕನ್ನಡಿಗರ ಪರಿಸರದ ತಮಿಳು ಭಾಷಿಕರಲ್ಲಿ ಬಳಕೆಯಾಗುವಂತೆ ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಬಳಕೆಯಾಗುತ್ತದೆ. 'ಅಮ್ಮ' ಮತ್ತು 'ಆಯಿ' ಎಂದು ಸಂಬೋಧನಾ ರೂಪಗಳು ಬಳಕೆಯಲ್ಲಿವೆ. 'ಅಮ್ಮ' ರೂಪವು ಉಲ್ಲೇಖ ರೂಪದಲ್ಲಿ ಬಳಕೆಯಲ್ಲಿದೆ.

| | |
|---|---|
| ೩. ಅಣ್ಣ | ಅಣ್ಣ/ಪೆರಿಯಣ್ಣ |

ಸಂಬಂಧದಲ್ಲಿ ತನಗಿಂತ ಹಿರಿಯವನಿಗೆ 'ಅಣ್ಣ' ಎಂದು ಬಳಕೆ ಮಾಡುತ್ತಾರೆ. ಇದನ್ನು ಸಂಬೋಧನಾ ರೂಪವಾಗಿಯೂ ಬಳಕೆ ಮಾಡುತ್ತಾರೆ. ಉಲ್ಲೇಖ ಸಂದರ್ಭಗಳಲ್ಲಿ 'ಪೆರಿಯಣ್ಣ' ಎಂದು ಉಲ್ಲೇಖಿಸುತ್ತಾರೆ.

೪. ತಮ್ಮ ತಂಬಿ(ಪಿ)ಸಿನ್ನತಂಬಿ

ಸಂಬಂಧದಲ್ಲಿ ತನಗಿಂತ ಕಿರಿಯವನಿಗೆ 'ತಂಬಿ(ಪಿ)' ಎಂದು ಬಳಸುತ್ತಾರೆ. 'ತಂಬಿ' ಎನ್ನುವ ರೂಪವು ಸಂಬೋಧನಾ ರೂಪವಾಗಿಯೂ ಬಳಕೆಯಲ್ಲಿದೆ. ಉಲ್ಲೇಖ ಸಂದರ್ಭಗಳಲ್ಲಿ 'ತಂಬಿ' ಅಥವಾ 'ಸಿ(ಚಿ)ನ್ನತಂಬಿ' ಎಂಬ ರೂಪಗಳನ್ನು ಬಳಕೆ ಮಾಡುತ್ತಾರೆ.

೫. ಹೆಂಡತಿ ವೀಟ್ಟುಕ್ಕಾರಿ/ಪೊಣ್ಡಾಟ್ಟಿ

ವೈವಾಹಿಕ ಸಂಬಂಧದಿಂದ ಹುಟ್ಟಿಕೊಳ್ಳುವ ಈ ಸಂಬಂಧವನ್ನು 'ಮೀಟ್ಟುಕ್ಕಾರಿ' ಎಂಬ ಸಂಬಂಧವಾಚಕದಿಂದ ಗುರುತಿಸಲಾಗುತ್ತದೆ. 'ಪೊನ್ನಾಟಿ' ಮತ್ತು 'ವೀಟುಕಾರಿ' ರೂಪಗಳನ್ನು ಸಂಬೋಧನಾ ರೂಪಗಳಾಗಿ ಬಳಸುತ್ತಾರೆ. ಇದೇ ರೂಪಗಳನ್ನು ಉಲ್ಲೇಖ ರೂಪಗಳಾಗಿ ಬಳಸುತ್ತಾರೆ. ಇದರೊಂದಿಗೆ 'ಸಂಸಾರಂ' ರೂಪವನ್ನು ಉಲ್ಲೇಖ ಸಂದರ್ಭದಲ್ಲಿ ಬಳಕೆ ಮಾಡುತ್ತಾರೆ.

೬. ಗಂಡ ವೀಟ್ಟುಕ್ಕಾರರ್/ಪುರುಸನ್

ಗಂಡ ಸಂಬಂಧವನ್ನು ಸೂಚಿಸಲು 'ವೀಟ್ಟುಕ್ಕಾರರ್' ಎಂಬ ಸಂಬಂಧವಾಚಕವನ್ನು ಬಳಕೆ ಮಾಡುತ್ತಾರೆ. ಇಲ್ಲಿ 'ವೀಟು' ಎಂದರೆ ಮನೆ ಎಂದರ್ಥ. 'ಕಾರ' ಎಂಬುದು ಗೌರವಾರ್ಥವಾಗಿ ಬಳಕೆಯಾಗಿದೆ. ಅಲ್ಲದೆ 'ವೀಟುಕಾರರ್' ಮತ್ತು ಮಾವ ಎಂಬ ರೂಪಗಳನ್ನು ಸಂಬೋಧನಾ ರೂಪಗಳಾಗಿ ಹಾಗೂ 'ಪುರುಸ(ಷ)ನ್' 'ವೀಟುಕಾರನ್' ಎಂಬವು ಉಲ್ಲೇಖ ರೂಪಗಳಾಗಿ ಬಳಕೆಯಲ್ಲಿವೆ.

೭. ಮಗ ಮಗನ್

ಮಗನನ್ನು 'ಮಗನ್' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಇದನ್ನು ಹೊರತು ಪಡಿಸಿದಂತೆ ಕನ್ನಡದಲ್ಲಿ ಬಳಸುವ ಹಾಗೆ 'ಮಗ' ಎಂದು ಹೆಚ್ಚು ಬಳಸುತ್ತಿರುವುದು ಕಾಣಬಹುದು. ಈ ರೂಪವನ್ನು ಸಂಬೋಧನಾ ರೂಪವಾಗಿಯೂ ಬಳಕೆ ಮಾಡುತ್ತಾರೆ. ಇದರಲ್ಲಿ ಕನ್ನಡಿಗರೊಂದಿಗೆ ಮಾತನಾಡುವಾಗ ಅಥವಾ ಕನ್ನಡ ಪರಿಸರದೊಂದಿಗೆ ಹೆಚ್ಚಿನ ನಂಟು ಹೊಂದಿರುವವರು 'ಮಗ' ರೂಪವನ್ನು ಬಳಸುತ್ತಾರೆ. ಕನ್ನಡದ ಪ್ರಭಾವವು ಈ ಸಂಬಂಧವಾಚಕದ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದು. ಇನ್ನು ಸಾಮಾನ್ಯವಾಗಿ ತಮಿಳು ಮಾತನಾಡುವ ಸಂದರ್ಭದಲ್ಲಿ 'ಪೈಯನ್' ಎಂಬ ಸಂಬೋಧನಾ ರೂಪವನ್ನು ಬಳಕೆ ಮಾಡುತ್ತಾರೆ. ಇದರೊಂದಿಗೆ 'ಮಗನ್', 'ಪೈಯನ್' ಎಂದು ಬಳಕೆ ಮಾಡುತ್ತಾರೆ.

೮. ಮಗಳು ಮಗಳ್

ತಮಿಳು ಭಾಷಿಕರು ಮಗಳು ಸಂಬಂಧವಾಚಕವನ್ನು 'ಮಗಳ್' ಎಂಬ ರೂಪದಿಂದ ಬಳಸುವುದನ್ನು ಕಾಣಬಹುದು. ತಮಿಳು ಭಾಷಿಕರು ಕನ್ನಡ ಪರಿಸರದೊಂದಿಗೆ ವ್ಯಾವಹಾರಿಕ ಸಂಬಂಧ ಹೊಂದಿರುವವರು ಮಗಳು ಎಂದು ಬಳಸುತ್ತಾರೆ. ತಮಿಳು ಭಾಷಿಕ ಸಂದರ್ಭದಲ್ಲಿ 'ಪೊಣ್' ಎಂಬ ರೂಪದಿಂದ ಸಂಬೋಧನೆ ಮಾಡುತ್ತಾರೆ. ಇದರೊಂದಿಗೆ 'ಮಗಳ್', 'ಪೊಣ್' ರೂಪಗಳನ್ನು ಉಲ್ಲೇಖ ರೂಪವಾಗಿಯೂ ಬಳಕೆ ಮಾಡುತ್ತಾರೆ.

೯. ತಂದೆಯ ಅಣ್ಣ ಪೆರಿಯಪ್ಪ

ಎರಡನೇ ಹಂತದ ರಕ್ತಸಂಬಂಧವಾದ ತಂದೆಯ ಅಣ್ಣನನ್ನು ತಮಿಳು ಭಾಷಿಕರು 'ಪೆರಿಯಪ್ಪ' ಎಂಬ ಸಂಬಂಧ ವಾಚಕದಿಂದ ಗುರುತಿಸುತ್ತಾರೆ. ಇಲ್ಲಿ ಪೆರಿಯ ಅಂದರೆ ಹಿರಿಯ ಎಂದರ್ಥ. ಇದೇ ರೂಪವನ್ನು ಸಂಬೋಧನಾ ರೂಪವಾಗಿ ಬಳಕೆ ಮಾಡುತ್ತಾರೆ.

೧೦. ತಂದೆಯ ಅಣ್ಣನ ಹೆಂಡತಿ ಪೆರಿಯಮ್ಮ

ಪೆರಿಯಾಯಾ

ಪೆರಿಯಾಯಿ

ತಂದೆಯ ಅಣ್ಣನ ಹೆಂಡತಿಗೆ 'ಪೆರಿಯಮ್ಮ' ಎಂದು ಬಳಸುತ್ತಾರೆ. ಹಾಗೆಯೇ ಸಂಬೋಧನಾ ರೂಪವಾಗಿ ಬಳಸುತ್ತಾರೆ. ಇದನ್ನು ಹೊರತುಪಡಿಸಿದರೆ ತಮಿಳು ಭಾಷಿಕರಲ್ಲಿ ಗೌಡ ಸಮುದಾಯದವರು 'ಪೆರಿಯಾಯಾ' ಎಂದು ಬಳಸುತ್ತಾರೆ. ಹಾಗೆಯೇ ಪೆರಿಯಾಯಿ ಎಂಬ ರೂಪವನ್ನು ಉಲ್ಲೇಖ ರೂಪವಾಗಿ ಬಳಸುತ್ತಾರೆ.

೧೧. ತಂದೆಯ ತಮ್ಮ ಸಿತ್ತಪ್ಪ

ತಂದೆಯ ತಮ್ಮನಿಗೆ 'ಸಿತ್ತಪ್ಪ' ಎಂಬ ಸಂಬಂಧವಾಚಕವನ್ನು ಬಳಸುತ್ತಾರೆ. ಈ ರೂಪವನ್ನೇ ಸಂಬೋಧನಾ ರೂಪವಾಗಿಯೂ ಮತ್ತು ಉಲ್ಲೇಖ ರೂಪವಾಗಿಯೂ ಬಳಕೆ ಮಾಡುತ್ತಾರೆ.

೧೨. ತಂದೆಯ ತಮ್ಮನ ಹೆಂಡತಿ ಸಿನ್ನಮ್ಮ

ಸಿನ್ನಾಯಾ

ಸಿನ್ನಾಯಿ

ಸಿಟ್ಟಿ

ತಂದೆಯ ತಮ್ಮನ ಹೆಂಡತಿಗೆ 'ಸಿನ್ನಮ್ಮ' ಎಂಬಂಥ ಸಂಬಂಧವಾಚಕವನ್ನು ಬಳಸುತ್ತಾರೆ. ಸಂಬೋಧನಾ ರೂಪವಾಗಿ 'ಚಿನ್ನಮ್ಮ' ಎಂಬ ರೂಪವನ್ನು ಬಳಕೆ ಮಾಡುತ್ತಾರೆ. ಉಲ್ಲೇಖ ರೂಪಗಳಾಗಿ 'ಚಿನ್ನಮ್ಮ', 'ಸಿನ್ನಾಯಾ' ರೂಪಗಳನ್ನು ಬಳಸುತ್ತಾರೆ. ಇದರೊಂದಿಗೆ ಗೌಂಡರ್ ಸಮುದಾಯದವರು 'ಸಿನ್ನಾಯಿ' ಎಂದು ಮೊದಲಿಯಾರ್ ಸಮುದಾಯದವರು 'ಚಿನ್ನಾತ' ಎಂಬ ಉಲ್ಲೇಖ ರೂಪಗಳನ್ನು ಬಳಸುತ್ತಾರೆ. 'ಚಿತ್ತಿ' ಉಲ್ಲೇಖ ರೂಪವಾಗಿಯೂ ಬಳಕೆಯಲ್ಲಿದೆ.

೧೩. ತಂದೆಯ ಅಕ್ಕ/ತಂಗಿ ಅತ್ತೆ

ಮಾಮಿ

ಕನ್ನಡದಲ್ಲಿ ಬಳಸುವಂತೆ ತಂದೆಯ ಅಕ್ಕ ಅಥವಾ ತಂಗಿಗೆ 'ಅತ್ತೆ' ಎಂಬ ಸಂಬಂಧವಾಚಕವನ್ನು ಬಳಸುತ್ತಾರೆ. 'ಅತ್ತೆ' ರೂಪವನ್ನೆ ಸಂಬೋಧನಾ ರೂಪವಾಗಿ ಮತ್ತು ಗೌಂಡರ್ ಸಮುದಾಯದವರು

'ಮಾಮಿ' ಎಂಬ ರೂಪವನ್ನು ಉಲ್ಲೇಖ ರೂಪವಾಗಿ ಬಳಕೆ ಮಾಡುತ್ತಾರೆ. ಸಾಮಾನ್ಯವಾಗಿ 'ಅತ್ತೆ' ರೂಪವನ್ನು ಬಳಕೆ ಮಾಡುವುದು ಹೆಚ್ಚು.

೧೪. ತಂದೆಯ ಅಕ್ಕ/ತಂಗಿಯ ಗಂಡ ಮಾಮ

ತಂದೆಯ ಅಕ್ಕ ಅಥವಾ ತಂಗಿಯ ಗಂಡನಿಗೆ 'ಮಾಮ' ಎಂಬ ಸಂಬಂಧವಾಚಕವನ್ನು ಬಳಸುತ್ತಾರೆ. ಅಲ್ಲದೆ 'ಮಾಮ' ಎಂಬ ರೂಪವನ್ನೇ ಸಂಬೋಧನಾ ರೂಪವಾಗಿ ಬಳಕೆ ಮಾಡುತ್ತಾರೆ. ಉಲ್ಲೇಖ ರೂಪವಾಗಿ ಮೊದಲಿಯಾರ್ ಸಮುದಾಯದವರು 'ತಾಯಮಾಮ' ಎಂಬ ರೂಪವನ್ನು ಬಳಕೆ ಮಾಡುತ್ತಾರೆ. ಸಾಮಾನ್ಯವಾಗಿ 'ಮಾಮ' ಎಂಬ ರೂಪವನ್ನು ಉಲ್ಲೇಖ ರೂಪವಾಗಿ ಬಳಕೆ ಮಾಡುತ್ತಾರೆ.

೧೫. ತಾಯಿಯ ಅಕ್ಕ ಪೆರಿಯಮ್ಮ

ಪೆರಿಯಾಯ

ತಾಯಿಯ ಅಕ್ಕನಿಗೆ 'ಪೆರಿಯಮ್ಮ' ಎಂಬ ಸಂಬಂಧವಾಚಕವನ್ನು ಬಳಕೆ ಮಾಡುತ್ತಾರೆ. 'ಪೆರಿಯಮ್ಮ' ಎಂಬ ರೂಪವನ್ನು ಸಂಬೋಧನಾ ರೂಪವಾಗಿಯೂ ಹಾಗೂ 'ಪೆರಿಯಮ್ಮ', 'ಪೆರಿಯಾಯಿ' ಎಂಬ ರೂಪಗಳನ್ನು ಉಲ್ಲೇಖ ರೂಪಗಳಾಗಿ ಬಳಕೆ ಮಾಡುತ್ತಾರೆ.

೧೬. ತಾಯಿಯ ತಂಗಿ ಸಿನ್ನಮ್ಮ

ಸಿನ್ನಾಯ

ಸಿನ್ನಾಯಿ

ಸಿತ್ತಿ

ತಾಯಿಯ ತಂಗಿಗೆ 'ಸಿನ್ನಮ್ಮ' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. 'ಸಿನ್ನಮ್ಮ' ಎಂಬ ರೂಪವನ್ನು ಸಂಬೋಧನಾ ರೂಪವಾಗಿ ಬಳಕೆ ಮಾಡುತ್ತಾರೆ. ಇನ್ನು ಉಲ್ಲೇಖ ರೂಪವಾಗಿ 'ಸಿನ್ನಮ್ಮ', 'ಸಿನ್ನಾಯ', 'ಸಿನ್ನಾಯಿ' ಎಂಬ ರೂಪಗಳು ಬಳಕೆಯಲ್ಲಿವೆ. ಸಾಮಾನ್ಯವಾಗಿ 'ಸಿತ್ತಿ' ರೂಪವನ್ನು ಬಳಕೆ ಮಾಡುತ್ತಾರೆ.

೧೭. ತಾಯಿಯ ಅಣ್ಣ/ತಮ್ಮ ಮಾಮ

ತಾಯಿಯ ತಮ್ಮನಿಗೆ ಅಥವಾ ಅಣ್ಣನಿಗೆ 'ಮಾಮ' ಎಂಬ ಸಂಬಂಧವಾಚಕ ಬಳಕೆ ಮಾಡುತ್ತಾರೆ. ಇದೇ ರೂಪವನ್ನು ಸಂಬೋಧನಾ ರೂಪವಾಗಿ ಬಳಕೆ ಮಾಡುತ್ತಾರೆ. ಇನ್ನು ಉಲ್ಲೇಖ ರೂಪಗಳಲ್ಲಿ 'ಮಾಮ' ಎಂದು ಹಾಗೂ 'ತಾಯ್‌ಮಾಮನ್' ಎಂದು ಬಳಕೆ ಮಾಡುತ್ತಾರೆ.

೧೮. ತಾಯಿಯ ಅಣ್ಣ/ತಮ್ಮನ ಹೆಂಡತಿ ಅತ್ತೆ

ಮಾಮಿ

ತಾಯಿಯ ಅಣ್ಣ ಅಥವಾ ತಮ್ಮನ ಹೆಂಡತಿಗೆ 'ಅತ್ತೆ' ಎನ್ನುವ ಸಂಬಂಧವಾಚಕದಿಂದ ಗುರುತಿಸುತ್ತಾರೆ. 'ಅತ್ತೈ' ಎಂದು ಬರಹ ರೂಪದಲ್ಲಿ, 'ಅತ್ತ' ಎಂಬ ರೂಪವನ್ನು ಹೊಸಪೇಟೆ ಪರಿಸರದಲ್ಲಿ ಸಂಬಂಧವಾಚಕವಾಗಿ ಬಳಕೆಯಲ್ಲಿದೆ. 'ಅತ್ತೆ' ಮತ್ತು 'ಅತ್ತ' ರೂಪಗಳು ಸಂಬೋಧನಾ ರೂಪಗಳಾಗಿ ಬಳಕೆಯಲ್ಲಿವೆ. 'ಅತ್ತೆ', 'ಮಾಮಿ' ರೂಪಗಳು ಉಲ್ಲೇಖ ರೂಪಗಳಾಗಿಯೂ ಬಳಕೆಯಲ್ಲಿವೆ.

೧೯. ತಾಯಿಯ ಅಣ್ಣ/ತಮ್ಮನ ಮಗ — ಮಾಪಿಳ್ಳೈ

ತಾಯಿಯ ಅಣ್ಣನ ಅಥವಾ ತಮ್ಮನ ಮಗನನ್ನು 'ಮಾಪಿಳ್ಳೈ' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಇದು ಸಂಬೋಧನಾ ರೂಪವಾಗಿಯೂ ಬಳಕೆಯಲ್ಲಿದೆ. ಉಲ್ಲೇಖ ರೂಪದಲ್ಲಿಯೂ 'ಮಾಪಿಳ್ಳೈ' ಎಂದೇ ಬಳಸುತ್ತಾರೆ. ಇದು ಆಡುಮಾತಿನಲ್ಲಿ ಮಾಪ್ಳೈ ಎಂದು ಬಳಕೆಯಾಗುತ್ತಿದೆ.

೨೦. ತಂದೆಯ ಅಕ್ಕ/ತಂಗಿಯ ಗಂಡ — ಮಾಮ

ತಂದೆಯ ಅಕ್ಕ ಅಥವಾ ತಂಗಿಯ ಗಂಡನಿಗೆ 'ಮಾಮ' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಇದನ್ನೆ ಸಂಬೋಧನಾ ರೂಪವಾಗಿ ಮತ್ತು ಉಲ್ಲೇಖ ರೂಪವಾಗಿಯೂ ಬಳಕೆ ಮಾಡುತ್ತಾರೆ.

೨೧. ತಂದೆಯ ಅಕ್ಕ/ತಂಗಿಯ ಮಗಳು — ಮರುಮಗಳ್

ತಂದೆಯ ಅಕ್ಕ ಅಥವಾ ತಂಗಿಯ ಮಗಳನ್ನು 'ಮರುಮಗಳ್' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಮತ್ತು ಉಲ್ಲೇಖ ರೂಪಗಳಾಗಿ 'ಮರುಮಗಳ್', 'ಮರುಪೊಣ್' ಎಂದು ಬಳಸುತ್ತಾರೆ.

೨೨. ತಂದೆಯ ಅಕ್ಕ/ತಂಗಿಯ ಮಗ — ಅತ್ತ ಪೆಯ್ಯನ್

ಮಾವ

ಮಾಪಿಳ್ಳೈ

ತಂದೆಯ ಅಕ್ಕ ಅಥವಾ ತಂಗಿಯ ಮಗನಿಗೆ 'ಅತ್ತ ಪೆಯ್ಯನ್' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಸಂಬೋಧನಾ ರೂಪವಾಗಿ 'ಮಾಮ', 'ಮಾಪಿಳ್ಳೈ' ರೂಪಗಳನ್ನು ಬಳಸುತ್ತಾರೆ. ಉಲ್ಲೇಖ ಸಂದರ್ಭದಲ್ಲಿ 'ಮಾಪಿಳ್ಳೈ' ಎಂಬ ರೂಪವನ್ನು ಬಳಕೆ ಮಾಡುತ್ತಾರೆ.

೨೩. ತಂಗಿಯ ಗಂಡ — ಮಾಮ

ಮಚ್ಚಾನ್

ತಂಗಿಯ ಗಂಡನಿಗೆ 'ಮಾವ' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. 'ಮಚ್ಚಾನ್(ಮಚ್ಚ)' ಎಂಬ ರೂಪವನ್ನು ಸಂಬೋಧನಾ ರೂಪವಾಗಿ ಬಳಕೆ ಮಾಡುತ್ತಾರೆ. 'ಮಚ್ಚಾನ್(ಮಚ್ಚ), 'ಮಾಪ್ಳೆ' ಎಂಬ ರೂಪಗಳು ಉಲ್ಲೇಖಗಳಾಗಿ ಬಳಕೆ ಮಾಡುತ್ತಾರೆ. 'ಮಾಪ್ಳೆ' ಉಲ್ಲೇಖ ರೂಪವು ಆಡುಮಾತಿನಲ್ಲಿ ಹೆಚ್ಚು ಬಳಕೆಯಲ್ಲಿದೆ.

೨೪. ಹೆಂಡತಿಯ ಅಣ್ಣ/ತಮ್ಮ — ಮಾಮ

ಮಾಪಿಳ್ಳೈ

ಹೆಂಡತಿಯ ಅಣ್ಣ ಅಥವಾ ತಮ್ಮನಿಗೆ 'ಮಾವ' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. 'ಮಾಪಿಳ್ಳೈ' ಎಂಬುದನ್ನು ಸಂಬೋಧನಾ ರೂಪವಾಗಿ ಬಳಕೆಯಲ್ಲಿದೆ. 'ಮಾವ' ರೂಪವು ಉಲ್ಲೇಖ ರೂಪವಾಗಿ ಬಳಕೆಯಾಗುತ್ತದೆ.

೨೫. ಅಣ್ಣನ ಹೆಂಡತಿ — ಅಣ್ಣಿ

ಅಣ್ಣನ ಹೆಂಡತಿಯನ್ನು 'ಅಣ್ಣಿ' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. 'ಅಣ್ಣಿ' ರೂಪವನ್ನು ಸಂಬೋಧನಾ ರೂಪವಾಗಿ ಮತ್ತು 'ಅಣ್ಣಿಯಾರ್' ಉಲ್ಲೇಖ ರೂಪವಾಗಿ ಬಳಕೆ ಮಾಡುತ್ತಾರೆ.

೨೬. ಅಕ್ಕನ ಗಂಡ — ಮಚ್ಚಾನ್

ಮಾಮ

ಮಚ್ಚ

ಅಕ್ಕನ ಗಂಡನಿಗೆ 'ಮಚ್ಚಾನ್' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. 'ಮಾಮ' ಎಂಬ ರೂಪವನ್ನು ಸಂಬೋಧನಾ ರೂಪವಾಗಿ ಬಳಕೆ ಮಾಡುತ್ತಾರೆ. ಉಲ್ಲೇಖ ರೂಪವಾಗಿ 'ಮಚ್ಚ' ಎಂಬ ರೂಪವನ್ನು ಬಳಕೆ ಮಾಡುತ್ತಾರೆ.

೨೭. ಗಂಡನ/ಹೆಂಡತಿಯ ತಂದೆಗೆ — ಮಾಮ

ಮಾಮನವರ್

ಗಂಡನ ಅಥವಾ ಹೆಂಡತಿಯ ತಂದೆಗೆ 'ಮಾಮ' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಇದು ಸಂಬೋಧನಾ ರೂಪವಾಗಿಯೂ ಬಳಕೆಯಲ್ಲಿದೆ. 'ಮಾಮನವರ್' ಎಂಬುದು ಉಲ್ಲೇಖ ರೂಪವಾಗಿ ಮಾವನವರು ಎಂದು ಗೌರವರೂಪದಲ್ಲಿ ಬಳಕೆಯಾಗುತ್ತದೆ.

೨೮. ಗಂಡನ/ಹೆಂಡತಿಯ ತಾಯಿ — ಅತ್ತೆ

ಮಾಮಿ

ಗಂಡನ ಅಥವಾ ಹೆಂಡತಿಯ ತಾಯಿಗೆ 'ಅತ್ತೆ' ಎಂಬ ಸಂಬಂಧವಾಚಕವನ್ನು ಬಳಸುತ್ತಾರೆ. 'ಅತ್ತೆ' ರೂಪವು ಸಂಬೋಧನಾ ರೂಪವಾಗಿಯೂ ಬಳಕೆಯಾಗುತ್ತದೆ. ಉಲ್ಲೇಖ ರೂಪಗಳಲ್ಲಿ 'ಮಾಮಿಯರ್', 'ಮಾಮಿ', ಮತ್ತು 'ವೀಟುಕಾರ್ ತಾಯಿ' ಎಂದು ಬಳಕೆ ಮಾಡುತ್ತಾರೆ.

೨೯. ಗಂಡನ ಅಣ್ಣ — ಮಾಮ

ಗಂಡನ ಅಣ್ಣನಿಗೆ 'ಮಾಮ' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಈ ರೂಪವನ್ನೇ ಸಂಬೋಧನಾ

ರೂಪವಾಗಿ ಬಳಕೆ ಮಾಡುತ್ತಾರೆ. ಅಲ್ಲದೆ ತನಗಿಂತ ಹಿರಿಯವರು ಆದ ಕಾರಣ ಇವರನ್ನು ಉಲ್ಲೇಖದಲ್ಲಿ 'ಪೆರಿಯ ಮಾಮ' ಎಂದು ಬಳಸುತ್ತಾರೆ.

೩೦. ಗಂಡನ ತಮ್ಮ — ಕೊಳಂದನಾರ್

ತಂಬಿ

ಗಂಡನ ತಮ್ಮನಿಗೆ 'ಕೊಳಂದನಾರ್' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಸಂಬೋಧನಾ ರೂಪವಾಗಿ 'ತಂಬಿ' ಎಂದು ಬಳಸುತ್ತಾರೆ. ಉಲ್ಲೇಖ ಸಂದರ್ಭಗಳಲ್ಲಿ 'ತಂಬಿ', 'ಕೊಳಂದನಾರ್' ಎಂಬ ರೂಪಗಳಿಂದ ಬಳಕೆ ಮಾಡುತ್ತಾರೆ.

೩೧. ಗಂಡನ ಅಕ್ಕ — ಚಿತ್ತಿ

ಗಂಡನ ಅಕ್ಕನಿಗೆ 'ಚಿತ್ತಿ' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಇದೇ ರೂಪವನ್ನು ಸಂಬೋಧನಾ ರೂಪವಾಗಿ ಮತ್ತು ಉಲ್ಲೇಖ ರೂಪವಾಗಿ ಬಳಕೆ ಮಾಡುತ್ತಾರೆ.

೩೨. ಅಳಿಯ — ಮಾಪಿಳ್ಳೈ

ಮರುಮಗನ್

ಅಳಿಯನನ್ನು ತಮಿಳು ಭಾಷೆಯಲ್ಲಿ 'ಮಾಪಿಳ್ಳೈ' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಇದೇ ರೂಪವನ್ನು ಸಂಬೋಧನಾ ರೂಪವಾಗಿ ಬಳಕೆ ಮಾಡುತ್ತಾರೆ. ಉಲ್ಲೇಖ ರೂಪಗಳಲ್ಲಿ 'ಮಾಪಿಳ್ಳೈ', 'ಮರುಮಗನ್' ಎಂಬ ರೂಪಗಳನ್ನು ಬಳಕೆ ಮಾಡುತ್ತಾರೆ.

೩೩. ಮಗಳ ಮಗಳು — ಪೊಂಪೇತಿ

ಮಗಳ ಮಗಳನ್ನು 'ಪೊಂಪೇತಿ ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಇನ್ನು ಸಾಮಾನ್ಯವಾಗಿ ಹೇಳುವಾಗ 'ಪೇತ್ತಿ' ಎಂದು ಹೇಳುತ್ತಾರೆ. ಇದನ್ನು ಸಂಬೋಧನಾ ರೂಪವಾಗಿಯೂ ಬಳಕೆ ಮಾಡುತ್ತಾರೆ. ಉಲ್ಲೇಖ ರೂಪದಲ್ಲಿಯೂ ಸಹ 'ಪೇತಿ' ಎಂದು ಬಳಕೆ ಮಾಡುತ್ತಾರೆ.

೩೪. ಮಗಳ ಮಗ — ಪೊಂಪೇರನ್

ಪೇರನ್

ಪೇತಿ

ಮಗಳ ಮಗನನ್ನು 'ಪೊಂಪೇರನ್' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಸಾಮಾನ್ಯವಾಗಿ 'ಪೇರನ್' ಎಂದು ಹೇಳುತ್ತಾರೆ. 'ಪೇರಂಡಿ' ರೂಪವು ಸಂಬೋಧನಾ ರೂಪವಾಗಿ ಬಳಕೆ ಮಾಡುತ್ತಾರೆ. ಉಲ್ಲೇಖ ರೂಪಗಳಾಗಿ 'ಪೇತಿ', 'ಪೇರನ್' ರೂಪಗಳು ಬಳಕೆಯಲ್ಲಿವೆ.

೩೪. ಮಗನ ಮಗ ಪೇರನ್

ಮಗನ ಮಗನನ್ನು 'ಪೇರನ್' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಇದೇ ರೂಪವನ್ನು ಸಂಬೋಧನಾ ರೂಪವಾಗಿ ಬಳಕೆ ಮಾಡುತ್ತಾರೆ. ಉಲ್ಲೇಖ ರೂಪವಾಗಿ 'ಎಮ್‌ಪೇರನ್' ಎಂದು ಬಳಕೆ ಮಾಡುತ್ತಾರೆ.

೩೫. ಮಗನ ಮಗಳು ಪೇತ್ತಿ/ಎಮ್‌ಪೇತ್ತಿ

ಮಗನ ಮಗಳನ್ನು 'ಪೇತ್ತಿ' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಇದೇ ರೂಪವನ್ನು ಸಂಬೋಧನಾ ರೂಪವಾಗಿ ಬಳಕೆ ಮಾಡುತ್ತಾರೆ. ಉಲ್ಲೇಖ ರೂಪವಾಗಿ 'ಎಮ್‌ಪೇತ್ತಿ' ಎಂದು ಬಳಕೆ ಮಾಡುತ್ತಾರೆ.

೩೬. ಹೆಂಡತಿಯ ತಂಗಿ ಗಂಡ ಸಗಲನ್(ಸಗಲ)

ಹೆಂಡತಿಯ ತಂಗಿ ಗಂಡನಿಗೆ 'ಸಗಲನ್' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಇದೇ ರೂಪವನ್ನು ಸಂಬೋಧನಾ ರೂಪವಾಗಿ ಮತ್ತು ಉಲ್ಲೇಖ ರೂಪವಾಗಿ ಬಳಕೆ ಮಾಡುತ್ತಾರೆ. ಸಾಮಾನ್ಯವಾಗಿ ಆಡುಮಾತಿನಲ್ಲಿ 'ಸಗಲ' ಎಂದು ಬಳಕೆ ಮಾಡುತ್ತಾರೆ.

೩೭. ತಂದೆಯ ತಂದೆ ತಾತ

ಪಾಟನ್

ತಂದೆಯ ತಂದೆಗೆ 'ತಾತ' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಇದೇ ರೂಪವನ್ನು ಸಂಬೋಧನಾ ರೂಪವಾಗಿ ಮತ್ತು ಉಲ್ಲೇಖ ರೂಪವಾಗಿಯೂ ಬಳಕೆ ಮಾಡುತ್ತಾರೆ. ತಮಿಳು ವಡ್ಡಾರ್ ಸಮುದಾಯವು 'ಪಾಟನ್' ಎಂಬ ರೂಪವನ್ನು ಉಲ್ಲೇಖ ರೂಪವಾಗಿ ಬಳಕೆ ಮಾಡುತ್ತದೆ.

೩೮. ತಂದೆಯ ತಾಯಿ ಪಾಟಿ

ಆಯ/ಆಯಿ

ತಂದೆಯ ತಾಯಿಗೆ 'ಪಾಟಿ' ಎಂಬ ಸಂಬಂಧವಾಚಕದಿಂದ ಗುರುತಿಸುತ್ತಾರೆ. ಇಲ್ಲಿ ಆಯ/ಆಯಿ ಎನ್ನುವ ಸಂಬೋಧನಾ ರೂಪವು ಬಳಕೆಯಲ್ಲಿದೆ. ಈ ಎರಡೂ ರೂಪಗಳನ್ನು ಉಲ್ಲೇಖ ರೂಪಗಳಾಗಿ ಬಳಕೆ ಮಾಡುತ್ತಾರೆ.

ಸಂಬಂಧವಾಚಕಗಳ, ಸಂಬೋಧನಾ ರೂಪಗಳ ಮತ್ತು ಉಲ್ಲೇಖ ರೂಪಗಳ ಪಟ್ಟಿ

| | ಸಂಬಂಧವಾಚಕ | ಸಂಬೋಧನಾ ರೂಪಗಳು | ಉಲ್ಲೇಖ ರೂಪಗಳು |
|---|---|---|---|
| ತಂದೆ | ಅಪ್ಪ | ಅಪ್ಪ | ಅಣ್ಣ |
| | | ಅಪ್ಪ | ಅಣ್ಣ |
| ತಾಯಿ | ಅಮ್ಮ | ಅಮ್ಮ | ಅಮ್ಮ |
| | | ಆಯಿ | |
| ಅಣ್ಣ | ಅಣ್ಣ | ಅಣ್ಣ | ಅಣ್ಣ |
| | | | ಪೆರಿಯಣ್ಣ |
| ತಮ್ಮ | ತಂಬಿ | ತಂಬಿ | ತಂಬಿ |
| | | | ಸಿ(ಚಿ)ನ್ನತಂಬಿ |
| ಹೆಂಡತಿ | ಪೊಂಡಾಟಿ | ಪೊಂಡಾಟಿ | ವೀಟುಕಾರಿ |
| | | | ಪೊಂಡಾಟಿ |
| | | | ವೀಟ್ಟುಕಾರಿ |
| | | | ಸಂಸಾರಂ |
| ಗಂಡ | ವೀಟುಕಾರರ್ | ವೀಟುಕಾರರ್ | ಮಾವ |
| | | | ಪುರುಸ(ಷ)ನ್ |
| | | | ವೀಟುಕಾರನ್ |
| ಮಗ | ಮಗನ್ | ಪೈಯಾನ್ | ಮಗನ್ |
| | | | ಪೈಯನ್ |
| ಮಗಳು | ಮಗಳ್ | ಪೊಣ್ | ಮಗಳ್ |
| | | | ಪೊಣ್ |
| ತಂದೆಯ ಅಣ್ಣ | ಪೆರಿಯಪ್ಪ | ಪೆರಿಯಪ್ಪ | ಪೆರಿಯಪ್ಪ |
| ತಂದೆಯ ಅಣ್ಣನ ಹೆಂಡತಿ | ಪೆರಿಯಮ್ಮ | ಪೆರಿಯಮ್ಮ | ಪೆರಿಯಮ್ಮ |
| | | | ಪೆರಿಯಾಯಿ |
| ತಂದೆಯ ತಮ್ಮ | ಸಿ(ಚಿ)ತ್ತಪ್ಪ | ಸಿ(ಚಿ)ತ್ತಪ್ಪ | ಸಿ(ಚಿ)ತ್ತಪ್ಪ |
| ತಂದೆಯ ತಮ್ಮನ ಹೆಂಡತಿ | ಸಿ(ಚಿ)ನ್ನಮ್ಮ | ಸಿ(ಚಿ)ನ್ನಮ್ಮ | ಸಿ(ಚಿ)ನ್ನಮ್ಮ |

| | | | |
|---|---|---|---|
| | | | ಸಿನ್ನಾಯಾ<br>ಸಿನ್ನಾಯಿ(ಗೌಂಡರ್)<br>ಚಿನ್ನಾತ(ಮೊದಲಿಯರ್)<br>ಚಿತ್ತಿ |
| ತಂದೆಯ ಅಕ್ಕ/ತಂಗಿ | ಅತ್ತೆ | ಅತ್ತೆ | ಅತ್ತೆ<br>ಮಾಮಿ(ಗೌಂಡರ್) |
| ತಂದೆಯ ಅಕ್ಕ/ತಂಗಿಯ ಗಂಡ | ಮಾಮ | ಮಾಮ | ಮಾಮ<br>ತಾಯಮಾಮ(ಕ.ಮೊದಲಿಯಾರ್) |
| ತಾಯಿಯ ಅಕ್ಕ | ಪೆರಿಯಮ್ಮ | ಪೆರಿಯಮ್ಮ | ಪೆರಿಯಮ್ಮ<br>ಪೆರಿಯಾಯ |
| ತಾಯಿಯ ತಂಗಿ | ಸಿನ್ನಮ್ಮ | ಸಿನ್ನಮ್ಮ | ಸಿನ್ನಮ್ಮ<br>ಸಿನ್ನಾಯ<br>ಸಿನ್ನಾಯಿ<br>ಸಿತ್ತಿ |
| ತಾಯಿಯ ಅಣ್ಣ/ತಮ್ಮ | ಮಾಮ | ಮಾಮ | ಮಾಮ<br>ತಾಯ್‌ಮಾಮನ್ |
| ತಾಯಿಯ ಅಣ್ಣ/ತಮ್ಮನ ಹೆಂಡತಿ | ಅತ್ತೆ<br>(ಅತ್ತೈ–ಬರಹ ರೂಪ)<br>ಅತ್ತ(ಹೊಸಪೇಟೆ ಪರಿಸರದಲ್ಲಿ ಬಳಕೆಯಿದೆ) | ಅತ್ತೆ<br>ಅತ್ತ | ಅತ್ತೆ<br>ಮಾಮಿ |
| ತಾಯಿಯ ಅಣ್ಣ/ತಮ್ಮನ ಮಗ | ಮಾಮನ್ ಪೈಯನ್ | ಮಾಪಿಳ್ಳೈ | ಮಾಪಿಳ್ಳೈ |
| ತಂದೆಯ ಅಕ್ಕ/ತಂಗಿಯ ಗಂಡ | ಮಾಮ | ಮಾಮ | ಮಾಮ |
| ತಂದೆಯ ಅಕ್ಕ/ತಂಗಿಯ ಮಗಳು | ಮರುಮಗಳ್ | ಮರುಮಗಳ್ | ಮರುಮಗಳ್<br>ಮರುಪೊಣ್ |
| ತಂದೆಯ ಅಕ್ಕ/ತಂಗಿಯ ಮಗ | ಅತ್ತೆ ಪೆಯನ್ | ಮಾಮ<br>ಮಾಪಿಳ್ಳೈ | ಮಾಪಿಳ್ಳೈ |

| | | | |
|---|---|---|---|
| ಅಣ್ಣನ ಹೆಂಡತಿ | ಅಣ್ಣಿ | ಅಣ್ಣಿ | ಅಣ್ಣಿಯಾರ್ |
| ಅಕ್ಕನ ಗಂಡನಿಗೆ | ಮಚ್ಚಾನ್ | ಮಾಮ | ಮಚ್ಚ |
| | | | ಅಕ್ಕ ವೀಟುಕಾರರ್ |
| ತಂಗಿಯ ಗಂಡನಿಗೆ | ಮಾವ | ಮಚ್ಚಾನ್(ಮಚ್ಚ) | ಮಚ್ಚಾನ್(ಮಚ್ಚ) |
| | | | ಮಾಪ್ಳೆ(ಆಡು ಮಾತಿನಲ್ಲಿ) |
| ಹೆಂಡತಿಯ ಅಣ್ಣ/ತಮ್ಮನ | ಮಾಮ | ಮಾಪಿಳ್ಳೆ | ಮಾಮ |
| ಗಂಡನ/ಹೆಂಡತಿಯ ತಂದೆ | ಮಾಮ | ಮಾಮ | ಮಾಮ |
| | | | ಮಾಮನವರ್ |
| ಗಂಡನ/ಹೆಂಡತಿಯ ತಾಯಿ | ಅತ್ತ | ಅತ್ತ | ಮಾಮಿಯರ್ |
| | | | ಮಾಮಿ |
| | | | ವೀಟುಕಾರ್ ತಾಯಿ |
| ಗಂಡನ ಅಣ್ಣ | ಮಾಮ | ಮಾಮ | ಪೆರಿಯ ಮಾಮ |
| ಗಂಡನ ತಮ್ಮ | ಕೊಳಂದನಾರ್ | ತಂಬಿ | ತಂಬಿ |
| | | | ಕೊಳಂದನಾರ್ |
| ಗಂಡನ ಅಕ್ಕ | ಚಿತ್ತಿ | ಚಿತ್ತಿ | ಚಿತ್ತಿ |
| ಅಳಿಯ | ಮಾಪಿಳ್ಳೈ | ಮಾಪಿಳ್ಳೈ | ಮಾಪಿಳ್ಳೈ |
| | | | ಮರುಮಗನ್ |
| ಮಗಳ ಮಗಳು | ಪೊಂಪೇತ್ತಿ | ಪೇತ್ತಿ | ಪೇತ್ತಿ |
| | ಪೇತ್ತಿ | | |
| ಮಗಳ ಮಗ | ಪೊಂಪೇರನ್ | ಪೇರಂಡಿ | ಪೇತ್ತಿ |
| | ಪೇರನ್ | | ಪೇರನ್ |
| ಮಗನ ಮಗ | ಪೇರನ್ | ಪೇರನ್ | ಎಮ್‌ಪೇರನ್ |
| ಮಗನ ಮಗಳು | ಪೇತ್ತಿ | ಪೇತ್ತಿ | ಎಮ್‌ಪೇತ್ತಿ |
| ಹೆಂಡತಿಯ ತಂಗಿಯ ಗಂಡ | ಸಗಲನ್(ಸಗಲ) | ಸಗಲನ್(ಸಗಲ) | ಸಗಲನ್(ಸಗಲ) |

| | | | |
|---|---|---|---|
| **ತಂದೆಯ ತಂದೆ** | ತಾತ | ತಾತ | ತಾತ |
| | | | ಪಾಟನ್(ಭೋವಿ) |
| **ತಂದೆಯ ತಾಯಿ** | ಪಾಟಿ | ಆಯಿ | ಆಯ |
| | | | ಪಾಟಿ |
| | | | ಆಯಿ |
| **ತಾಯಿಯ ತಂದೆ** | ತಾತ | ತಾತ | ತಾತ |
| **ತಂದೆಯ ತಂದೆ** | ತಾತ | ತಾತ | ತಾತ |

**ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರ ಸಂಬಂಧವಾಚಕಗಳ ಬಳಕೆಯಲ್ಲಿ ಕಂಡುಬರುವ ಭಿನ್ನತೆಗಳು**

ಹಿರಿಯೂರು ಮತ್ತು ಹೊಸಪೇಟೆ ಪರಿಸರದ ತಮಿಳು ಭಾಷಿಕರು ತಮ್ಮ ಭಾಷಾ ಬಳಕೆ ಸಮಯದಲ್ಲಿ ಬಳಕೆ ಮಾಡುವಂತಹ ಸಂಬಂಧವಾಚಕಗಳು, ಸಂಬೋಧನಾ ರೂಪಗಳು ಮತ್ತು ಉಲ್ಲೇಖ ರೂಪಗಳನ್ನು ಇಲ್ಲಿ ಸಾಮಾಜಿಕ ಭಿನ್ನಾಂಶವಾದ ಜಾತಿಯನ್ನು ಆಧರಿಸಿ ವಿವರಿಸಿದೆ. ಅಂದರೆ ಗೌಂಡರ್, ಮೊದಲಿಯಾರ್, ಮತ್ತು ವಡ್ಡಾರ್ ಜಾತಿಯಲ್ಲಿ ಸಂಬಂಧವಾಚಕಗಳ ಬಳಕೆಯ ಕೆಲವು ವ್ಯತ್ಯಾಸಗಳನ್ನು ಕಾಣಬಹುದು. ಈ ವ್ಯತ್ಯಾಸಗಳು ಪ್ರಾಚೀನ ತಮಿಳು ಭಾಷೆಯ ರೂಪಗಳಾಗಿವೆ. ಇನ್ನು ಕೆಲವು ತಮಿಳು ನಾಡಿನಲ್ಲಿ ಬಳಕೆಯಲ್ಲಿರುವ ಪ್ರಾದೇಶಿಕ ತಮಿಳು ಪ್ರಭೇದದ ರೂಪಗಳು ಬಳಕೆಯಲ್ಲಿವೆ. ಹೀಗೆ ಕೆಲವು ವ್ಯತ್ಯಾಸಗಳನ್ನು ಕಾಣಬಹುದು. ವ್ಯತ್ಯಾಸಗಳನ್ನು ಹೇಳುವಾಗ ಉನ್ನತ ವರ್ಗಗಳು ಮತ್ತು ಕೆಳವರ್ಗಗಳು ಎಂದು ವಿಭಾಗಿಸಿದೆ. ಉನ್ನತ ವರ್ಗ ಎಂದರೆ ತಮಿಳು ಭಾಷಿಕರಲ್ಲಿ ಗೌಂಡರ್, ಮೊಲಿಯಾರ್, ಚೆಟ್ಟಿಯಾರ್ ಸಮುದಾಯಗಳನ್ನು ವಿಭಾಗಿಸಿಕೊಂಡಿದೆ. ಕೆಳವರ್ಗಗಳು ಎಂದರೆ ಚಕ್ಕಲಿಯಾರ್, ಆದಿದ್ರಾವಿಡ, ವಡ್ಡಾರ್ ಸಮುದಾಯಗಳನ್ನು ಎಂದು ವಿಭಾಗಿಸಿಕೊಂಡಿದೆ. ಈ ವಿಭಾಗವು ಆರ್ಥಿಕ ಮತ್ತು ಸಾಮಾಜಿಕ ಸ್ಥಾನವನ್ನು ಅನುಸರಿಸಿ ವಿಭಾಗಿಸಿಕೊಳ್ಳಲಾಗಿದೆ. ಈ ಎರಡು ವರ್ಗದ ಸಮುದಾಯಗಳು ಹಿರಿಯೂರು ಮತ್ತು ಹೊಸಪೇಟೆ ಪ್ರದೇಶಗಳಲ್ಲಿ ಕಂಡುಬರುತ್ತದೆ.

**ತಂದೆ**

ತಮಿಳು ಭಾಷಿಕರ ಬಳಕೆಯಲ್ಲಿ 'ಅಪ್ಪ' ಎಂಬ ಸಂಬಂಧವಾಚಕವನ್ನು ಜನ್ಮ ನೀಡಿದ ಪುರುಷನಿಗೆ ಬಳಸುತ್ತಾರೆ.

೧. ಉನ್ನತ ವರ್ಗಗಳಲ್ಲಿ 'ಅಪ್ಪ' ರೂಪವನ್ನು ಸಂಬಂಧ ವಾಚಕವಾಗಿಯೂ ಮತ್ತು ಸಂಬೋಧನಾ ರೂಪವಾಗಿಯೂ ಬಳಕೆ ಮಾಡುತ್ತಾರೆ.

೨. ಕೆಳವರ್ಗಗಳಲ್ಲಿ 'ಅಪ್ಪ' ಸಂಬಂಧವಾಚಕವನ್ನು 'ಅಪ್ಪ' ಎಂದು ಸಂಬೋಧನಾ ರೂಪವಾಗಿ ಬಳಕೆ ಮಾಡುತ್ತಾರೆ. ಇನ್ನು ವಡ್ಡಾರ್ ಸಮುದಾಯದಲ್ಲಿ 'ಅಯ್ಯ' ರೂಪವನ್ನು ಸಂಬೋಧನಾ ರೂಪವಾಗಿ ಬಳಸುತ್ತಾರೆ.

೩. ಇಂದಿನ ಯುವ ಸಮೂಹ ಮತ್ತು ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಪಡೆದ ಸಮೂಹವು ಹೆಚ್ಚಾಗಿ 'ಅಪ್ಪ' ಎಂದು ಬಳಸುತ್ತಾರೆ.

**ಹೆಂಡತಿಗೆ**

೧. ಉನ್ನತ ವರ್ಗಗಳಲ್ಲಿ ಹೆಂಡತಿಗೆ ಹೆಸರಿನಿಂದಲೇ ಸಂಬೋಧಿಸುವುದು ಹೆಚ್ಚು ಬಳಕೆಯಲ್ಲಿದೆ. ಇದನ್ನು ಹೊರತಾಗಿ 'ಎನ್ನಮ್ಮ' ಎಂದು, ಕನ್ನಡದ ಪ್ರಭಾವವಿರುವ ಕುಟುಂಬಗಳಲ್ಲಿ 'ರ್‍ರೀ' ಎಂದು ಸಂಬೋಧಿಸುತ್ತಾರೆ.

೨. ಕೆಳವರ್ಗಗಳಲ್ಲಿ 'ವೀಟುಕಾರಿ', 'ಪೊಂಡಾಟಿ' ಎಂದು ಬಳಕೆ ಮಾಡುತ್ತಾರೆ.

**ಗಂಡನಿಗೆ**

೧. ಉನ್ನತ ವರ್ಗಗಳಲ್ಲಿ 'ಮಾಮ' ಎಂದು ಬಳಸಿ ಸಂಬೋಧಿಸುತ್ತಾರೆ. ಇದರೊಂದಿಗೆ ಕನ್ನಡ ಪರಿಸರದ ಪ್ರಭಾವವಿರುವವರು 'ರ್‍ರೀ' ಎಂದು ಸಂಬೋಧಿಸುತ್ತಾರೆ. ಉಲ್ಲೇಖ ರೂಪಗಳಾಗಿ 'ಅಯ್ಯರ್', 'ಅವರ್' ಎಂದು ಬಳಸುತ್ತಾರೆ.

೨. ಕೆಳವರ್ಗಗಳಲ್ಲಿ 'ಮಾವ' ಎಂದು ಬಳಸಿ ಸಂಬೋಧಿಸುವುದು ಕಾಣಬಹುದು.

**ತಾಯಿಯ ಅಕ್ಕನಿಗೆ**

ತಾಯಿಯ ಅಕ್ಕನನ್ನು 'ಪೆರಿಯಮ್ಮ' ಎಂದು ಸಂಬೋಧಿಸುವುದು ಕಾಣಬಹುದು. ಇಲ್ಲಿ 'ಪೆರಿಯ' ಎಂದರೆ ಹಿರಿಯವರು ಎಂದರ್ಥ.

**ತಾಯಿಯ ತಂಗಿಗೆ:**

೧. ಉನ್ನತ ವರ್ಗಗಳಲ್ಲಿ ತಾಯಿಯ ತಂಗಿಗೆ 'ಚಿತ್ತಿ' ಎಂದು ಕರೆಯುತ್ತಾರೆ.

೨. ಕೆಳವರ್ಗಗಳಲ್ಲಿ 'ಚಿನ್ನಮ್ಮ' ಎಂಬ ರೂಪದಿಂದ ಸಂಬೋಧಿಸುತ್ತಾರೆ.

೩. ಈ ಹಿಂದೆ ಹೆಚ್ಚಾಗಿ ಚಿನ್ನಾಯಿ/ಚಿನ್ನಾಯ ಎಂದು ಬಳಕೆ ಮಾಡುತ್ತಿದ್ದರು. ಇಂದು ಶಿಕ್ಷಣ ಪಡೆದಿರುವ ಹೆಚ್ಚಿನವರು 'ಚಿನ್ನಮ್ಮ' ಎಂಬ ಬಳಕೆ ಮಾಡುತ್ತಾರೆ. ಇದನ್ನು ಹೊರೆತಾಗಿ ಕನ್ನಡದ ಪ್ರಭಾವ ಹೊಂದಿರುವ ಮಕ್ಕಳು 'ಚಿಕ್ಕಮ್ಮ' ಎಂದು ಬಳಸುತ್ತಾರೆ.

**ತಂದೆಯ ತಂದೆ ಮತ್ತು ತಾಯಿಗೆ**

ತಂದೆಯ ತಾಯಿಗೆ: 'ಪಾಟಿ' ಎಂದು ಉನ್ನತ ವರ್ಗಗಳಲ್ಲಿ ಬಳಕೆ ಮಾಡುತ್ತಾರೆ. ಕೆಳವರ್ಗಗಳಲ್ಲಿ 'ಆಯಿ' ಎಂದು ಬಳಕೆ ಮಾಡುತ್ತಾರೆ.

ತಂದೆಯ ತಂದೆಗೆ 'ತಾತ' ಎಂದು ಬಳಕೆ ಮಾಡುತ್ತಾರೆ.

೧. ಕೆಳವರ್ಗಗಳಲ್ಲಿ 'ಅಯ್ಯ' ಎಂದು ಬಳಕೆ ಮಾಡುತ್ತಾರೆ. ಇದು ಇಂದು 'ತಾತಾ' ಎಂದು ಬಳಕೆಯಲ್ಲಿದೆ. ಕನ್ನಡದಲ್ಲಿ ಶಿಕ್ಷಣ ಪಡೆದ ಹೆಚ್ಚಿನವರು 'ತಾತ' ರೂಪವನ್ನು ಬಳಸುತ್ತಾರೆ.

**ತಾಯಿಯ ತಾಯಿ ಮತ್ತು ತಂದೆಗೆ**

ತಾಯಿಯ ತಾಯಿಯನ್ನು 'ಪಾಟಿ' ಎಂದು ತಂದೆಯನ್ನು 'ತಾತ' ಎಂದು ಸಂಬೋಧಿಸುತ್ತಾರೆ.

ಕೆಳವರ್ಗಗಳಲ್ಲಿ 'ತಾತ' ಎಂದು ಬಳಕೆ ಮಾಡುತ್ತಾರೆ. ವಡ್ಡಾರ್ ಸಮುದಾಯದಲ್ಲಿ 'ಪಾಟನ್' ಎಂದು ಬಳಕೆ ಮಾಡುತ್ತಾರೆ.

**ಕನ್ನಡ ಪರಿಸರದ ಪ್ರಭಾವದಿಂದಾಗಿ ತಮಿಳು ಭಾಷಿಕರ ಸಂಬಂಧವಾಚಕಗಳಲ್ಲಿ ಕಂಡುಬರುವ ವ್ಯತ್ಯಾಸಗಳು**

ಕನ್ನಡ ಪರಿಸರ ಎಂದರೆ ಕನ್ನಡಿಗರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಪರಿಸಗಳಲ್ಲಿ ಪಾಲ್ಗೊಳ್ಳುವ ತಮಿಳು ಸಮುದಾಯದ ಜನರು ತಮ್ಮ ಭಾಷೆಯಲ್ಲಿ ಸಂಬಂಧವಾಚಕಗಳನ್ನು ಕನ್ನಡ ಪರಿಸರಕ್ಕೆ ತಕ್ಕಂತೆ ಬಳಕೆ ಮಾಡುವುದನ್ನು ಕಾಣಬಹುದು. ಈ ರೀತಿಯಾಗಿ ಕನ್ನಡ ಪರಿಸರದಲ್ಲಿ ಕಂಡುಬರುವ ಸಂಬಂಧ ವಾಚಕಗಳು ತಮಿಳು ಭಾಷಿಕರು ಮಾತನಾಡುವಾಗ ಸಾಮಾನ್ಯವಾಗಿ ಬಳಕೆ ಮಾಡುತ್ತಾರೆ.

ಕನ್ನಡದ ಪರಿಸರದಲ್ಲಿ ಶಿಕ್ಷಣ ಪಡೆದು ಬೆಳೆದಿರುವ ಮಕ್ಕಳು ತಂದೆ–ತಾಯಿ ಮತ್ತು ಅಣ್ಣ–ತಂಗಿಯರ ನಂತರದ ಸಂಬಂಧಗಳನ್ನು ತಮಿಳಿನಲ್ಲಿ ಬಳಸುವುದು ಕಡಿಮೆಯಾಗಿದೆ. ಅಂದರೆ ರಕ್ತ ಸಂಬಂಧಗಳನ್ನು ಹೇಳುವಾಗ ಪ್ರಾಥಮಿಕ ಸಂಬಂಧಗಳನ್ನು ತಂದೆ–ತಾಯಿ, ಅಣ್ಣ–ತಂಗಿ–ತಮ್ಮ ಸಂಬಂಧಗಳನ್ನು ಗುರುತಿಸುತ್ತೇವೆ. ನಂತರ ವೈವಾಹಿಕ ಸಂಬಂಧಗಳಿಂದ ರೂಢಿಯಾಗುವ ಸಂಬಂಧಗಳನ್ನು ಎರಡನೇ ಸಂಬಂಧಗಳನ್ನು ಎಂದು ಗುರುತಿಸುತ್ತೇವೆ. ಈ ರೀತಿಯಾಗಿ ಮೊದಲನೆ ಹಂತದ ರಕ್ತ ಸಂಬಂಧಗಳನ್ನು ಕರ್ನಾಟಕದಲ್ಲಿ ವಾಸಮಾಡುವ ತಮಿಳು ಭಾಷಾದ್ವೀಪದ ಮಕ್ಕಳು ನೇರವಾಗಿ ಬಳಕೆ ಮಾಡುತ್ತಾರೆ. ಆದರೆ ನಂತರದಲ್ಲಿ ಇವರು ವೈವಾಹಿಕ ಸಂಬಂಧದಿಂದ ರೂಢಿಯಾಗುವ ಎರಡನೇ ಹಂತದ ಸಂಬಂಧವಾಚಕಗಳನ್ನು, ಸಂಬೋಧನಾ ರೂಪಗಳನ್ನು ಬಳಕೆ ಮಾಡುವುದು ಕಡಿಮೆ. ಈ ರೀತಿಯ ಎರಡನೆ ಹಂತದ ರಕ್ತಸಂಬಂಧಗಳ ಸಂಬಂಧವಾಚಕಗಳನ್ನು ಪರಿಚಯವು ಕೆಲವು ಮಕ್ಕಳಲ್ಲಿ ಕಂಡುಬರುವುದಿಲ್ಲ. ಇದಕ್ಕೆ ಕಾರಣ ಈ ಮಕ್ಕಳು ಕನ್ನಡ ಪರಿಸರದಲ್ಲಿ ಬೆಳೆದಿರುತ್ತಾರೆ. ಅಲ್ಲದೆ ಮನೆಯಲ್ಲಿಯೂ ತಮಿಳು ಭಾಷೆಯನ್ನು ಮಾತನಾಡಿದರೂ ಮನೆಯಲ್ಲಿ ಎರಡನೆ ಹಂತದ ರಕ್ತಸಂಬಂಧಗಳು ಇಲ್ಲದೇ ಇರುವುದರಿಂದ ಮತ್ತು ಅವುಗಳ ಬಳಕೆಯಿಲ್ಲದೆ ಇರುವುದರಿಂದ ಇವುಗಳ ಪರಿಚಯವಿರುವುದಿಲ್ಲ.

ಹಿರಿಯೂರು ಪರಿಸರದಲ್ಲಿ ತಮಿಳು ಭಾಷಿಕರು ಮನೆ ಆವರಣದಲ್ಲಿ ತಮಿಳು ಭಾಷೆಯನ್ನು ಬಳಸಿ ತಮಿಳು ಸಂಬಂಧವಾಚಕಗಳನ್ನು ಬಳಸಿದರೆ, ಕನ್ನಡದ ಸಾಮಾಜಿಕ ಆವರಣದಲ್ಲಿ ಕನ್ನಡದ ಸಂಬಂಧವಾಚಕಗಳನ್ನು ಬಳಕೆ ಮಾಡುತ್ತಾರೆ. ಇವರುಗಳು ದ್ವಿಭಾಷಿಕರಾಗಿ ಅಥವಾ ಕನ್ನಡ ಪರಿಸರದ ಪ್ರಭಾವಕ್ಕೆ ಒಳಗಾಗಿರುವವರು ಇರುತ್ತಾರೆ. ಇವರುಗಳು ಬಳಕೆ ಪರಿಸರ ಅನುಸರಿಸಿ ಸಂಬಂಧವಾಚಕವನ್ನು ಬಳಕೆ ಮಾಡುತ್ತಾರೆ. ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರು ಕನ್ನಡ ಮತ್ತು ತೆಲುಗು ಭಾಷೆಯ

ಸಂಬಂಧವಾಚಕಗಳನ್ನು ನೇರವಾಗಿ ಬಳಸುತ್ತಾರೆ. ಈ ಪರಿಸರದಲ್ಲಿ ತೆಲುಗು ಭಾಷೆಯ ಪ್ರಭಾವವು ಹೆಚ್ಚಿರುವುದರಿಂದಾಗಿ ತೆಲುಗು ಭಾಷೆಯ ಸಂಬಂಧವಾಚಕಗಳನ್ನು ಬಳಕೆ ಮಾಡುತ್ತಾರೆ. ಇವುಗಳೊಂದಿಗೆ ಎರಡೂ ಪರಿಸರಗಳಲ್ಲಿ ಆಧುನಿಕತೆಯ ಪ್ರಭಾವ ಮತ್ತು ಶಿಕ್ಷಣದ ಪ್ರಭಾವದಿಂದಾಗಿ ತಮಿಳು ಭಾಷಿಕ ಮಕ್ಕಳು ತಮ್ಮ ಮಾತಿನ ಮಧ್ಯೆ ಇಂಗ್ಲಿಷನ ಆಂಟಿ, ಅಂಕಲ್ ಸಂಬೋಧನಾ ರೂಪಗಳನ್ನು ಬಳಕೆ ಮಾಡುತ್ತಾರೆ. ಈ ರೀತಿಯ ಬಳಕೆಯು ಕನ್ನಡಿಗರೊಂದಿಗೆ ಮಾತನಾಡುವಾಗ, ಅಪರಿಚಿತರೊಂದಿಗೆ ಮಾತನಾಡುವಾಗ ಬಳಕೆ ಮಾಡುತ್ತಾರೆ. ತಮಿಳು-ತಮಿಳು ಭಾಷಿಕರೊಂದಿಗೆ ಮಾತನಾಡುವಾಗ ಇಂಗ್ಲಿಷ್‌ನ ಸಂಬೋಧನಾ ರೂಪಗಳನ್ನು ಕಡಿಮೆ ಬಳಕೆ ಮಾಡುತ್ತಾರೆ.

ತಮಿಳು ಭಾಷೆಯ ಸಂಬಂಧವಾಚಕಗಳು ಕನ್ನಡ ಭಾಷೆಯ ಪರಿಸರದಲ್ಲಿ ಪ್ರಭಾವ ಬೀರಿರುವುದು ಕಾಣಬಹುದು. ಅಂದರೆ ಕೆಲವು ಭಾಷಾ ಬಳಕೆಯ ಆವರಣಗಳಲ್ಲಿ ತಮಿಳು ಸಂಬಂಧವಾಚಕಗಳು ಬಳಕೆಯಾಗುತ್ತವೆ. ವಿಶೇಷವಾಗಿ ಯುವ ಸಮೂಹಗಳಲ್ಲಿ, ಶಾಲಾ-ಕಾಲೇಜು ವಲಯಗಳಲ್ಲಿ ಈ ಸಂಬಂಧವಾಚಕಗಳನ್ನು ಸಂಬೋಧನಾ ರೂಪಗಳಾಗಿ ಬಳಕೆ ಮಾಡುತ್ತಾರೆ. ಈ ರೀತಿಯ ಬಳಕೆಯು ಹಿರಿಯೂರು ಪರಿಸರದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.

ಕನ್ನಡ ಪರಿಸರದಲ್ಲಿ ಬಳಕೆಯಾಗುವ ತಮಿಳು ಸಂಬೋಧನಾ ರೂಪಗಳು

ಮಚ್ಚ

ಮಾಪಿಳ್ಳೈ/ಮಾಪ್ಳೆ

ತಂಬಿ

ತಂಗಚ್ಚಿ

ಅಣ್ಣಾಚ್ಚಿ

ಹೀಗೆ ಕೆಲವು ಸಂಬೋಧನಾ ರೂಪಗಳು ಬಳಕೆಯಾಗುತ್ತವೆ.

ಈ ಸಂಬೋಧನಾ ರೂಪಗಳು ಹೆಚ್ಚಾಗಿ ಕನ್ನಡ ಪರಿಸರದ ಯುವ ಸಮೂಹದಲ್ಲಿ ಮತ್ತು ಶಾಲಾ-ಕಾಲೇಜುಗಳಲ್ಲಿ ಬಳಕೆಯಾಗುತ್ತದೆ. ಅಂದರೆ ತಮಿಳು ಮಕ್ಕಳು ಬಳಕೆ ಮಾಡುವ ಈ ಸಂಬಂಧವಾಚಕ ಸಂಬೋಧನಾ ರೂಪಗಳನ್ನು ಅನುಕರಣೆಯಾಗಿ ಕನ್ನಡದ ಮಕ್ಕಳು ಬಳಕೆ ಮಾಡುತ್ತಾರೆ. ಇನ್ನು ಯುವ ಸಮೂಹದಲ್ಲಿ ಈ ರೀತಿಯ ಬಳಕೆಯು ವೈಶಿಷ್ಟ್ಯವೆಂದು ಬಳಕೆ ಮಾಡುತ್ತಾರೆ.

ಉದಾ: '**ಎನ್ ಮಚ್ಚ**'

'**ಹಾಯ್ ಮಚ್ಚಿ**'

'ಎ ನನ್ನ **ತಂಗಚ್ಚಿ** ಬರುತ್ತಿದ್ದಾಳೆ'

'ಎಲ್ಲಿ ನಿಮ್ಮ **ಅಣ್ಣಾಚ್ಚಿ** ಬರಲೇ ಇಲ್ಲ'

'**ಮಚ್ಚಿ** ಇವತ್ತು ಕ್ಲಾಸ್ ಹೇಗಿತ್ತು'

'**ತಂಬಿ** ಹೇಗಿದಿಯ, ಅರಾಮ'

'ಎನಮ್ಮ **ಮಾಪ್ಲೆ**'

ಹೀಗೆ ಶಾಲಾ–ಕಾಲೇಜು ವಲಯಗಳಲ್ಲಿ ಬಳಕೆ ಮಾಡುತ್ತಾರೆ. ಇದು ಆತ್ಮೀಯರನ್ನು ಸಂಬೋಧಿಸುವಾಗ ಬಳಕೆ ಮಾಡುವ ಸಂಬಂಧವಾಚಕಗಳಾಗಿವೆ. ಇದರೊಂದಿಗೆ ಕೆಲವು ಮಹಿಳಾ ವಿದ್ಯಾರ್ಥಿಗಳು ಸಹ **'ಮಚ್ಚ/ಮಚ್ಚಿ'** ಸಂಬಂಧವಾಚಕವನ್ನು ಆತ್ಮೀಯರಿಗೆ ಬಳಕೆ ಮಾಡುತ್ತಾರೆ. ಆದರೆ ಈ ರೀತಿಯ ಬಳಕೆ ಮಾಡುವ ಹಲವು ಮಕ್ಕಳಿಗೆ ಇದರ ಅರ್ಥ ತಿಳಿಯದೇ ಬಳಕೆ ಮಾಡುತ್ತಾರೆ. ಕೆಲವು ಮಕ್ಕಳು ಮಾತ್ರ ತಮಿಳು ಭಾಷಿಕರ ಅಥವಾ ತಮಿಳು ಭಾಷೆಯ ಆವರಣದಲ್ಲಿರುವ, ಈ ಸಂಬಂಧವಾಚಕಗಳ ಬಗ್ಗೆ ತಿಳಿದಿರುವವರು ತಿಳಿದು ಬಳಕೆ ಮಾಡುತ್ತಾರೆ. ಇದಲ್ಲದೆ ಈ ರೀತಿಯ ಬಳಕೆಯು ಕರ್ನಾಟಕದ ಬಹುಭಾಗಗಳಲ್ಲಿ ಬಳಕೆಮಾಡುತ್ತಿದ್ದಾರೆ. ಇದರೊಂದಿಗೆ ಇಂದಿನ ಕನ್ನಡ ಚಲನಚಿತ್ರಗಳಲ್ಲಿ ಮಚ್ಚಿ, ತಂಬಿ ರೂಪಗಳು ಬಳಕೆಯಲ್ಲಿರುವುರಿಂದ ಇತರೆಡೆಗಳಲ್ಲಿ ಬಳಕೆಗೆ ರೂಢಿಯಾಗಿರಬಹುದು. ಹೀಗೆ ತಮಿಳಿನ ಸಂಬಂಧವಾಚಕಗಳು ಕನ್ನಡದ ಪರಿಸರದಲ್ಲಿ ವಿಸ್ತರಿಸಿಕೊಂಡಿವೆ.

ಒಟ್ಟಾರೆಯಾಗಿ ಭಾಷಾದ್ವೀಪಗಳಲ್ಲಿನ ತಮಿಳು ಭಾಷಿಕ ರಚನೆಯನ್ನು ಗಮನಿಸಿದಾಗ ಸಂಬಂಧವಾಚಕಗಳಲ್ಲಿ ಮೂಲ ತಮಿಳಿನಲ್ಲಿ ಬಳಕೆಯಲ್ಲಿರುವಂತೆಯೇ ಬಳಕೆ ಮಾಡುತ್ತಿದ್ದಾರೆ. ಈ ತಮಿಳು ಭಾಷೆಯ ಸಂಬಂಧವಾಚಕಗಳಲ್ಲಿ ಸಾಮಾಜಿಕ ಪ್ರಬೇಧಗಳು ಮತ್ತು ಪ್ರಾದೇಶಿಕ ಪ್ರಬೇಧಗಳನ್ನು ಸಹ ಗುರುತಿಸಬಹುದು. ಆದರೆ ಪ್ರಾಥಮಿಕ ಹಂತದ ರಕ್ತಸಂಬಂಧವಾಚಕಗಳು ನೇರವಾಗಿ ಎಲ್ಲರಲ್ಲೂ ಬಳಕೆಯಲ್ಲಿವೆ. ಎರಡನೆ ಹಂತದ ರಕ್ತಸಂಬಂಧವಾಚಕಗಳು ಇತ್ತೀಚಿನ ತಲೆಮಾರಿನ ಮಕ್ಕಳಲ್ಲಿ ಬಳಕೆಯಲಿಲ್ಲ. ಇವುಗಳು ಬಳಕೆಯಿಂದ ಜಾರಿಹೋಗುತ್ತಿವೆ. ಇನ್ನು ಕನ್ನಡದ ಪರಿಸರದಲ್ಲಿ ತಮಿಳಿನ ಕೆಲವು ಸಂಬಂಧವಾಚಕಗಳು ಬಳಕೆಯಿವೆ. ಇವುಗಳು ಕೆಲವು ಸಂದರ್ಭಗಳಲ್ಲಿ ಪ್ರಜ್ಞಾಪೂರ್ವಕವಾಗಿ ಬಳಕೆಯಾದರೆ ಇನ್ನು ಕೆಲವು ಸಂದರ್ಭಗಳಲ್ಲಿ ಸಾಮಾನ್ಯವಾಗಿ ಅನುಕರಣೆಯಿಂದ ಅಥವಾ ಅಪ್ರಜ್ಞಾಪೂರ್ವಕವಾಗಿ ಬಳಕೆಯಾಗುತ್ತವೆ.

**೬.೨. ವ್ಯಕ್ತಿನಾಮಗಳು:**

ಭಾಷೆ ಅಮೂರ್ತ ರೂಪದ ಧ್ವನಿ ಸಂಕೇತಗಳ ವ್ಯವಸ್ಥೆಯಾಗಿದೆ. ಈ ವ್ಯವಸ್ಥೆಯು ಮಾನವರು ತಮ್ಮ ಪ್ರದೇಶ, ಗ್ರಹಿಕೆ, ಅನುಭವಗಳಿಗೆ ಅನುಸರಿಸಿಯೇ ಬಳಸುತ್ತಾರೆ. ಬಳಕೆಯ ಹಿನ್ನೆಲೆಯಲ್ಲಿಯೂ ಸಮಾಜ ಮತ್ತು ಸಂಸ್ಕೃತಿಯ ಅಗಾಧ ಪರಿಣಾಮಗಳಿಗೆ ಒಳಗಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಒಂದು ಭಾಷೆಯ ಉಪ ಅಂಗಗಳನ್ನು ಗಮನಿಸುವಾಗ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಗಮನಿಸಬೇಕಾದ ಅವಶ್ಯಕತೆ ಇದೆ. ಇದರ ಅರ್ಥ ಭಾಷೆ ಕೇವಲ ಧ್ವನಿ ವ್ಯವಸ್ಥೆಯಲ್ಲ, ಸಮಾಜ, ಸಂಸ್ಕೃತಿಗಳನ್ನು ತಿಳಿಸುವ ವಾಹಕವಾಗಿ ಕಾರ್ಯನಿರ್ವಹಿಸುತ್ತಿದೆ ಎಂದು.

ಭಾಷೆಯ ಉಪ ಅಂಗಗಳಲ್ಲಿ ಒಂದಾದ 'ವ್ಯಕ್ತಿನಾಮ'ವು ಪರಿಸರದಲ್ಲಿ ಇವರುವ ವ್ಯಕ್ತಿಗಳನ್ನು ಗುರುತಿಸಲು, ನಿರ್ದಿಷ್ಟವಾಗಿ ಅವರೊಂದಿಗೆ ಸಂಪರ್ಕ ಸಾಧಿಸಲು ನಾವುಗಳು ರೂಪಿಸಿಕೊಂಡಿದ್ದೇವೆ. ಈ ವ್ಯಕ್ತಿನಾಮಗಳ ಕುರಿತ ಅಧ್ಯಯನಗಳು ಹೊರ ದೇಶಗಳಲ್ಲಿ ವಿಸ್ತಾರವಾಗಿ ಮತ್ತು ವಿವರಣಾತ್ಮಕವಾಗಿ ನಡೆದಿವೆ. ಭಾರತದಲ್ಲಿ ೧೯೫೦ ರಿಂದ ಇತ್ತೀಚಿನವರೆಗೂ ಬೆಳೆದು ಬಂದಿದೆ. ವ್ಯಕ್ತಿನಾಮಗಳ ಅಧ್ಯಯನದಿಂದ ನಮಗೆ ಆಗುವ ಅನುಕೂಲಗಳೆಂದರೆ ವ್ಯಕ್ತಿಯ/ಕುಟುಂಬ/ಗ್ರಾಮ/ಸಮಾಜದ ಹಿನ್ನೆಲೆಗಳನ್ನು ತಿಳಿಯಬಹುದಾಗಿದೆ. ಆ ಮೂಲಕ ನಮ್ಮ ಮೂಲಗಳ ಕುರಿತು ಮಾಹಿತಿ ಸಂಗ್ರಹಿಸಬಹುದು. ವ್ಯಕ್ತಿನಾಮಗಳ ಬದಲಾವಣೆಯ ಸ್ವರೂಪವನ್ನು ಇಲ್ಲಿ ಗುರುತಿಸಬಹುದು. ಸಮಾಜದಲ್ಲಿ ಸಾಮಾಜಿಕ ಸ್ಥಾನಮಾನ ನಿರ್ಧರಿಸುವಲ್ಲಿ ಪಾತ್ರವೇನು? ವ್ಯಕ್ತಿನಾಮಗಳ ಎನ್ನುವ ಅಂಶಗಳನ್ನು ತಿಳಿಯಬಹುದಾಗಿದೆ.

ಇನ್ನು ವ್ಯಕ್ತಿನಾಮಗಳನ್ನು ಅವುಗಳ ರಚನೆಯ ಆಧಾರವಾಗಿ ಹಲವು ವಿಭಾಗಗಳಾಗಿ ವಿಂಗಡಿಸುತ್ತಾರೆ. ಅದರಲ್ಲಿ ಗಂಡು ಮತ್ತು ಹೆಣ್ಣನ್ನು ಆಧರಿಸಿ ಪುರುಷ ವ್ಯಕ್ತಿನಾಮಗಳು ಮತ್ತು ಸ್ತ್ರೀ ವ್ಯಕ್ತಿನಾಮಗಳು ಎಂದು, ರಚನೆಯ ಹಿನ್ನೆಲೆಯಿಂದ ವಾರ್ಗಿಕ ಮತ್ತು ನಿರ್ದಿಷ್ಟ ಎಂದು, ವಾರ್ಗಿಕ ಮತ್ತು ನಿರ್ದಿಷ್ಟಗಳಲ್ಲಿ ಬಳಕೆಯಾಗುವ ಜಾತಿ ಸೂಚಕಗಳು, ವೃತ್ತಿವಾಚಕಗಳು, ಸಂಬಂಧವಾಚಕಗಳು, ಸ್ಥಳನಾಮಗಳು, ದೈವ ನಾಮಗಳು ಹೀಗೆ ಹಲವುಗಳನ್ನು ವಿಶಿಷ್ಟವಾಗಿ ಗುರುತಿಸಿ ಅವುಗಳನ್ನು ವಿಭಾಗಿಸಿ ವಿವರಿಸಲಾಗುತ್ತದೆ. ಕನ್ನಡದಲ್ಲಿ ಹಲವರು ವ್ಯಕ್ತಿನಾಮಗಳ ಕುರಿತು ಅಧ್ಯಯನಗಳನ್ನು ಮಾಡಿದ್ದಾರೆ. ಅದರಲ್ಲಿ ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು, ಬಳ್ಳಾರಿ ಜಿಲ್ಲೆಯ ದೈವಮೂಲದ ವ್ಯಕ್ತಿನಾಮಗಳು ಸಂಶೋಧನಾ ಪ್ರಬಂಧಗಳಾಗಿದ್ದು, ಇನ್ನು ಹಲವು ಹಿರಿಯ ಸಂಶೋಧಕರು ಮತ್ತು ಲೇಖಕರು ಲೇಖನಗಳಲ್ಲಿ ವ್ಯಕ್ತಿನಾಮಗಳ ರಚನೆ, ವಿಶ್ಲೇಷಣೆ ಮಾಡಿದ್ದಾರೆ.

ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಕನ್ನಡ ಭಾಷಿಕರ ನಡುವೆ ವಾಸವಾಗಿರುವ ತಮಿಳು ಭಾಷಿಕರು ಮೂರು ತಲೆಮಾರುಗಳು ಕಳೆದರು ತಮ್ಮ ಸಂಸ್ಕೃತಿ-ಭಾಷೆಯನ್ನು ಉಳಿಸಿಕೊಂಡು ಮತ್ತು ಸಂಗೋಪನೆ ಮಾಡಿಕೊಂಡು ಬಂದಿದ್ದಾರೆ. ಈ ಭಾಷೆ ಮತ್ತು ಸಂಸ್ಕೃತಿಯನ್ನು ವ್ಯಕ್ತಿನಾಮಗಳ ಹಿನ್ನೆಲೆಯಲ್ಲಿ ಭಾಷೆಯ ಮೂಲಕ ಕಂಡುಕೊಳ್ಳುವುದು ಮುಖ್ಯ ಉದ್ದೇಶವಾಗಿದೆ. ಈ ಅಧ್ಯಯನದಿಂದ ಅನ್ಯಭಾಷಿಕರ ನಡುವೆ ಬದುಕುತ್ತಿರುವ ತಮಿಳರ ವ್ಯಕ್ತಿನಾಮಗಳ ಸ್ವರೂಪದಲ್ಲಿ ಬದಲಾವಣೆ ಕಂಡುಕೊಂಡಿದ್ದಾರೆಯೆ?. ಅದು ಯಾವ ಸ್ವರೂಪದಲ್ಲಿದೆ. ಕನ್ನಡಿಗರು ಈ ತಮಿಳು ವ್ಯಕ್ತಿನಾಮಗಳನ್ನು ಯಾವ ರೀತಿಯಲ್ಲಿ ಬಳಸುತ್ತಾರೆ. ಒಂದೊಮ್ಮೆ ಬಳಸಿದರೆ ಉಚ್ಚಾರಣೆಯ ವ್ಯತ್ಯಾಸಗಳನ್ನು ಕಾಣಬಹುದೇ? ಎಂಬ ಅಂಶಗಳನ್ನು ಗಮನಿಸಬಹುದು. ಒಟ್ಟಾರೆಯಾಗಿ ದ್ವಿಭಾಷಿಕ ಮತ್ತು ಬಹುಭಾಷಿಕ ಹಿನ್ನೆಲೆಯಲ್ಲಿ ತಮಿಳು ವ್ಯಕ್ತಿನಾಗಳ ಬಳಕೆಯನ್ನು ಗುರುತಿಸುವುದಾಗಿದೆ.

ವ್ಯಕ್ತಿನಾಮಗಳ ರಾಚನಿಕ ವ್ಯವಸ್ಥೆಯನ್ನು ಸಂಕ್ಷಿಪ್ತವಾಗಿ ತಿಳಿಯುವುದಾದರೆ ಕಲಬುರ್ಗಿ ಎಂ. ಎಂ. ಅವರ ವ್ಯಕ್ತಿನಾಮಗಳ ರಾಚನಿಕ ವರ್ಗೀಕರಣ ಹೆಚ್ಚು ಬಳಕೆಯಲ್ಲಿದೆ. ಇವರು ವ್ಯಕ್ತಿನಾಮಗಳ ರಾಚನಿಕ ವರ್ಗೀಕರಣ ಈ ಕೆಳಗಿನಂತೆ ತಿಳಿಸಿದ್ದಾರೆ.

೧. ನಿರ್ದಿಷ್ಟವಾಚಿನಾಮ

೨. ನಿರ್ದಿಷ-ವಾರ್ಗಿಕವಾಚಿನಾಮ(ಕಾಳಿ+ಅಮ್ಮ=ಕಾಳಿಯಮ್ಮ(ತಮಿಳು ಬಳಕೆಯಲ್ಲಿ))

೩. ವಿಸ್ತೃತ ನಿರ್ದಿಷ್ಟವಾಚಿನಾಮ(ರಾಮ+ಲಕ್ಷ್ಮಿ=ರಾಮಲಕ್ಷ್ಮಿ)

೪. ವಿಸ್ತೃತ ನಿರ್ದಿಷ್ಟ-ಅವಿಸ್ತೃತ ವಾರ್ಗಿಕವಾಚಿನಾಮ(ಆರು+ಸಾಮಿ+ಅಪ್ಪ=ಆರುಸಾಮಿಯಪ್ಪ)

೫. ಅವಿಸ್ತೃತ ನಿರ್ದಿಷ್ಟ-ವಿಸ್ತೃತ ವಾರ್ಗಿಕವಾಚಿನಾಮ(ಇರುಳ+ಅಪ್ಪ+ಗೌಂಡರ್=ಇರುಳಪ್ಪ ಗೌಂಡರ್)

೬. ವಿಸ್ತೃತ ನಿರ್ದಿಷ್ಟ-ವಿಸ್ತೃತ ವಾರ್ಗಿಕ ವಾಚಿನಾಮ (ಸೀತಾ+ರಾಮ+ಅಪ್ಪ+ಗೌಡ=ಸೀತಾರಾಮಪ್ಪಗೌಡ) (ಕಲಬುರ್ಗಿ ಎಂ. ಎಂ., ನಾಮವಿಜ್ಞಾನ, ಪುಟ. ೧೬) ಹೀಗೆ ನಿರ್ದಿಷ್ಟ ಮತ್ತು ವಾರ್ಗಿಕಗಳ ಅನುಗುಣವಾಗಿ ವಿವೇಚಿಸಿದ್ದಾರೆ.

ವ್ಯಕ್ತಿನಾಮಗಳ ಸ್ವರೂಪ ಮತ್ತು ವಿಶ್ಲೇಷಣೆಯನ್ನು ಸಮಾಜೋಭಾಷಿಕ ಹಿನ್ನೆಲೆಯಲ್ಲಿ ವಿಸ್ತಾರವಾಗಿ ವಿಶ್ಲೇಷಣೆ ಮಾಡಿರುವುದನ್ನು ಕಾಣಬಹುದು. ಅಂದರೆ ಸಾಮಾಜಿಕ ಭಿನ್ನಾಂಶಗಳಾದ ವಯಸ್ಸು, ಜಾತಿ, ಲಿಂಗ ವೃತ್ತಿ ಮುಂತಾದವುಗಳನ್ನು ಗಮನದಲ್ಲಿರಿಸಿಕೊಂಡು ವ್ಯಕ್ತಿನಾಮಗಳ ರಚನೆ ಮತ್ತು ಸ್ವರೂಪವನ್ನು ವಿವರಿಸಲಾಗಿದೆ. ಸಮಾಜೋಭಾಷಿಕ ಹಿನ್ನೆಲೆಯ ಅಧ್ಯಯನಗಳಲ್ಲಿ ಸಾಮಾಜಿಕ ಭಿನ್ನಾಂಶವಾದ ಜಾತಿಯು ವ್ಯಕ್ತಿನಾಮಗಳಲ್ಲಿ ಹೇಗೆ ಗುರುತಿಸುತ್ತಾರೆ ಅಂದರೆ ವ್ಯಕ್ತಿಯ ಹೆಸರಿನಲ್ಲಿ ವಾರ್ಗಿಕವಾಗಿ ಬಳಕೆಯಲ್ಲಿದ್ದಾಗ ಅವರನ್ನು ಇಂತವರ ಸಾಮಾಜಿಕ ವರ್ಗಕ್ಕೆ ಸೇರಿದವರು ಎಂದು ಗುರುತಿಸುತ್ತಾರೆ. ಹೀಗೆ ಸಮಾಜದಲ್ಲಿನ ಅಂಶವನ್ನು ಭಾಷೆಯ ಉಪ ಅಂಗವಾದ ವ್ಯಕ್ತಿನಾಮಗಳಲ್ಲೂ ಕಾಣುತ್ತೇವೆ. ಹೀಗೆ ವ್ಯಕ್ತಿನಾಮಗಳಲ್ಲಿ ಸಾಮಾಜಿಕ ಚಹರೆಗಳು ಬಳಕೆಯಲ್ಲಿರುವುದು ಗುರುತಿಸಬಹುದು. ಇದೇ ರೀತಿಯಲ್ಲಿ ಕರ್ನಾಟಕದಲ್ಲಿ ನೆಲೆಗೊಂಡಿರುವವರ ವ್ಯಕ್ತಿನಾಮಗಳನ್ನು ಸಮಾಜೋಭಾಷಿಕ ಹಿನ್ನೆಲೆಯಲ್ಲಿ ವಿವರಿಸಿದಾಗ ಜಾತಿ ವಾಚಕಗಳು, ದೈವನಾಮಗಳು ಬಳಕೆಯಲ್ಲಿರುವುದು ಕಾಣಬಹುದು. ವ್ಯಕ್ತಿನಾಮಗಳ ರಚನೆಯಲ್ಲಿ ಸಾಮಾಜಿಕ ಅಂಶವಾದ ಜಾತಿ ಹೇಗೆ ಕಾರ್ಯನಿರ್ವಹಿಸುತ್ತದೆ ಎಂಬುದನ್ನು ಗುರುತಿಸಬಹುದು. ಈ ರೀತಿಯ ವ್ಯಕ್ತಿನಾಮಗಳ ರಚನೆಯಲ್ಲಿ ತಮಿಳು ಭಾಷಿಕರ ಸಂಸ್ಕೃತಿಯನ್ನು ಹೇಗೆ ಉಳಿಸಿಕೊಂಡಿದ್ದಾರೆ ಎಂಬುದನ್ನು ಕಂಡುಕೊಳ್ಳುವುದಾಗಿದೆ. ಹಿರಿಯೂರು ಮತ್ತು ಹೊಸಪೇಟೆ ಪರಿಸರದ ತಮಿಳು ಭಾಷಿಕರ ವ್ಯಕ್ತಿನಾಮಗಳನ್ನು ಗಮನಿಸಿದಾಗ ಕಂಡುಬರುವ ಮುಖ್ಯ ಲಕ್ಷಣಗಳೆಂದರೆ

ಹೆಚ್ಚಾಗಿ ದೈವಮೂಲದ ವ್ಯಕ್ತಿನಾಮಗಳು ಇರುವುದು

ತಮಿಳು ಜಾತಿವಾಚಕಗಳು ವ್ಯಕ್ತಿನಾಮಗಳೊಂದಿಗೆ ಬಳಕೆ ಮಾಡುವುದು ಕಂಡುಬರುತ್ತದೆ.

**ದೇವರ ಹೆಸರುಗಳು:**

ವ್ಯಕ್ತಿನಾಮಗಳ ರಚನೆಯಲ್ಲಿ ಸಂಸ್ಕೃತಿ, ಚರಿತ್ರೆಯ ಕೊಡುಗೆ ಹೆಚ್ಚಿದೆ. ಅದರಂತೆ ವ್ಯಕ್ತಿನಾಮಗಳಲ್ಲಿ ಸಾಮಾನ್ಯವಾಗಿ ವ್ಯಕ್ತಿಗಳು ಪೂಜಿಸುವ ಮತ್ತು ವ್ಯಕ್ತಿಗಳು ವಾಸವಾಗಿರುವ ಸ್ಥಳಗಳಲ್ಲಿ ಪ್ರಸಿದ್ಧಿ ಹೊಂದಿರುವ

ದೇವರುಗಳ ಹೆಸರುಗಳನ್ನು ವ್ಯಕ್ತಿನಾಮಗಳಾಗಿ ಬಳಸುವುದನ್ನು ನಾವು ಕಾಣಹಬುದು. ಇದು ಬಹುತೇಕ ಪ್ರದೇಶಗಳಲ್ಲಿ ಸಾಮಾನ್ಯವಾಗಿದೆ. ಜನಸಮಾನ್ಯರ ನಂಬಿಕೆಯಂತೆ ಹೆಸರಿಡುವ ಮಗುವಿಗೆ ಯಾವುದೇ ತೊಂದರೆ ಆಗಬಾರದು ಎಂಬ ಕಾರಣದಿಂದ ದೇವರ ಹೆಸರುಗಳುನ್ನು ಇಡುತ್ತಿದ್ದಾರೆ. ಅದರಂತೆ ತಮಿಳು ಭಾಷಿಕರಲ್ಲೂ ದೇವರ ಹೆಸರುಗಳನ್ನು ವ್ಯಕ್ತಿನಾಮಗಳಾಗಿ ಬಳಕೆ ಮಾಡುತ್ತಿರುವುದು ಕಂಡುಬರುತ್ತದೆ. ತಮಿಳು ಭಾಷಿಕರಲ್ಲಿ ವಿಷ್ಣು ಮತ್ತು ಶಿವನನ್ನು ಆರಾಧಿಸುವವರಿದ್ದಾರೆ. ಆದ್ದರಿಂದ ಈ ಎರಡು ದೈವಗಳಿಗೆಗೆ ಸಂಬಂಧಿಸಿದ ಹೆಸರುಗಳನ್ನು ವ್ಯಕ್ತಿನಾಮಗಳಾಗಿ ಬಳಕೆ ಮಾಡುತ್ತಿದ್ದಾರೆ.

* ಮುರುಗೇಶ್

* ಮುರುಗಪ್ಪ

* ಬಾಲಮುರುಗೇಶ್

ಈ ಮೇಲಿನ ಮೊದಲ ಉದಾಹರಣೆಯಲ್ಲಿ 'ಮುರುಗ' ಎನ್ನುವ ನಿರ್ದಿಷ್ಟವು 'ಈಶ' ಎನ್ನುವ ವಾರ್ಗಿಕವನ್ನು ಸೇರಿ ಮುರುಗೇಶ ಆಗಿದೆ. ಅದೇ ರೀತಿಯಲ್ಲಿ ನಿರ್ದಿಷ್ಟಕ್ಕೆ 'ಅಪ್ಪ' ಸಂಬಂಧ ಸೂಚಿ ಸೇರಿ 'ಮುರುಗಪ್ಪ' ಆಗಿದೆ. ಕೊನೆಯ ಉದಾಹರಣೆಯಲ್ಲಿ 'ಬಾಲ' ಎನ್ನುವ ನಿರ್ದಿಷ್ಟಕ್ಕೆ 'ಮುರುಗ' ಮತ್ತು 'ಈಶ' ವಾರ್ಗಿಕಗಳು ಸೇರಿ ಬಾಲಮುರುಗೇಶ್ ಎಂದು ವ್ಯಕ್ತಿನಾಮವು ರೂಪಗೊಂಡಿವೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಮುರುಗ ಎನ್ನುವುದು ತಮಿಳು ಭಾಷಿಕರು ಪೂಜಿಸುವ ಆರಾಧ್ಯ ದೈವದ ಹೆಸರು. ಅಂದರೆ ಶಿವನ ಮಗನ ಹೆಸರು. ಕೊನೆಯ ಉದಾಹರಣೆಯಲ್ಲಿ 'ಮುರುಗ'ವು ವಾರ್ಗಿಕವಾಗಿ ಬಂದಿದೆ. ಇಲ್ಲಿ ನಿರ್ದಿಷ್ಟವಾಗಿ 'ಬಾಲ' ಅಂದರೆ ವಯಸ್ಸಿನ ಸೂಚಕವಾಗಿ ಬಳಕೆಯಾಗಿರುವುದನ್ನು ಕಾಣಬಹುದು.

* **ವಡಿವೇಲು**=ವಡಿ+ವೇಲು: ಇಲ್ಲಿ 'ವಡಿ'ಎನ್ನುವ ನಿರ್ದಿಷ್ಟವು ಮುರುಗ ದೇವರು ಹಿಡಿದಿರುವ ತ್ರಿಶೂಲ ಆಕರದ ಆಯುಧವನ್ನು ವಡಿ ಎಂದು ಕರೆಯಲಾಗುತ್ತದೆ. ಆಯುಧವನ್ನು ಹೊಂದಿರುವ ಸ್ವಾಮಿಗೆ 'ವಡಿವೇಲು' ಎಂದು ಕರೆಯಲಾಗುತ್ತದೆ. ಈ ವಡಿವೇಲು ರೂಪವನ್ನು ವೇಲುಸ್ವಾಮಿ, ವೈಲುಸ್ವಾಮಿ ಎಂದು ಕರೆಯಲಾಗುತ್ತದೆ.

* ಷಣ್ಮುಗಂ= ಷಟ್+ಮುಖ:

* ಆರ್ಮುಗಂ=ಆರು+ಮುಖ

ಹೆಸರೇ ಸೂಚಿಸುವಂತೆ ಆರು ಮೂಖವನ್ನು ಹೊಂದಿರುವನನ್ನು 'ಷಣ್ಮುಗಂ' ಎಂದು ಕರೆಯಲಾಗುತ್ತದೆ. ಶಿವನ ಮಗನಾದ ಮುರುಗ ಪುರಾಣದಲ್ಲಿ ಹೇಳಿರುವಂತೆ ಜನಿಸಿದ ನಂತರದಲ್ಲಿ ಆರು ಮುಖಗಳನ್ನು ಹೊಂದಿದ್ದನೆಂದು ಐತಿಹ್ಯ ಇದ್ದು, ಆದ್ದರಿಂದ ಮುರುಗನನ್ನು ಷಣ್ಮುಗ, ಆರ್ಮುಗ ಎಂದು ಕರೆಯಲಾಗುತ್ತದೆ. ಐತಿಹ್ಯದಲ್ಲಿ ತಿಳಿಸಿರುವಂತೆ ಮುರುಗುನಿಗೆ ಆರು ತಲೆಗಳನ್ನು ಹೊಂದಿರುತ್ತಾನೆ. ಹಾಗೂ ಆರು ಕಮಲಗಳಲ್ಲಿ ಇವನನ್ನು ಇರಿಸಲಾಗಿರುತ್ತದೆ ಆದ್ದರಿಂದ ಈ ಹೆಸರುಗಳು ಬಳಕೆಯಲ್ಲಿವೆ.

* **ಕಂದಸ್ವಾಮಿ: ಕನ್ದನ್(kantan) ಸ್ಕಂದ ಷಣ್ಮುಖ**

ಈ ವ್ಯಕ್ತಿನಾಮವು ಸಹ ದೇವ ಮೂಲದ ಹೆಸರಾಗಿದ್ದು, ಇದು ಮುರುಗನನ್ನು ಪುರಾಣದಲ್ಲಿ ಕಂದ ಎಂಬ ಹೆಸರಿನಿಂದ ಗುರುತಿಸಲಾಗಿದೆ. ಇವು ಮರುಗನಿಗಿರುವ ಇತರೆ ಹೆಸರುಗಳಾಗಿವೆ.

* **ಪಳನಿಸ್ವಾಮಿ:**

ಪಳನಿ ಎಂಬುದು ಒಂದು ಸ್ಥಳದ ಹೆಸರು. ತಮಿಳುನಾಡಿನ ದಿಂಡುಕ್ಕಲ್ ಜಿಲ್ಲೆಯ ಪಳನಿ ಅಥವಾ ಪಝಾನಾ ಒಂದು ಪುರಸಭೆಯಾಗಿದೆ. ಇಲ್ಲಿ 'ಮುರುಗನ್' ದೇವಸ್ಥಾನವಿದೆ. ಆದ್ದರಿಂದ ಈ ಸ್ಥಳವು ಹೆಚ್ಚು ಪ್ರಸಿದ್ಧಿಯಾಗಿದೆ. ಮುರುಗನ್‌ನನ್ನು ಸ್ಥಳದ ಹೆಸರಿನಿಂದ ಕರೆಯುವುದು ರೂಢಿಯಲ್ಲಿದೆ. ಅದರ ಪರಿಣಾಮವೇ 'ಪಳನಿಸ್ವಾಮಿ' ಎಂದು ವ್ಯಕ್ತಿನಾಮವಾಗಿ ಬಳಕೆಯಲ್ಲಿದೆ. ಈ ವ್ಯಕ್ತಿನಾಮದ ವಿಶೇಷವೆಂದರೆ ಒಂದು ಸ್ಥಳದ ಹೆಸರಾದ 'ಪಳನಿ'ಯು ಪೌರಾಣಿಕ ಮತ್ತು ಧಾರ್ಮಿಕವಾಗಿ ಹೆಸರಾಗಿರುವ ಮುರುಗನ್ ಪ್ರಭಾವವದಿಂದ ವ್ಯಕ್ತಿನಾಮವಾಗಿ ಬದಲಾಗಿ ಬಳಕೆಯಲ್ಲಿರುವುದು ಪ್ರಮುಖವಾಗಿದೆ. ಈ ರೀತಿಯ ಉದಾಹರಣೆಗಳು ಕನ್ನಡದಲ್ಲಿ ದೊರಕುತ್ತವೆ.

* **ಶಿವಸುಬ್ರಮಣಿ**

ಶಿವನ ಮಗನಾದ ಮುರುಗನಿಗೆ 'ಸುಬ್ರಮಣಿ' ಎಂಬ ಹೆಸರು ಬಳಕೆಯಲ್ಲಿದೆ. ಇಲ್ಲಿ 'ಶಿವ' ಮತ್ತು 'ಸುಬ್ರಮಣಿ' ಎಂದು ವಾರ್ಗಿಕ ಮತ್ತು ನಿರ್ದಿಷ್ಟಗಳು ಕೂಡಿ ರಚನೆಯಾಗಿದೆ. ತಮಿಳು ಭಾಷಿಕರಲ್ಲಿ ಮುರುಗ ವ್ಯಕ್ತಿನಾಮವನ್ನು ಬಿಟ್ಟರೆ ಪುರುಷ ವ್ಯಕ್ತಿನಾಮಗಳಲ್ಲಿ ಸುಬ್ರಮಣಿ ಹೆಚ್ಚು ಬಳಕೆಯಲ್ಲಿದೆ. ಈ ಸುಬ್ರಮಣಿ ವ್ಯಕ್ತಿನಾಮವನ್ನು ಸಾಮಾನ್ಯವಾಗಿ

ಸುಬ್ರಹ್ಮಣ್ಯ

ಸುಬ್ರಹ್ಮಣ್ಯಂ

ಸುಬ್ರಹ್ಮಣ್ಯನ್

ಸುಬ್ರಹ್ಮಣ್ಯಸ್ವಾಮಿ

ಬಾಲಸುಬ್ರಹ್ಮಣ್ಯಂ

ಹೀಗೆ ಭಿನ್ನ ಭಿನ್ನ ರೂಪಗಳಲ್ಲಿ ಬಳಕೆ ಮಾಡುತ್ತಾರೆ. ಈ ವ್ಯಕ್ತಿನಾಮವು ಸಾಮಾನ್ಯವಾಗಿ ಎಲ್ಲಾ ಸಾಮಾಜಿಕ ವರ್ಗಗಳಲ್ಲಿ ಬಳಕೆ ಮಾಡುತ್ತಾರೆ.

ತಮಿಳು ಭಾಷಿಕರು ಆಡುಮಾತಿನಲ್ಲಿ ಹೆಚ್ಚಾಗಿ 'ಸುಬ್ರಮಣಿ' 'ಸುಬ್ಬ' ಎಂದು ಬಳಕೆ ಮಾಡುತ್ತಾರೆ.

**ಸ್ತ್ರೀ ದೇವತೆಯ ಹೆಸರುಗಳು:**

ತಮಿಳು ಭಾಷಿಕರ ಸ್ತ್ರೀಯರ ಹೆಸರುಗಳಲ್ಲಿ ಸ್ತ್ರೀ ದೇವರುಗಳ ಹೆಸರುಗಳು ಬಳಕೆಯಲ್ಲಿರುವುದು ಕಾಣಬಹುದು. ಸ್ತ್ರೀಯರ ಹೆಚ್ಚಿನ ಹೆಸರುಗಳು ತಮಿಳು ಭಾಷಿಕರು ಪೂಜಿಸುವ ದೇವರುಗಳ ಹೆಸರುಗಳೇ ಬಳಕೆಯಲ್ಲಿವೆ. ದೇವತೆಗಳ ಹೆಸರುಗಳನ್ನು ಕೇಳಗಿನಂತಿವೆ.

* ಮಾರಿಯಮ್ಮ

* ಕಾಳಿಯಮ್ಮ

* ಮೈಲಮ್ಮ

ಈ ಸ್ತ್ರೀ ದೈವ ನಾಮಗಳು ಸ್ತ್ರೀ ವ್ಯಕ್ತಿನಾಮಗಳಾಗಿ ಬಳಕೆಯಲ್ಲಿವೆ. ಇವುಗಳಲ್ಲಿ ನಿರ್ದಿಷ್ಟ ಮತ್ತು ವಾರ್ಗಿಕಗಳನ್ನು ಗುರುತಿಸಲು ಸಾಧ್ಯವಿದೆ. ವಿಶೇಷವಾಗಿ ಸಂಬಂಧ ಸೂಚಕಗಳು ವ್ಯಕ್ತಿನಾಮಗಳಲ್ಲಿ ಬಂದು ಸೇರಿರುವುದು ಕಾಣಬಹುದು. ಉದಾಹರಣೆಗಳಲ್ಲಿ 'ಮಾರಿ' 'ಕಾಳಿ' 'ಮೈಲ' ಇವುಗಳು ನಿರ್ದಿಷ್ಟವಾಗಿ ಗುರುತಿಸಬಹುದು. ಇದರೊಂದಿಗೆ 'ಅಮ್ಮ' ಎಂಬ ಸಂಬಂಧ ಸೂಚಕವು ಸೇರಿ ಸ್ತ್ರೀ ವ್ಯಕ್ತಿನಾಮಗಳಾಗಿ ರೂಪುಗೊಂಡಿವೆ. ಕನ್ನಡಿಗರು ಮಾರಿಯಮ್ಮನನ್ನು ಮಾರಮ್ಮನೆಂದು, ಕಾಳಿಯಮ್ಮನನ್ನು ಕಾಳಿ-ಕಾಳಮ್ಮ ಎಂದು ಬಳಸುವುದು ನೋಡುತ್ತೇವೆ. ಈ ಮೇಲಿನ ಸ್ತ್ರೀ ವ್ಯಕ್ತಿನಾಮಗಳು ತಮಿಳರು ಪೂಜಿಸುವ ಸ್ತ್ರೀ ದೈವಗಳ ಹೆಸರುಗಳಾಗಿವೆ. ಈ ಹೆಸರುಗಳನ್ನು ಬಹುತೇಕವಾಗಿ ಕೆಳವರ್ಗದ ಹೆಣ್ಣುಮಕ್ಕಳಲ್ಲಿ ಹೆಚ್ಚಾಗಿ ಕಾಣಬಹುದು. ಕಾಳಿ ಮತ್ತು ಮಾರಿ ದೇವತೆಗಳು ಹೆಚ್ಚು ಕೆಳವರ್ಗದ ಮತ್ತು ಸಾಮಾಜಿಕವಾಗಿ ಹಿಂದುಳಿದ ವರ್ಗಗಳ ಆರಾಧ್ಯ ದೈವವಾಗಿರುವುದು ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ಕಂಡುಬಂದಿದೆ.

* ಅಣ್ಣಮ್ಮ:

ಈ ಸ್ತ್ರೀ ವ್ಯಕ್ತಿನಾಮವು ತಮಿಳು ಭಾಷಿಕರಲ್ಲಿ ಬಳಕೆಯಲ್ಲಿರುವುದನ್ನು ನಾವು ಕಾಣಬಹುದು. ದಕ್ಷಿಣ ಕರ್ನಾಟಕದ ಬಹುಭಾಗದಲ್ಲಿ 'ಅಣ್ಣಮ್ಮ' ಎಂಬ ದೇವತೆಯ ಹೆಸರು ಪ್ರಸಿದ್ಧಿಯಲ್ಲಿದೆ. ಅದರಲ್ಲೂ ಬೆಂಗಳೂರಿನ ಮಹಾನಗರದಲ್ಲಿ ಈ 'ಅಣ್ಣಮ್ಮ' ಸ್ತ್ರೀ ದೈವದ ಹೆಸರು ಹೆಚ್ಚು ಪ್ರಸಿದ್ಧಿಯಲ್ಲಿದೆ. ಇದನ್ನು ರಾಚನಿಕ ಹಿನ್ನೆಲೆಯಲ್ಲಿ ವಿವರಿಸಿದರೆ ಅಣ್ಣ ಮತ್ತು ಅಮ್ಮ ಎಂಬ ಎರಡು ಸಂಬಂಧ ಸೂಚಿಗಳಿಂದ ವ್ಯಕ್ತಿನಾಮವಾಗಿ ರೂಪುಗೊಂಡಿದೆ. ಇಲ್ಲಿ ನಿರ್ದಿಷ್ಟ ಮತ್ತು ವಾರ್ಗಿಕವು ಸಂಬಂಧವಾಚಕಗಳಾಗಿರುವುದು ವಿಶೇಷವಾಗಿದೆ. ತಮಿಳರು 'ಅಣ್ಣಮ್ಮ' ಎಂಬ ಹೆಸರಲ್ಲಿ ಸ್ತ್ರೀ ದೇವತೆಯನ್ನು ಆರಾಧಿಸುತ್ತಾರೆ. ತಮಿಳು ಭಾಷಿಕರ ದೈವಿಕ ಕೇಂದ್ರಗಳಲ್ಲಿ ಈ ಸ್ತ್ರೀ ದೇವತೆಯ ಸ್ಥಾನವು ಇರುತ್ತದೆ. ಇವುಗಳನ್ನು ಹೊರತುಪಡಿಸಿದಂತೆ ಭಗವತಿ, ಅಂಗಾಳೇಶ್ವರಿ, ಯಲ್ಲಮ್ಮ, ಮಾರಿಯಮ್ಮ ಎಂಬ ಹೆಸರುಗಳು ಬಳಕೆಯಲ್ಲಿವೆ.

**ಜಾತಿಸೂಚಕಗಳ ಬಳಕೆ:**

ಮಾನವರು ತಮ್ಮ ಕೆಲಸಗಳಲ್ಲಿ ತೊಡಗಿಕೊಂಡು ತಮ್ಮ ಜೀವನ ನಿರ್ವಹಣೆಗಾಗಿ ಕೌಶಲ್ಯಯುತವಾದ ಹಲವು ವೃತ್ತಿಗಳನ್ನು ತಮ್ಮದಾಗಿಸಿಕೊಂಡರು. ನಂತರ ಈ ವೃತ್ತಿಗಳು ನಿಧಾನಗತಿಯಲ್ಲಿ ವ್ಯಕ್ತಿಯ ಹೆಸರಿಗೆ ಸೇರಿಕೊಂಡವು. ಹಾಗೆಯೇ ಜಾತಿವಾಚಕವಾಗಿ ರೂಢಿಗೊಂಡು ಬಳಕೆಯಲ್ಲಿವೆ. ಆದರೆ ಕೆಲವು ವೃತ್ತಿವಾಚಿಗಳು ಸಾಮಾಜಿಕ ಸ್ಥಾನವನ್ನು ಹೊಂದಿರುತ್ತವೆ ಇನ್ನು ಕೆಲವು ವೃತ್ತಿವಾಚಿಗಳು ಸಾಮಾಜಿಕವಾಗಿ ಹೀನವಾಗಿ ಕಾಣುವ ಹಾಗೆ ರೂಪುಗೊಂಡಿರುತ್ತವೆ. ಅಂದರೆ ಕೆಲವು ವೃತ್ತಿವಾಚಿಗಳು ಸಾಮಾಜಿಕವಾಗಿ ಮನ್ನಣೆಗೆ

ಕಾರಣವಾದರೆ, ಕೆಲವು ಸಾಮಾಜಿಕ ಅವಮಾನ, ಶೋಷಣೆಗೆ ಕಾರಣವಾಗಿವೆ. ಕಾರಣ ಕೆಲವು ವೃತ್ತಿಗಳನ್ನು ಕೀಲು, ಅಸಹ್ಯ ಎಂಬ ಭಾವನೆಯಿಂದ ನೋಡುವ ರೂಢಿಯೂ ನಮ್ಮಲ್ಲಿ ಬೆಳೆದುಬಂದಿದೆ. ಈ ಮನೋಭಾವವು ವೃತ್ತಿವಾಚಕಗಳ ಮೇಲೆ ನೇರವಾಗಿ ಪರಿಣಮಿಸುತ್ತದೆ. ಈ ವೃತ್ತಿವಾಚಕಗಳು ವ್ಯಕ್ತಿಯ ಹೆಸರಿನೊಂದಿಗೆ ಸೇರಿದಾಗ ಆ ವ್ಯಕ್ತಿನಾಮಗಳನ್ನು ಸಹ ವೃತ್ತಿಯ ಕಾರಣಕ್ಕೆ ಅಥವಾ ವೃತ್ತಿಯ ಹೆಸರಿನ ಕಾರಣಕ್ಕೆ ಸಾಮಾಜಿಕವಾಗಿ ಹೀನವಾಗಿ ಕಾಣುತ್ತಾರೆ. ಅದರಂತೆ ಸಮಾಜದ ಭಾಗವಾಗಿರುವ ಜಾತಿ ವ್ಯವಸ್ಥೆಯು ಭಾಷೆಯ ಉಪ ಅಂಗಗಳಲ್ಲೂ ಕಂಡುಬರುವುದನ್ನು ಕಾಣಬಹುದು. ತಮಿಳು ಭಾಷಿಕರ ವ್ಯಕ್ತಿನಾಮಗಳಲ್ಲಿ ನಿರ್ದಿಷ್ಟದ ಜೊತೆಯಲ್ಲಿಯೇ ಜಾತಿ ಸೂಚಕ ವಾರ್ಗಿಕಗಳು ಬಳಕೆಯಲ್ಲಿವೆ. ಅವುಗಳಲ್ಲಿ ಹೆಚ್ಚಾಗಿ 'ಗೌಂಡರ್' ಜಾತಿಗೆ ಸೇರಿದವರು ಬಳಕೆ ಮಾಡುತ್ತಾರೆ. ಇನ್ನುಳಿದಂತೆ ಕೆಲವೇ ಜಾತಿ ಸಮುದಾಯಗಳು ಹೆಸರಿನ ಜೊತೆಯಲ್ಲಿ ಜಾತಿ ಸೂಚಕಗಳನ್ನು ಬಳಕೆ ಮಾಡುವುದು ಕಾಣಬಹುದು.

**ಗೌಂಡರ್ ಸಮುದಾಯ:**

ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಕನ್ನಡದಲ್ಲಿ 'ಗೌಡ' ಎಂದು ಜಾತಿವಾಚಕವನ್ನು ಬಳಸುವಂತೆ ತಮಿಳಿನಲ್ಲಿಯೂ 'ಗೌಂಡರ್' ಎಂದು ಸಮಾನವಾಗಿ ಬಳಕೆ ಮಾಡುತ್ತಾರೆ. ತಮಿಳು ಭಾಷಿಕರಲ್ಲಿ ಇದು ಜಾತಿವಾಚಕವಾಗಿದೆ. ಪೂರ್ವದಲ್ಲಿ ಗ್ರಾಮದ ಮುಖಂಡನನ್ನು ಈ ಹೆಸರಿನಿಂದ ಕರೆಯಲಾಗುತ್ತಿತ್ತು. ಆದರೆ ಇಂದು ಇದು ಜಾತಿವಾಚಕವಾಗಿ ಬಳಕೆಯಾಗುತ್ತಿದೆ. ಅಲ್ಲದೆ ಕನ್ನಡಿಗರೊಂದಿಗೆ ಮಾತನಾಡುವಾಗ 'ಗೌಂಡರ್' ಎಂದು ಹೇಳುವುದು ಕಡಿಮೆ, ಸಾಮಾನ್ಯವಾಗಿ ಕನ್ನಡದವರು ಬಳಸುವ ಹಾಗೆ ಗೌಡ ಎಂದು ಬಳಕೆ ಮಾಡುತ್ತಾರೆ.

ಮುತ್ತುಗೌಂಡರ್

ಚಿನ್ನಪ್ಪಗೌಂಡರ್

ಕಾಳಿಯಣ್ಣಗೌಂಡರ್

ತಮಿಳು ಭಾಷಿಕರಲ್ಲಿ ಗೌಂಡರ್ ಎಂಬುದು ಪ್ರಸ್ತುತ ಜಾತಿ ಸೂಚಕವಾಗಿ ಬಳಕೆಯಲ್ಲಿದೆ. ಈ ರೀತಿಯ ಗೌಂಡರ್ ಜಾತಿವಾಚಕವನ್ನು ಮೊದಲ ಮತ್ತು ಎರಡನೇ ತಲೆಮಾರಿನವರಲ್ಲಿ ಮಾತ್ರ ಕಾಣುತ್ತೇವೆ. ಆದರೆ ಮೂರು ಮತ್ತು ನಾಲ್ಕನೇ ತಲೆಮಾರಿನಲ್ಲಿ ಇವುಗಳ ಬಳಕೆ ಕಡಿಮೆ. ಹಾಗೂ ಸರ್ಕಾರಿ ದಾಖಲೆಗಲಲ್ಲಿ ಇವುಗಳ ಬಳಕೆಯು ಇರುವುದಿಲ್ಲ. ಆದರೆ ಆಡುಮಾತಿನಲ್ಲಿ ಹೆಸರಿನೊಂದಿಗೆ ಗೌಂಡರ್ .ಎಂದು ಬಳಕೆ ಮಾಡುತ್ತಾರೆ. ಈ ಜಾತಿವಾಚಕವು ಪುರುಷರಿಗಷ್ಟೆ ಬಳಕೆ ಮಾಡುತ್ತಿರುವುದು ಕ್ಷೇತ್ರಕಾರ್ಯದಿಂದ ಕಂಡುಕೊಂಡಿದೆ.

**ತೇವರ್:**

ಅಯ್ಯತ್ತೇವರ್

ಅಂಗಣ್ಣತ್ತೇವರ್

ಗಣಪತಿತ್ತೇವಾರ್

ಮುತ್ತು ರಾಮಲಿಂಗಂ ತೇವಾರ್

ತಮಿಳುನಾಡಿನ ಮಧುರೈ, ಥೇಣಿ, ದಿಂಡುಕಲ್, ಶಿವಗಂಗೈ, ಪುಕೋಟ್ಟಾಯ್, ರಾಮನಾಥಪುರಂ, ತಂಜಾವೂರು, ನಾಗಪಟ್ಟಣಂ ಇತರೆಡೆಗಳಿಂದ ವಲಸೆ ಬಂದಿರುವ ಈ ಸಮುದಾಯವು ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಕೃಷಿ ಕೆಲಸವನ್ನು ಮಾಡಿಕೊಂಡು ಜೀವನವನ್ನು ಕಟ್ಟಿಕೊಂಡಿದ್ದಾರೆ. ತಮಿಳು ನಾಡಿನಲ್ಲಿ ಈ ಜಾತಿಯ ಇತಿಹಾಸವನ್ನು ಚೋಳ ರಾಜರುಗಳು ಇತಿಹಾಸದಿಂದಲೂ ಗುರುತಿಸುತ್ತಾರೆ. 'ತೆವರ್ (ಸಂಸ್ಕೃತದ ದೇವಾರ್ ಎಂಬ ಶಬ್ದದಿಂದ ಪಡೆದ ಪದ) ದೇವರ ಅರ್ಥ ಆರಂಭಿಕ ದಿನಗಳಲ್ಲಿ 'ಕಿಂಗ್ಸ್' ಅನ್ನು ದೇವರು ಎಂದು ಚಿತ್ರಿಸಲಾಗಿದೆ ಮತ್ತು ದೇವಾರ್ ಎಂದು ಕರೆಯುತ್ತಾರೆ. ನಂತರ ಮೂವೆಂಡರ್ಸ್ ವಂಶಸ್ಥರು 'thears' ಎಂದು ಕರೆಯಲಾಗುತ್ತಿತ್ತು. ದೇವಾರ್ ಜಾತಿ ಹೆಸರು ಅಲ್ಲ, ಅದು ತಮಿಳುನಾಡಿನಲ್ಲಿ ಪ್ರಬಲವಾದ ಜಾತಿಯಾದ ಥೇವರ್ ಎಂದು ಕರೆಯಲ್ಪಡುವ ಮುಕುಲಥಾರರ ಉಪನಾಮವಾಗಿದೆ. ಮುಕುಲಥೋರ್ ಮೂರು ತಳಿಗಳನ್ನು (ಕಲ್ಲರ್, ಮರವವರ್ ಮತ್ತು ಅಗಮುದಯಾರ್) ಅರ್ಥೈಸುತ್ತಾರೆ. ಇವುಗಳನ್ನು ಥೇವರ್ ಅಥವಾ ದೇವಾರ್ ಎಂದು ಕರೆಯಲಾಗುತ್ತದೆ'.(https://translate.google.com/translate?hl=kn&sl=ta&u=https://thevarhistory.webs.com/&prev=search) ಹೀಗೆ ತಮಿಳರ ವ್ಯಕ್ತಿನಾಮಗಳಲ್ಲಿ ತೇವಾರ್ ಜಾತಿ ವಾಚಕವು ಬಳಕೆಯಲ್ಲಿದೆ.

**ಮೊದಲಿಯಾರ್**

ಶಿವಸ್ವಾಮಿ ಮೊದಲಿಯಾರ್

ಕುಪ್ಪುಸ್ವಾಮಿ ಮೊದಲಿಯಾರ್

ರಾಮಸ್ವಾಮಿ ಮೊದಲಿಯಾರ್

ಕೃಷ್ಣ ಮೊದಲಿಯಾರ್

ಕರ್ನಾಟಕದ ತಮಿಳರಲ್ಲಿ ಬಳಕೆಯಲ್ಲಿರುವಂತೆ 'ಮೊದಲಿಯಾರ್' ಜಾತಿ ವಾಚಕವಾಗಿದೆ. ಇದನ್ನು ತಮಿಳು ಭಾಷಿಕರಲ್ಲಿ ಮಾತ್ರ ಕಾಣಬರುತ್ತದೆ. ಈ ಜಾತಿಯವರು ಹಿರಿಯೂರು ನಗರ, ಆದಿವಲ, ಹೊಸಪೇಟೆ, ಕಮಲಾಪುರ ಪ್ರದೇಶಗಳಲ್ಲಿ ಹೆಚ್ಚಾಗಿದ್ದಾರೆ. ಇವರುಗಳು ಪ್ರಸ್ತುತ ಕೃಷಿ ಕೆಲಸ ಮತ್ತು ಕೂಲಿ ಕೆಲಸಗಳಲ್ಲಿ ತೊಡಗಿಸೊಂಡಿರುವು ಕಾಣಬಹುದು. ಈ ಜಾತಿವಾಚಕವನ್ನು ವ್ಯಕ್ತಿನಾಮಗಳ ಜೊತೆಯಲ್ಲಿಯೇ ಬಳಕೆ ಮಾಡುತ್ತಾರೆ.

ಮೊದಲಿಯಾರ್ ಕುರಿತಂತೆ "...ತನಗೆ ಒಳ್ಳೆಯ ಸಮಯದಲ್ಲಿ ಸಹಾಯಮಾಡಿ ತನ್ನ ರಾಜ್ಯಭಾರವನ್ನು ಸ್ಥಿರಗೊಳಿಸಿದುದಕ್ಕಾಗಿ ದೊರೆಯು ವೆಳ್ಳಾಳರ ವಿಷಯದಲ್ಲಿ ಬಹಳ ಗೌರವನ್ನಿಟ್ಟಿದ್ದನು. ಆದುದರಿಂದ

ಆತನು ಅವರಿಗೆ "ಮೊದಲಿಗರು" ಎಂದರೆ ಮೊದಲನೆಯವರು ಎಂಬ ಅರ್ಥವುಳ್ಳ "ಮೊದಲರ್" ಎಂಬ ಹೆಸರನ್ನು ಕೊಟ್ಟನು. ಈಗಿನ ಮುದಲಿಯಾರ್ ಎಂಬ ರೂಪವು ಈ ಮುದಲರ್ ಎಂಬ ಪದದ ಅಪಭ್ರಂಶವು. ಇಂಗ್ಲಿಷ್ ಭಾಷೆಯಲ್ಲಿ ಅದನ್ನು ಬರೆಯುವ ಕ್ರಮವು ಭ್ರಮೆಯನ್ನುಂಟುಮಾಡುವುದಲ್ಲದೆ, ಅನೇಕ ರೂಪಾಂತರಗಳಿಂದ ಬಂದಿರುವುದಾಗಿಯೂ ಇರುವುದು. ಆದರೆ ಈ ಪದದ ಸರಿಯಾದ ಅರ್ಥವು ತಿಳಿದಿದ್ದಪಕ್ಷದಲ್ಲಿ ಇಂತಹ ಯಾವ ತಪ್ಪೂ ಉಂಟಾಗಲಾರದು. 'ಮುದಲರ್' ಎಂದರೆ ಮೊದಲನೆಯ ವರ್ಗದ ಜನರು ಎಂಬ ಅರ್ಥವು ಈಗಲೂ ಶುದ್ಧವಾದ ತಮಿಳು ಪ್ರಚಾರದಲ್ಲಿರುವ ಸಿಂಹಳದ್ವೀಪದ ಜಾಫ್ನಾದಲ್ಲಿಯೂ ಅದರ ನೆರೆಹೊರೆಯ ಪ್ರಾಂತಗಳಲ್ಲಿಯೂ ಪ್ರಯೋಗದಲ್ಲಿರುವುದು. ಒಂದು ಗುಂಪಿನ ಪ್ರಮುಖನಿಗೂ, ಒಂದು ಸಂಸ್ಥೆಯ ಮುಖ್ಯಸ್ಥನಿಗೂ, ಒಂದು ಕಚೇರಿಯ ಮುಖ್ಯಾಧಿಕಾರಿಗೂ 'ಮುದಲರ್' ಎಂಬ ಈ ಹೆಸರೇ ಜಾತಿಸಂಬಂಧವಾಗದ ಯಾವ ಅರ್ಥವೂ ಇಲ್ಲದೆ, ಅನ್ವಯಿಸುವುದು. ಮುದಲರ್ ಎಂದರೆ ಮೊದಲನೆಯ ಮನುಷ್ಯ ಅಥವಾ ಮೊದಲಿಗ ಎಂದು ಮಾತ್ರ ಅರ್ಥವಾಗುವುದು. ಇವರಿಗಿಂತಲೂ ಶ್ರೇಷ್ಠರಾದ ಪುರುಷರೆಂದು ತಿಳಿಯಬೇಕಾದರೆ "ಮಹಾಮುದಲರ್" ಎಂದು ಉಪಯೋಗಿಸುವರು. ಇದೇ ಸಂದರ್ಭದಲ್ಲಿಯೇ ಶ್ರೀವೈಷ್ಣವರ ಮತಗ್ರಂಥಗಳಲ್ಲಿ "ಮುದಲರ್" ಎಂದು ಸಬ್ದವು ಕಂಡುಬರುವುದೆಂದೂ ತಿಳಿಸಬಹುದಾಗಿದೆ. ಕೆಲವರು ಪುರಾಣಪುರುಷರ ಹೆಸರುಗಳ ಮುಂದೆಯೂ ಇದು ಕಂಡುಬರುವುದು. ಉದಾಹರಣೆಗಾಗಿ, ಗೃಧ್ರ ರಾಜನಾದ ಜಟಾಯುವಿಗೆ "ವಿಹಗಮುದಲರ್" ಎಂದೂ, ವಾನರಾಧಿಪತಿಯಾದ ಸುಗ್ರೀವನಿಗೆ "ವಾನರ ಮುದಲರ್" ಎಂದೂ ಹೆಸರುಗಳಿರುವ ವಿಷಯವನ್ನು ಸೂಚಿಸಬಹುದು."(ರಾಮಚಂದ್ರಮುದಲಿಯಾರ್ ಡಿ. ಬಿ., ಮುದಲಿಯಾರ್ ಪಂಗಡದ ಚರಿತ್ರೆ, ಪುಟ.1922) ಹೀಗೆ ಮೊದಲಿಯಾರ್ ಸಮುದಾಯದ ಚರಿತ್ರೆಯ ಕುರಿತು ತಿಳಿಸುತ್ತಾರೆ. ಇವರು ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಕೃಷಿ ಕೆಲಸವನ್ನು ಮಾಡಿಕೊಂಡಿದ್ದಾರೆ.

**ಹಿರಿಯರ ಹೆಸರುಗಳನ್ನು ಬಳಕೆ ಮಾಡುವುದು.**

ತಮ್ಮ ಕುಟುಂಬದ ಹಿರಿಯರನ್ನು ಮರೆಯದ ಹಾಗೆ ಇರಲು ಅಥವಾ ಅವರ ಗುರುತಿಗಾಗಿ ಮನೆಯ ಮಕ್ಕಳಿಗೆ ಮೊಮ್ಮಕ್ಕಳಿಗೆ ಕುಟುಂಬದ ಹಿರಿಯರ ಹೆಸರುಗಳನ್ನು ಇಡುತ್ತಾರೆ. ವ್ಯಕ್ತಿನಾಮಗಳನ್ನು ತಲೆಮಾರುಗಳಿಂದ ತಲೆಮಾರಿಗೆ ಬಳಕೆ ಮಾಡುತ್ತಿರುವ ಕುರಿತು ಇರುವ ಸಾಮಾನ್ಯ ನಂಬಿಕೆಯಂತೆ ಇದು ಸಹ ಒಂದು. ಅದೇ ರೀತಿಯಲ್ಲಿ ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿನ ತಮಿಳು ಭಾಷಿಕರು ತಮ್ಮ ಮನೆಯ ಹಿರಿಯ ಸದಸ್ಯರ ಹೆಸರುಗಳನ್ನು ಮಕ್ಕಳಿಗೆ ಮರುನಾಮಕರಣ ಮಾಡುವ ಪದ್ಧತಿ ಇದೆ. ಹೀಗೆ ಈ ಹೆಸರುಗಳನ್ನಿಡುವ ಮೂಲಕ ತಮಿಳು ಭಾಷಿಕರು ತಮ್ಮ ಮೂಲದ ಹಲವು ಹೆಸರುಗಳನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ಆದರೆ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೆಂದರೆ ಈ ರೀತಿಯ ಹಿರಿಯ ಸದಸ್ಯರ ಹೆಸರುಗಳನ್ನು ನಾಮಕರಣ ಮಾಡಿದ ನಂತರದಲ್ಲಿ ತಮ್ಮ ಮಕ್ಕಳು ಸಾಮಾಜಿಕವಾಗಿ ಕನ್ನಡಿಗರ ಪರಿಸರದಲ್ಲಿ ಪಾಲ್ಗೊಳ್ಳುವುದರಿಂದ ಅವರ ಹೆಸರುಗಳನ್ನು ಕೆಲವರು ಬದಲಿಸುವುದು ರೂಢಿಯಲ್ಲಿದೆ. ಅಂದರೆ ತಮಿಳು ಹೆಸರುಗಳು ಹೆಚ್ಚಾಗಿ ಕನ್ನಡದ ಪರಿಸರದಲ್ಲಿ ಬಳಕೆಯಲ್ಲಿ ಇಲ್ಲದ

ಕಾರಣ ಮತ್ತು ಕನ್ನಡ ಪರಿಸರಕ್ಕೆ ಭಿನ್ನರೀತಿಯಲ್ಲಿ ಹೆಸರುಗಳು ಇರುವ ಕಾರಣ ಅವುಗಳನ್ನು ಬದಲಿಸಿ ಮತ್ತೊಂದು ಆಧುನಿಕ ಪರಿಸರದಲ್ಲಿ ಬಳಕೆಯಲ್ಲಿರುವ ಹೆಸರನ್ನು ಬಳಕೆ ಮಾಡುವುದು ಕಂಡುಬಂದಿದೆ.

ಸಾಮಾನ್ಯವಾಗಿ ಹಿರಿಯರ ಹೆಸರುಗಳಲ್ಲಿ ಈ ಕೆಳಗಿನ ಹೆಸರುಗಳು ಹೆಚ್ಚು ಬಳಕೆಯಲ್ಲಿರುವುದು ಕಾಣಬಹದು.

ಮರುಗೇಶ್

ಮುತ್ತು

ಕೃಷ್ಣನ್

ಪೆರಿಯಾರ್

ಪೆರಿಯಾರ್ ರಾಮಸ್ವಾಮಿ

ಕುತ್ತಪ್ಪ ಸ್ವಾಮಿ

ಮಣಿ

ಆರ್ಮುಗಂ

ಕಂದಸ್ವಾಮಿ

ಪಳನಿ

ವೆಳ್ಳಿಯಮ್ಮ

ಪೆರಿಯಸ್ವಾಮಿ

ಕಾಳಿಯಪ್ಪ

ಚೆಂದಿಲ್

ಷಣ್ಮುಗಮ್

ತಂಗವೇಲು

ಮನಿವಾಸಗನ್

ಹೀಗೆ ಹಲವು ಹೆಸರುಗಳು ತಮ್ಮ ಹಿರಿಯರ ನೆನಪಿಗಾಗಿ ಮತ್ತು ಅವರ ಗೌರವಾರ್ಥವಾಗಿ ಹೆಸರುಗಳನ್ನು ಮಕ್ಕಳಿಗೆ ನಾಮಕರಣ ಮಾಡಿ ಬಳಕೆ ಮಾಡುತ್ತಾರೆ. ಈ ರೀತಿಯಾಗಿ ಬಳಕೆ ಮಾಡುವುದರಿಂದ ಅವರು ತಮ್ಮ ಪರಿಸರದ ಹಾಗೂ ಸಂಸ್ಕೃತಿಯ ಹೆಸರುಗಳನ್ನು ಇಂದಿಗೂ ಬಳಕೆ ಮಾಡುತ್ತಿದ್ದಾರೆ. ಈ ರೀತಿಯಾಗಿ ತಮಿಳರು ಸಂಸ್ಕೃತಿ ಮತ್ತು ಇತಿಹಾಸವನ್ನು ಹಿರಿಯರ ಹೆಸರುಗಳನ್ನಿಡುವ ಮೂಲಕ ಉಳಿಕೊಂಡು ಬಂದಿದಾರೆ.

ತಮಿಳು ಭಾಷಿಕರು ತಮ್ಮ ಹಿರಿಯರ, ದೇವರ ಹೆಸರುಗಳನ್ನು ಮಕ್ಕಳಿಗೆ ಹೆಸರಿಡುವುದನ್ನು ಕಾಣಬಹುದು. ಆದರೆ ಈ ಹೆಸರುಗಳು ಕನ್ನಡದ ಪರಿಸರದ ಹೆಸರುಗಳಿಗಿಂತ ಭಿನ್ನವಾಗಿರುವ ಕಾರಣ ಅವುಗಳನ್ನು ಮೂರು ಮತ್ತು ನಾಲ್ಕುನೇ ತಲೆಮಾರಿನ ಮಕ್ಕಳಿಗೆ ಆಧುನಿಕ ಅಥವಾ ಕನ್ನಡದ ಹೆಸರುಗಳನ್ನು ಮರುನಾಮಕರಣ ಮಾಡುತ್ತಾರೆ. ಕೆಲವು ಕುಟುಂಬಗಳ ಮಾಹಿತಿಯಂತೆ ದೇವರ ಹೆಸರುಗಳು ಮತ್ತು ಹಿರಿಯರ ಹೆಸರುಗಳನ್ನು ಮಕ್ಕಳಿಗೆ ಇಡುತ್ತೇವೆ. ಆದರೆ ಅವು ಇಂದಿನ ಹೊಸ ಹೆಸರುಗಳಂತೆ ಇರುವುದಿಲ್ಲ. ಆದ್ದರಿಂದ ಮೊದಲು ಮೂಲದ ಹೆಸರುಗಳನ್ನು ಕರೆದು ನಂತರ ಬೇರೆ ಹೆಸರುಗಳನ್ನು ಇಡುತ್ತೇವೆ ಎಂದು ತಿಳಿಸುತ್ತಾರೆ. ಮಕ್ಕಳನ್ನು ಸಂಬೋಧಿಸುವಾಗ ಮತ್ತು ಅವರನ್ನು ಗುರುತಿಸುವಾಗ ಎರಡನೇ ಹೆಸರಿನಿಂದ ಬಳಕೆ ಮಾಡುತ್ತಾರೆ. ಮೊದಲ ಹೆಸರು ಕೇವಲ ನಂಬಿಕೆ ಮತ್ತು ಆಚರಣೆಯ ಹಂತದಲ್ಲಿ ಮಾತ್ರ ಇದೆ.

| **ಮೊದಲ ಹೆಸರು** | **ಎರಡನೇ ಹೆಸರು** |
|---|---|
| ಅಣಿಮಾ | ಅಂಕಿತ |
| ಆಂಡಾಳಮ್ಮ | ತನುಶ್ರೀ |
| ಮರದಾಚಲ | ಮನೋಜ್ ಕೆ |
| ಮುನಿಸ್ವಾಮಿ | ಮುನೇಶ್ |
| ಸಗದೇವನ್ | ಸೃಜನ್ |

**ಸಂಬೋಧನಾ ರೂಪಗಳು ವ್ಯಕ್ತಿನಾಮಗಳಲ್ಲಿ ಬಳಕೆ**

ವ್ಯಕ್ತಿನಾಮಗಳಲ್ಲಿ ನಿರ್ದಿಷ್ಟ ಮತ್ತು ವಾರ್ಗಿಕ ಎಂದು ವಿಭಾಗಿಸಿ ಅದರ ಸ್ವರೂಪವನ್ನು ವಿವರಿಸುತ್ತೇವೆ. ಈ ರೀತಿಯ ವಾರ್ಗಿಕಗಳ ರಚನೆಯಲ್ಲಿ ಸಾಮಾನ್ಯವಾಗಿ ಸಂಬೋಧನಾ ರೂಪಗಳು ಅಪ್ಪ, ಅಣ್ಣ, ಅಮ್ಮ ಎಂಬ ರೂಪಗಳು ಬಳಕೆಯಲ್ಲಿರುವುದು ಕಾಣುತ್ತೆವೆ. ಹೀಗೆ ಈ ಸಂಬೋಧನಾ ರೂಪಗಳು ವ್ಯಕ್ತಿಯ ಹೆಸರಿನೊಂದಿಗೆ ಮೊದಲು ಗೌರವಾರ್ಥಕವಾಗಿ ಬಳಕೆಯಲ್ಲಿದ್ದು, ನಂತರದ ತಲೆಮಾರಿನವರು ವ್ಯಕ್ತಿಯ ಹೆಸರಿಗೆ ಜೋಡಿಸಿಕೊಂಡು ಬಳಕೆ ಮಾಡುತ್ತಾರೆ. ಹೀಗೆ ಬಳಕೆ ಮುಂದುವರೆದು ವ್ಯಕ್ತಿನಾಮದಲ್ಲಿ ಸಂಬಂಧವಾಚಕವು ಸೇರಿ ಹೋಗುತ್ತದೆ.

ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರ ವ್ಯಕ್ತಿನಾಮಗಳಲ್ಲಿ ಬಳಕೆಯಲ್ಲಿರುವ ಸಂಬೋಧನಾ ರೂಪಗಳು

**ಅಪ್ಪ**

ಜಡೆಯಪ್ಪ

ಇರುಳಪ್ಪ

ಮುತ್ತಪ್ಪ

ಪಳನಿಯಪ್ಪ

ಕಾಳಿಯಪ್ಪ

ಅಮ್ಮಯಪ್ಪ

ಮಹಲಿಂಗಪ್ಪ

ಮುರುಗಪ್ಪ

ರಾಜಪ್ಪ

ಲಕ್ಷಣಪ್ಪ

**ಅಮ್ಮ**

ವೆಳ್ಳಿಯಮ್ಮ

ನವಿಲಮ್ಮ

ಮೈಲಮ್ಮ

ಈಶ್ವರಿಯಮ್ಮ

ಕಾಳಿಯಮ್ಮ

ನಾಯಿಗಮ್ಮ

ಸರಸಮ್ಮ

**ಅಣ್ಣ**

ಅಂಗಣ್ಣ

ಹೀಗೆ ತಮಿಳು ಭಾಷಿಕರು ತಮ್ಮ ಹೆಸರುಗಳೊಂದಿಗೆ ಸಂಬೋಧನಾ ರೂಪಗಳನ್ನು ಬಳಕೆ ಮಾಡುವುದು ಕಾಣಬಹುದು. ಇವುಗಳಲ್ಲಿ ಹೆಚ್ಚಾಗಿ ಅಪ್ಪ, ಅಮ್ಮ ಸಂಬೋಧನಾ ರೂಪಗಳು ಕೂಡಿರುವ ವ್ಯಕ್ತಿನಾಮಗಳ ಬಳಕೆ ಇದೆ. ಇವುಗಳನ್ನು ಹೊರೆತಾಗಿ ಕನ್ನಡದಲ್ಲಿ ಕಂಡುಬರುವಂತೆ ಅವ್ವ, ಅಯ್ಯ ಇತರೆ ಸಂಬೋಧನಾ ರೂಪಗಳು ಬಳಕೆ ಕಂಡುಬರುವುದಿಲ್ಲ.

**ತಮಿಳು ಭಾಷಿಕರ ವ್ಯಕ್ತಿನಾಮಗಳಲ್ಲಿ 'ಅನ್' ಪ್ರತ್ಯೇಯ ಬಳಕೆ**

ದ್ರಾವಿಡ ಭಾಷೆಗಳಲ್ಲಿ ಪ್ರಾಚೀನ ಬಳಕೆಯನ್ನು ಗಮನಿಸಿದಾಗ 'ಅನ್' ರೂಪವು ಬಳಕೆಯಾಗಿರುವುದನ್ನು ಗಮನಿಸಿಬಹುದು. ಹಲ್ಮಿಡಿ ಶಾಸನದ ಕೆಲವೆಡೆಯಲ್ಲಿ ಈ ರೀತಿಯಾಗಿ ಬಳಕೆಯಾಗಿದೆ. 'ಕದಂಬಪನ್,

ಸಂಪನ್ನನ್, ಭರಿತೋನ್, ಅಧಿನಾತನ್, ಕುಲದೋನ್(ಶ್ರೀವತ್ಸ ಎಸ್. ಟಿ., ಹಲ್ಮಿಡಿ ಶಾಸನ, ಪುಟ.೪೨-೪೩) ಹೀಗೆ ಬಳಕೆ ಮಾಡಿರುವುದು ಕಾಣಬಹುದು. ಈ 'ಅನ್' ಪ್ರತ್ಯೇಯವು ಪ್ರಾಚೀನ ತಮಿಳು ಭಾಷೆಯಲ್ಲಿ ವ್ಯಕ್ತಿನಾಮಗಳ ಬಳಕೆಯಲ್ಲಿದೆ.

ನಾಮಪ್ರಕೃತಿಗಳಲ್ಲಿ 'ಆನ್' ಬಳಕೆಯ ಕುರಿತು ಈ ರೀತಿಯಾಗಿ ವಿವರಿಸಲಾಗಿದೆ.

ಆಳನ್-ಆಯ್-ನೀನು ಪುರುಷ

ಕಣ್ಣನ್-ಅನ್-ಕಣ್ಣನ್ ಎಂಬ ಹೆಸರಿನ ವ್ಯಕ್ತಿ(ಶಿವಾನಂದ ವ್ಹಿ. ತೌಲನಿಕ ದ್ರಾವಿಡ ಭಾಷಾ ವಿಜ್ಞಾನ, ಪುಟ.೧೧೭)

ಹೀಗೆ ವಿವರಿಸುತ್ತಾರೆ. ಇವುಗಳೊಂದಿಗೆ ಗುಣವಚನದಲ್ಲಿ ಸರ್ವನಾಮಗಳಲ್ಲಿ ಹೇಗೆ ಬಳಕೆಯಾಗುತ್ತದೆ ಎಂಬುದನ್ನು ತಿಳಿಸಿದ್ದಾರೆ. ವ್ಯಕ್ತಿನಾಮಗಳಲ್ಲಿ 'ನ್' ಪತ್ಯೆಯವು ಗೌರವಾರ್ಥವಾಗಿ ಬಳಕೆಯಾಗುತ್ತದೆ. ಅಂದರೆ ಉದಾಹರಣೆಗೆ 'ರಾಮನ್' ಎಂದರೆ ರಾಮನು ಎಂದರ್ಥದಲ್ಲಿ ಬಳಕೆಯಾಗುತ್ತದೆ. ಈ ರೀತಿಯ ವ್ಯಕ್ತಿನಾಮಗಳ ಬಳಕೆಯು ಹೆಚ್ಚಾಗಿರುವುದು ಕಂಡುಬರುತ್ತದೆ.

ಉದಾ:

ಪೂಬಾಲನ್

ಸ್ವಾಮಿನಾಥನ್

ಸತ್ಯಶೀಲನ್

ನಟರಾಜನ್

ಮನಿವಾಸಗನ್

ದಾಮೋಧರನ್

ಮುರುಗನ್

ಸುಂದರನ್

ಲಕ್ಷ್ಮಣನ್

ರಂಗರಾಜನ್

ಈಶ್ವರನ್

ಹೀಗೆ ಬೇರೆ ಬೇರೆ ಸಮುದಾಯಗಳಲ್ಲಿ ಈ ರೀತಿಯ ವ್ಯಕ್ತಿನಾಮಗಳು ಬಳಕೆಯಲ್ಲಿವೆ. ಆದರೆ 'ಅನ್' ಪ್ರತ್ಯೆಯವು ದ್ರಾವಿಡ ಭಾಷೆಗಳಲ್ಲಿ 'ಅವನ್' ರೂಪದ ಉಳಿದ ರೂಪವಾಗಿದೆ. ಇದು ವ್ಯಕ್ತಿನಾಮದ ಜೊತೆ

ಸೇರಿ ಅನ್ ಪ್ರತ್ಯೇಯವಾಗಿ ಬಳಕೆಯಾಗುತ್ತಿದೆ. ಇದು ಪುರುಷ ವಾಚಕವಾಗಿರುವುದರಿಂದ ಪುರುಷ ವ್ಯಕ್ತಿನಾಮಗಳಲ್ಲಿ ಬಳಕೆಯಲ್ಲಿದೆ. ಸ್ತ್ರೀಯರ ಹೆಸರುಗಳಲ್ಲಿ ಕಂಡುಬರುವುದಿಲ್ಲ. ಕೇವಲ ಪುರುಷರ ಹೆಸರಿನಲ್ಲಿ ಮಾತ್ರ ಬಳಕೆಯಲ್ಲಿದೆ. ಭಾಷಾದ್ವೀಪಗಳಲ್ಲಿ ವಾಸಿಸುವ ನಾಲ್ಕನೇ ತಲೆಮಾರಿನ ಮಕ್ಕಳಲ್ಲಿ ಈ ರೀತಿಯ ಹೆಸರುಗಳ ಬಳಕೆಯು ಕಡಿಮೆಯಾಗಿದ್ದು, ಕೆಲವೇ ಕೆಲವು ಮಕ್ಕಳ ಹೆಸರುಗಳಲ್ಲಿ ಮಾತ್ರ ಬಳಕೆಯಲ್ಲಿದೆ.

**ತಲೆಮಾರಿನಿಂದ ತಲೆಮಾರಿಗೆ ತಮಿಳು ಭಾಷಿಕರ ವ್ಯಕ್ತಿನಾಮಗಳು ಬದಲಾವಣೆ**

ಕನ್ನಡದ ಭಾಷಿಕ ಪರಿಸರದ ಮಧ್ಯದಲ್ಲಿ ವಾಸವಾಗಿರುವ ತಮಿಳು ಭಾಷಿಕರು ಕನ್ನಡದ ಸಾಮಾಜಿಕ ಮತ್ತು ಸಾಂಸ್ಕೃತಿಕ ಒತ್ತಡಕ್ಕೆ ತಕ್ಕಂತೆ ತಮ್ಮ ವ್ಯಕ್ತಿನಾಮಗಳನ್ನು ಬದಲಾವಣೆ ಮಾಡಿಕೊಳ್ಳುತ್ತಿರುವುದು ಕಾಣಬಹುದು. ಅಂದರೆ ಸ್ವಾತಂತ್ರ್ಯ ಪೂರ್ವದಲ್ಲಿ ವಲಸೆ ಬಂದು ನೆಲೆಸಿದ್ದ ತಮಿಳು ಭಾಷಿಕರ ಹೆಸರುಗಳು ಬಹುತೇಕ ಈ ಹಿಂದ ತಿಳಿಸಿದ ಹೆಸರುಗಳಿಂದ ಕೂಡಿದ್ದವು. ಆದರೆ ಮೂರು ಮತ್ತು ನಾಲ್ಕನೇ ತಲೆಮಾರಿನ ಮಕ್ಕಳಲ್ಲಿ ಮುರುಗ, ಸುಬ್ರಮಣಿ, ಸೆಲ್ವಿ ಈ ರೀತಿಯ ಹೆಸರುಗಳ ಬಳಕೆಯು ಕಡಿಮೆಯಾಗಿದೆ. ಇವುಗಳನ್ನು ಕೆಲವು ಕುಟುಂಬಗಳ ಹಿನ್ನೆಲೆಯಲ್ಲಿ ಗಮನಿಸಬಹುದು.

ಬೇರೆ ಬೇರೆ ಜಾತಿಯ ಪ್ರಾತಿನಿಧಿಕ ಕುಟುಂಬಳ ವ್ಯಕ್ತಿನಾಮಗಳನ್ನು ತಲೆಮಾರುಗಳಲ್ಲಿ ಬದಲಾಗಿರುವುದನ್ನು ಕೆಳಗಿನಂತೆ ಗಮನಿಸಬಹುದು.

**ಗೌಡ ಜಾತಿಯ ಕುಟುಂಬ**



**ಆದಿದ್ರಾವಿಡ ಕುಟುಂಬ:**

(ತಲೆಮಾರು–೧)ಕೃಷ್ಣಪ್ಪ(ಗಂಡ)–ಕಮಲಮ್ಮ(ಹೆಂಡತಿ)

ತಲೆಮಾರು–೨

- ಶಾರದಮ್ಮ(ಮಗಳು)
  - ಕೃಷ್ಣಪ್ಪ(ಅಳಿಯ)
    - ಸುಮತಿ
    - ರಾಮು
    - ಲಕ್ಷ್ಮಿ
    - ದುರ್ಗಿ
    - ಶೇಖರ್
    - ಮಾರಿ
- ಮಾರಿಯಮ್ಮ(ಮಗಳು)
  - ಮುನಿಸ್ವಾಮಿ(ಅಳಿಯ)
    - ಗುಣಶೇಖರನ್
    - ರಾಸತ್ತಿ
    - ವಿನೋದ
- ನಾರಾಯಣ(ಮಗ)
  - ಸರಿತಾ(ಸೊಸೆ)
    - (ತಲೆಮಾರು–೩)
    - ಅರುಣ್
    - ದಿವ್ಯ
    - ಅರವಿಂದ
- ಆರುಮುಗ(ಮಗ)
  - ಲಕ್ಷಿ
- ಉಮ(ಮಗಳು)–ಸೈಪುಲ್ಲ(ಅಳಿಯ)
  - ಸಲ್ಮ
  - ಶಮಿಲ್
  - ಸೈಯದ್
- ಲಕ್ಷ್ಮಿ(ಮಗಳು)–ಮಾಯಂಡಿ(ಅಳಿಯ)
  - ಅಂಜಿನಿ
  - ರಂಜಿತ

(ತಲೆಮಾರು–೩)

**ವಡ್ಡಾರ್ ಕುಟುಂಬ**

(ತಲೆಮಾರು–೧)ಗೋಪಾಲ(ಗಂಡ)–ಚಿನ್ನತಾಯಿ(ಹೆಂಡತಿ)–ಮುನಿಯಮ್ಮ(೨ನೆ ಹೆಂಡತಿ)

(ತಲೆಮಾರು–೨)

ಮುನಿಯಮ್ಮ(ಮಗ)–ಎಣ್ಣಮಲ್ಲೈ(ಸೊಸೆ) ತ್ಯಾಗರಾಜ(ಮಗ)–ಮಲ್ಲಿಕಮ್ಮ(ಸೊಸೆ)

ಗುಬೇಂದ್ರ ಗೀತ

ದೇವಯಾನಿ ಸರಿತಾ

(ತಲೆಮಾರು–೨)

ಮಣಿ(ಮಗ)–ಮಂಜುಳ(ಸೊಸೆ) ಸಗದೇವನ್(ಮಗ)–ಸ್ಟೆಲ್(ಸೊಸೆ) ಅಣಕ್ಲಿ(ಮಗಳು)–

(ತಲೆಮಾರು–೩) ಮುನಿಸ್ವಾಮಿ(ಅಳಿಯ)

ಶಂಕರ್ ದಿಲಿಪನ್

ನಾಗವೇಣಿ ಮಾರ್ಟಿನ್ ಆಂಟೋನಿ ಅಮುದು

ದೇವಿ

ಮೇಲಿನ ಮೂರು ಕುಟುಂಬಗಳ ವ್ಯಕ್ತಿನಾಮಗಳನ್ನು ತಲೆಮಾರುಗಳಲ್ಲಿ ಗಮನಿಸಿದಾಗ ಮೊದಲ ತಲೆಮಾರಿನ ಹೆಸರುಗಳು ಕೃಷ್ಣಗೌಂಡ, ಪೆರುಂಬಾಯಿ, ಕೃಷ್ಣಪ್ಪ, ಗೋಪಾಲ ಚಿನ್ನತಾಯಿ, ಮುನಿಯಮ್ಮ ಹೀಗೆ ಹೆಸರುಗಳಿರುವುದು ಕಾಣುತ್ತೇವೆ. ಆದರೆ ಎರಡನೆ ತಲೆಮಾರಿನಲ್ಲಿ ಈ ರೀತಿಯ ಹೆಸರುಗಳು ಆಣಿಮಾ, ಸೇಟ್, ಮುನಿಸ್ವಾಮಿ, ಮಾರಿಯಮ್ಮ, ಆರುಮುಗ, ಮಾಯಂಡಿ, ಮುನಿಯಮ್ಮ, ಎಣ್ಣಮಲ್ಲೈ, ಮಲ್ಲಿಕಮ್ಮ, ಮಣಿ, ಸಗದೇವನ್, ಅಣಕ್ಲಿ ಎಂಬ ಹೆಸರುಗಳು ಬಳಕೆಯಲ್ಲಿವೆ. ಆದರೆ ಮೂರು ಮತ್ತು ನಾಲ್ಕನೇ ತಲೆಮಾರಿನಲ್ಲಿ ಈ ರೀತಿಯ ಹೆಸರುಗಳ ಬಳಕೆಯು ಕಡಿಮೆಯಾಗಿದ್ದು, ಅವುಗಳ ಸ್ವರೂಪ ಬದಲಾಗಿದೆ. ಕನ್ನಡದಲ್ಲಿ ಹೆಸರುಗಳನ್ನು ಬಳಕೆ ಮಾಡುವಂತೆಯೇ ಬಳಕೆ ಮಾಡುತ್ತಿದ್ದಾರೆ. ಮೂರು ಮತ್ತು ನಾಲ್ಕನೇ ತಲೆಮಾರಿನಲ್ಲಿ ಮಯಾಂಕ, ವಿಶ್ವನಾಥ, ಮನೋಜ, ಅಜಯ, ಋಷಿ, ಸುಮತಿ, ರಾಮು, ಲಕ್ಷ್ಮಿ, ದುರ್ಗಿ, ಶೇಖರ್, ವಿನೋದ, ಅರುಣ್, ದಿವ್ಯ, ಅರವಿಂದ ಅಂಜಿನಿ, ರಂಜಿತ, ಶಂಕರ್, ನಾಗವೇಣಿ, ದೇವಿ ಹೀಗೆ ಕನ್ನಡದಲ್ಲಿ ಬಳಸುವಂತೆಯೇ ಹೆಸರುಗಳನ್ನು ಬಳಕೆ ಮಾಡುತ್ತಿರುವುದು ಕಾಣಬಹುದು. ಈ ರೀತಿಯ ವ್ಯಕ್ತಿನಾಮಗಳ ಬದಲಾವಣೆಗೆ ಕಾರಣಗಳಾಗಿ ಸಾಮಾಜಿಕ ಒತ್ತಡ ಮತ್ತು ಬೇರೊಂದು ಭಾಷಿಕ ಪರಿಸರದಲ್ಲಿ ಭಾಗವಹಿಸುವುದು ಕಂಡುಬರುತ್ತದೆ. ಕೆಲವು ಹೆಸರುಗಳು ಕನ್ನಡದ ಪರಿಸರಕ್ಕಿಂತಲೂ ಭಿನ್ನವಾಗಿರುವ ಕಾರಣಕ್ಕೆ ಅವರನ್ನು ಕೆಲವು ಸಂದರ್ಭಗಳಲ್ಲಿ ಬೇಗನೆ ತಮಿಳು ಭಾಷಿಕರು ಎಂದು ಗುರುತಿಸುತ್ತಾರೆ. ಕನ್ನಡದ ಪರಿಸರದಲ್ಲಿ ವಾಸಿಸುವುದರಿಂದ ಈ ಪರಿಸರದ ಪ್ರಭಾವದಿಂದಾಗಿ ತಮಿಳು ಭಾಷಿಕರ ಮೂರು ಮತ್ತು ನಾಲ್ಕನೇ ತಲೆಮಾರಿನವರ ಹೆರಿನಲ್ಲಿ ಬದಲಾವಣೆಯಾಗಿರುವುದನ್ನು ಕಾಣಬಹುದು.

ಮೂರು ಮತ್ತು ನಾಲ್ಕನೇ ತಲೆಮಾರಿನ ಹೆರುಗಳು ಆಧುನಿಕ ಹೆಸರುಗಳಾಗಿ ರೂಢಿಯಾಗಿದ್ದರೂ, ತಮಿಳು ಭಾಷಿಕರ ನಂಬಿಕೆ ಮತ್ತು ಆಚರಣೆಗಳಂತೆ ಮಕ್ಕಳಿಗೆ ಮೊದಲು ತಮ್ಮ ಮನೆ ದೇವರ ಹೆಸರನ್ನು ಅಥವಾ ಹಿರಿಯರ ಹೆಸರನ್ನು ಕರೆಯುತ್ತಾರೆ. ನಂತರ ಮತ್ತೊಂದು ಆಯ್ಕೆಯ ಹೆಸರನ್ನು ಕರೆಯುತ್ತಾರೆ. ಹೀಗೆ ವ್ಯಕ್ತಿನಾಮಗಳು ಬಾಹ್ಯ ಪರಿಸರಕ್ಕೆ ಹೊಸದಾಗಿ ಕಂಡುಬಂದರೂ, ಆಚರಣೆ ಮತ್ತು ಸಂಪ್ರಾಯಗಳಿಂದ ಹಳೆಯ ಹೆಸರುಗಳನ್ನೇ ಮೊದಲು ಕರೆಯುತ್ತಾರೆ.

**ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಕಂಡುಬರುವ ತಮಿಳು ಭಾಷಿಕರ ವ್ಯಕ್ತಿನಾಮಗಳ ಪಟ್ಟಿ**

| **ಪುರುಷರ ಹೆಸರು** | **ಸ್ತ್ರೀಯ ಹೆಸರುಗಳು** |
|---|---|
| ಅಂಗಣ್ಣ | ಅಂಜಳಮ್ಮ |
| ಅಂಗರಾಜು | ಅಣಕ್ಕಿ |
| ಅನ್ಬು ಸೆಲ್ವಿ | ಇಂದ್ರಾಣಿ |
| ಅಮಣಲಿಂಗ | ಈಶ್ವರಿಯಮ್ಮ |
| ಅಮ್ಮಯಪ್ಪ | ಕಾಳಿಯಮ್ಮ |
| ಅಯ್ಯತ್ತೇವರ್ | ಕುಪ್ಪಮ್ಮ |
| ಆರುಮುಗಂ(ಮ್) | ಚಿನ್ನತಾಯಿ |
| ಆರುಸ್ವಾಮಿ | ಚಿ(ಸಿ)ನ್ನಮ್ಮ |
| ಇರುಳಪ್ಪ | ತಮಿಳ್‌ಸೆಲ್ವಿ |
| ಈಶ್ವರ | ದವಸೆಲ್ವಿ |
| ಈಶ್ವರನ್ | ನದಿಯಾ |
| ಈಶ್ವರ ಮೂರ್ತಿ | ನವಿಲಮ್ಮ |
| ಉಮಾಶಂಕರ್ | ನಾಗಮ್ಮ |
| ಎಲೆಮುತ್ತಪ್ಪ | ನಾಯಿಗಮ್ಮ |
| ಕಂದಸ್ವಾಮಿ | ಪಂಜವರ್ಣಮ್ |
| ಕದಿರವೇಲು | ಪಡವಟ್ಟಮ್ಮ |
| ಕನಕರಾಜ್ | ಪರಮೇಶ್ವರಿ |
| ಕರ್ಪ್ಪೂಸ್ವಾಮಿ | ಪಾಪಮ್ಮ |

ಕುಪ್ಪುಸ್ವಾಮಿ
ಕಾಳಿಯಪ್ಪ
ಕಾಳಿಯಣ್ಣ
ಕುಪ್ಪನ್
ಕುಪ್ಪುಸ್ವಾಮಿ
ಕೃಷ್ಣಮಣಿ
ಕೃಷ್ಣಸ್ವಾಮಿ
ಕೊಳಂದುವೇಲು
ಗಣೇಶ
ಗಣೇಶನ್
ಗಣಪತಿ
ಗೋವಿಂದರಾಜ್
ಚಿನ್ನಪ್ಪ
ಚಿನ್ನತಂಬಿ
ಚಿನ್ನರಾಜ್
ಚಿನ್ನರಾಜು
ಚಿನ್ನಸ್ವಾಮಿ
ತಂಗವೇಲು
ತಂಬಿದೊರೆ
ದಯಾನಂದ
ದಾಮೋದರನ್
ದೊರೆಸ್ವಾಮಿ
ನಟರಾಜ
ನಟರಾಜನ್

ಮಂಜಮ್ಮ
ಮಂಜುಳಮ್ಮ
ಮಲ್ಲಿಕಮ್ಮ
ಮಾರಿಯಮ್ಮ
ಮುನಿಯಮ್ಮ
ಮೈಲಮ್ಮ
ರಾಜಮ್ಮ
ರಾಜಮ್ಮ
ರಾಮಲಕ್ಷ್ಮಿ
ರಾಮಾಯಮ್ಮ
ವೆಳ್ಳಿಮ್ಮ
ವೆಳ್ಳಿಯಮ್ಮ
ವೇಡಿಯಮ್ಮ
ಸೆಲ್ವಿ
ಸೆಲ್ವಿರಾಣಿ
ಶಾ(ಸಾ)ಂತಿ
ಶ್ರೀದೇವಿ
ಸರಸಮ್ಮ
ಸುಗುಣ

ನವಿಲುಸ್ವಾಮಿ

ನಾಚಿಮುತ್ತು

ಪರಮಶಿವಂ

ಪರಿಮಳಸ್ವಾಮಿ

ಪಳನಿ

ಪಳ್ನಿ

ಪಳನಿಯಪ್ಪ

ಪಳನಿಸ್ವಾಮಿ

ಪುಂಗಾರಿ

ಪೆರಿಸ್ವಾಮಿ

ಪೆರಿಯಸ್ವಾಮಿ

ಪೆರಿರಾಜ್ ಎಂ. ಪಿ.

ಬಾಲಮಣಿ

ಬಾಲಮುರುಗೇಶ

ಬಾಲಸುಬ್ರಮಣಿ

ಬಾಲು

ಮಣಿಕಂಠ

ಮಣಿಕಂಠನ್

ಮರಗದ

ಮಾಣಿಕ್ಯವಾಸಗಂ

ಮುಣುಸ್ವಾಮಿ

ಮುತ್ತು ಕುಮಾರ್

ಮುನಿಸ್ವಾಮಿ

ಮಾನಿವಾಸಗನ್

ಮುನೇಶ್ವರ

ಮುರುಗ

ಮುರುಗನ್

ಮುರುಗಪ್ಪ

ಮುರುಗೇಶ್

ರಾಜವಡಿವೇಲು

ರಾಮಸ್ವಾಮಿ

ಲಾರೆನ್ಸ್

ಲೋಗನಾಥನ್

ವಡಿವೇಲು

ವಡಿವೇಲುಸ್ವಾಮಿ

ವಯ್ಯಪುರಿ

ವರದರಾಯಪ್ಪ

ವೀರಭದ್ರನ್

ವೆಂಕಟೇಶ

ವೆಂಕಟೇಶ(ಸ)ನ್

ವೇರುಮಲನಾಯಕ

ವೇಲು

ವೇಲುಸ್ವಾಮಿ

ವೈಲುಸ್ವಾಮಿ

ಶಿವಸುಬ್ರಮಣಿ

ಷಣ್ಮುಖ

ಷಣ್ಮುಗಂ

ಷಣ್ಮುಗವಡಿವೇಲು

ಸರವಣಕುಮಾರ್

ಸ್ವಾಮಿನಾಥನ್.

ಸುಂದರನ್

ಸುಬ್ರಹ್ಮಣಿ

ಸುಬ್ರಹ್ಮಣಿಮ್

ಸುಬ್ರಹ್ಮಣಿಯನ್

ಸೆಲ್ವಿ ಕುಮಾರ್

ಈ ರೀತಿಯಾಗಿ ಕನ್ನಡಿಗರ ವ್ಯಕ್ತಿನಾಗಳಿಗಿಂತಲೂ ಭಿನ್ನವಾಗಿರುವ ತಮಿಳು ಭಾಷಿಕರ ವ್ಯಕ್ತಿನಾಮಗಳನ್ನು ಗುರುತಿಸಬಹುದು. ಇವುಗಳು ಮೊದಲನೆ ಮತ್ತು ಎರಡನೆ ತಲೆಮಾರಿನ ವ್ಯಕ್ತಿಗಳ ಹೆಸರುಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಮೂರು ಮತ್ತು ನಾಲ್ಕನೇ ತಲೆಮಾರಿನ ವ್ಯಕ್ತಿಗಳಲ್ಲಿ ಈ ಹೆಸರುಗಳು ಕಂಡುಬಂದರು ಅವುಗಳ ಬಳಕೆ ಕಡಿಮೆ ಪ್ರಮಾಣದಲ್ಲಿದೆ. ಅವುಗಳನ್ನು ಖಾಸಗಿ ಆವರಣದಲ್ಲಿ, ಮನೆಯ ಆವರಣದಲ್ಲಿ ಮಾತ್ರ ಬಳಿಕ ಮಾಡುತ್ತಾರೆ. ಇನ್ನು ಸಾಮಾಜಿಕ ಆವರಣದಲ್ಲಿ ಅಥವಾ ಕನ್ನಡ ಪರಿಸರದಲ್ಲಿ ಸಾಮಾನ್ಯವಾಗಿ ಆಧುನಿಕ ಹೆಸರುಗಳನ್ನು ಅಥವಾ ಕನ್ನಡದ ಪರಿಸರಕ್ಕೆ ಹೊಂದಿಕೊಳ್ಳುವಂತಹ ಹೆಸರುಗಳನ್ನು ರೂಢಿಸಿಕೊಂಡು ಬಳಸುತ್ತಾರೆ.

ಈ ವ್ಯಕ್ತಿನಾಮಗಳ ಬಳಕೆಯನ್ನು ಎರಡು ರೀತಿಯಲ್ಲಿ ನೋಡಬಹುದು. ಒಂದು ಕನ್ನಡದ ಭಾಷಿಕರು ತಮಿಳು ಭಾಷಿಕರ ಹೆಸರುಗಳನ್ನು ಹೇಗೆ ಬಳಕೆ ಮಾಡುತ್ತಾರೆ ಎಂದು. ಎರಡನೆಯದು ತಮಿಳು ಭಾಷಿಕರು ಕನ್ನಡ ಹೆಸರುಗಳನ್ನು ಹೇಗೆ ಬಳಕೆ ಮಾಡುತ್ತಾರೆ ಎಂದು. ಹೀಗೆ ಭಾಷಾ ಬಳಕೆಯ ಹಿನ್ನೆಲೆಯಲ್ಲಿ ವ್ಯಕ್ತಿನಾಮಗಳ ಬಳಕೆಯನ್ನು ಗಮನಿಸಿದಾಗ ತಮಿಳು ಭಾಷಿಕರು ಕನ್ನಡದ ಹೆಸರುಗಳನ್ನು ತಮಿಳು ಧ್ವನಿಗಳನ್ನು ಬಳಕೆ ಮಾಡಿಕೊಂಡು ಬಳಸುತ್ತಾರೆ. 'ಣ', 'ಳ' ಧ್ವನಿಗಳನ್ನು ಮೂರ್ಧನ್ಯ ಧ್ವನಿಗಳ ಬಳಕೆ ಮಾಡುತ್ತಾರೆ. ಶ, ಚ ಧ್ವನಿಗಳ ಬಳಕೆಯಲ್ಲಿಯೂ ವ್ಯತ್ಯಾಸ ಉಂಟುಮಾಡುತ್ತಾರೆ. ಉದಾಹರಣೆಗೆ ಶಂಕರ>ಸಂಕರ ಇದು ತಮಿಳು ಭಾಷೆಯಲ್ಲಿರುವ ರಚನೆಯ ಮತ್ತು ತಮಿಳು ಭಾಷೆಯ ಧ್ವನಿಗಳ ಬಳಕೆಯಲ್ಲಿ ವ್ಯತ್ಯಾಸವು ಕಾರಣವಾಗಿದೆ. ಇನ್ನು ಕನ್ನಡ ಭಾಷಿಕರು ತಮಿಳು ಭಾಷಿಕರ ಹೆಸರುಗಳನ್ನು ಸಂಕ್ಷಿಪ್ತಗೊಳಿಸಿ ಬಳಕೆ ಮಾಡುವುದು ಹೆಚ್ಚು. ಉದಾ: ಪಳನಿ–ಪಳ್ನಿ, ಸುಬ್ರಮಣಿ–ಸುಬ್ಬ ಅಥವಾ ಮಣಿ, ಮಣಿಕಂಠ–ಮಣಿ ಎಂದು ಸಂಕ್ಷಿಪ್ತಗೊಳಿಸಿ ಬಳಕೆ ಮಾಡುತ್ತಾರೆ.

ಒಟ್ಟಾರೆಯಾಗಿ ತಮಿಳು ಭಾಷಿಕರ ವ್ಯಕ್ತಿನಾಮಗಳು ಕನ್ನಡದ ಪರಿಸರದಲ್ಲಿ ವ್ಯಕ್ತಿನಾಮಗಳ ರಚನೆಯಿಂದ ವಿಶಿಷ್ಟವಲ್ಲದಿದ್ದರೂ, ಕನ್ನಡದ ವ್ಯಕ್ತಿನಾಮಗಳಿಗೆ ಹೋಲಿಸಿದರೆ ವಿಶಿಷ್ಟವಾಗಿ ಕಾಣುತ್ತವೆ. ಅಂದರೆ ತಮಿಳು ಭಾಷೆಯ ವಾರ್ಗಿಕ ಮತ್ತು ನಿರ್ದಿಷ್ಟಗಳ ಬಳಕೆಯಿಂದ ಇವುಗಳು ತಮಿಳು ಭಾಷೆಯ ವ್ಯಕ್ತಿನಾಮಗಳು ಎಂದು ಕಂಡುಕೊಳ್ಳಬಹುದು. ಕನ್ನಡ ಪರಿಸರ ಕೆಲವು ಸಂದರ್ಭಗಳಲ್ಲಿ ಕೆಲವು ಹೆಸರುಗಳನ್ನು ಕೇಳಿದಾಕ್ಷಣ ಇವರು ತಮಿಳು ಭಾಷಿಕರು ಎಂದು ಕಂಡುಕೊಳ್ಳುತ್ತಾರೆ. ಹೀಗೆ ತಮಿಳು ಭಾಷಿಕರ ಹೆಸರುಗಳು ಕನ್ನಡದಲ್ಲಿ ಅವರ ಅನನ್ಯತೆಯನ್ನು ಮತ್ತು ಸಂಸ್ಕೃತಿಯನ್ನು ಗುರುತಿಸಲು ಸಹಾಯಕವಾಗಿವೆ. ಇನ್ನು ಕೆಲವು ತಮಿಳು ಭಾಷಿಕರ ಹೆಸರುಗಳು ಕನ್ನಡದಲ್ಲಿ ಅಡ್ಡ ಹೆಸರುಗಳಾಗಿ ಬಳಕೆಯಾಗುತ್ತವೆ. ಇನ್ನು ಕೆಲವು ಸಂದರ್ಭಗಳಲ್ಲಿ ಕನ್ನಡ ಭಾಷಿಕರು ತಮಿಳು ಭಾಷಿಕರೊಂದಿಗೆ ಸಾಮಾಜಿಕವಾಗಿ ಆರ್ಥಿಕವಾಗಿ ಹೊಂದಿಕೊಂಡಿದ್ದರೆ ಅವರುಗಳನ್ನು ತಮಿಳು ಭಾಷಿಕರ ವ್ಯಕ್ತಿನಾಮಗಳಿಂದಲೇ ಕರೆಯುವುದು ರೂಢಿಯಲ್ಲಿದೆ. ಸಾಮಾನ್ಯವಾಗಿ ಆ ರೀತಿಯ ಹೆಸರುಗಳು 'ಅಣ್ಣಚ್ಚಿ', 'ತಂಬಿ', 'ಕರ್ಪ್ಪ' ಎಂದು ಇವೆ.

**೬.೩. ಸಂಖ್ಯಾವಾಚಕಗಳು**

ಸಂಖ್ಯಾವಾಚಕಗಳು ಭಾಷೆಯಲ್ಲಿನ ಉಪಾಂಗಳಲ್ಲಿ ಒಂದು. ಅಂದರೆ ಒಂದು ಭಾಷೆಯ ವಿವರಣಾತ್ಮಕ ಮತ್ತು ವಿಶ್ಲೇಷಣಾತ್ಮಕ ಅಧ್ಯಯನ ಮಾಡುವಾಗ ಸಂಖ್ಯಾವಾಚಕಗಳನ್ನು ಅಧ್ಯಯನದ ಪರಿಧಿಗೆ ತಂದು ವಿವರಿಸಿರುವುದು ಕಾಣಬಹುದು. ಅಂದರೆ ಭಾಷೆಯಲ್ಲಿಯ ಸಂಖ್ಯಾವಾಚಕಗಳು ಎರವಲು ಪಡೆದವುಗಳೋ ಅಥವಾ ಭಾಷೆಯಲ್ಲಿಯೇ ಸ್ವತಃ ರಚಿವಾಗಿರುವ ಘಟಕಗಳೇ ಎಂಬುದನ್ನು ಕಂಡುಕೊಳ್ಳಲು ಸಹಾಯಕವಾಗುತ್ತದೆ. ಅಂದರೆ ಇದರಿಂದ ಭಾಷೆಯ ಬಗೆಗೆ ಇರುವ ಪ್ರಾಚೀನ ಕಾಲವನ್ನು ಅಥವಾ ಇತಿಹಾಸವನ್ನು ಕಂಡುಕೊಳ್ಳಬಹುದು. ಅದೇ ರೀತಿಯಲ್ಲಿ ಪ್ರಸ್ತುತ ಸಂಖ್ಯಾವಾಚಕಗಳ ಬಳಕೆಯಲ್ಲಾಗಿರುವ ಪರಿಣಾಮಗಳು ಮತ್ತು ಬದಲಾವಣೆಗಳನ್ನು ಕಂಡುಕೊಳ್ಳಬಹುದು. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ತಮಿಳು ಭಾಷೆಯಲ್ಲಿನ ಸಂಖ್ಯಾವಾಚಕಗಳನ್ನು ಅಧ್ಯಯನಕ್ಕೆ ಒಳಪಡಿಸುತ್ತಿರುವ ಉದ್ದೇಶವೆಂದರೆ ಕನ್ನಡದ ಪರಿಸರದಲ್ಲಿ ವಾಸಿಸುತ್ತಿರುವ ತಮಿಳು ಭಾಷಿಕರು ತಮ್ಮ ಭಾಷೆಯಲ್ಲಿ ಉಪಾಂಗಳಾದ ಸಂಖ್ಯಾವಾಚಕಗಳನ್ನು ಹೇಗೆ ಉಳಿಸಿಕೊಂಡಿದ್ದಾರೆ. ಅವುಗಳ ಬಳಕೆಯಲ್ಲಿನ ವ್ಯತ್ಯಾಸಗಳನ್ನು ಗುರುತಿಸುವುದಾಗಿದೆ. ಅಲ್ಲದೇ ತಮ್ಮ ಮೂಲ ಭಾಷೆಯಂತೆಯೇ ಸಂಖ್ಯಾವಾಚಕಗಳನ್ನು ಉಳಿಸಿಕೊಂಡಿದ್ದಾರ? ಭಾಷಾದ್ವೀಪಗಳಲ್ಲಿ ವಾಸವಾಗಿರುವ ನಾಲ್ಕನೇ ತಲೆಮಾರಿನ ಮಕ್ಕಳು ತಮಿಳು ಸಂಖ್ಯಾವಾಚಕಗಳನ್ನು ಹೇಗೆ ಬಳಕೆ ಮಾಡುತ್ತಾರೆ ಎಂಬುದನ್ನು ಇಲ್ಲಿ ಕಂಡುಕೊಂಡಿದೆ.

ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರು ತಮ್ಮ ನಿತ್ಯ ಜೀವನದಲ್ಲಿ ಒಂದಲ್ಲಾ ಒಂದು ಕಾರಣಕ್ಕೆ ಸಂಖ್ಯಾವಾಚಕಗಳನ್ನು ಬಳಕೆ ಮಾಡುತ್ತಾರೆ. ಈ ರೀತಿಯ ಸಂಖ್ಯಾವಚಕಗಳನ್ನು ಬಳಕೆ ಮಾಡುವಾಗ ಒತ್ತಡಗಳೇನು? ಮತ್ತು ಬಳಕೆಯ ಸ್ವರೂಪವೇನು ಎಂಬುದು ಇಲ್ಲಿ ಕಂಡುಕೊಳ್ಳಬಹುದು.

| ಕನ್ನಡ | ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ಬಳಕೆಯ ತಮಿಳು ಸಂಖ್ಯಾವಾಚಕಗಳು |
|---|---|
| ಒಂದು | ಒನ್ |
| ಎರಡು | ರಂಡು |
| ಮೂರು | ಮೂಣ್ |
| ನಾಲ್ಕು | ನಾಲ್ |
| ಐದು | ಅಂಜಿ |
| ಆರು | ಆರ್ |
| ಏಳು | ಏಳ್ |
| ಎಂಟು | ಎಟ್ಟು |
| ಒಂಬತ್ತು | ಒಂಬದು(ಒನ್ಬದು) |
| ಹತ್ತು | ಪತ್ತು |
| ಹನ್ನೊಂದು | ಪದನೊಂದು |
| ಹನ್ನೆರಡು | ಪದಿನೆಂಡು |
| ಹದಿಮೂರು | ಪದಿಮೂನ್ |
| ಹದಿನಾಲ್ಕು | ಪನ್ನಾಲ್ |
| ಹದಿನೈದು | ಪದಿನೆಂಜಿ |
| ಹದಿನಾರು | ಪದ್ನಾರು |
| ಹದಿನೇಳು | ಪದಿನೇಳು |
| ಹದಿನೆಂಟು | ಪದಿನೆಂಟ್ಟು |
| ಹತ್ತೊಂಬತ್ತು | ಪತ್ತೊಂಬದು(ಪತ್ತೊನ್ಬದು) |
| ಇಪ್ಪತ್ತು | ಇರುವದಿ |
| ಇಪ್ಪತ್ತೈದು | ಇರವತ್ತಂಜಿ |
| ಮೂವತ್ತು | ಮುಪ್ಪದು |

| | |
|---|---|
| ಮೂವತ್ತೈದು | ಮುಪ್ಪತ್ತಂಜಿ |
| ನಲವತ್ತು | ನಾಪದು |
| ನಲವತ್ತೈದು | ನಾಪತ್ತಂಜಿ |
| ಐವತ್ತು | ಅಂಭದು |
| ಐವತ್ತೈದು | ಅಂಭತಂಜಿ |
| ಅರವತ್ತು | ಅರವದು |
| ಅರವತ್ತೈದು | ಅರವತ್ತಂಜಿ |
| ಎಪ್ಪತ್ತು | ಎಳವದು |
| ಎಪ್ಪತ್ತೈದು | ಎಳವತ್ತಂಜಿ |
| ಎಂಭತ್ತು | ಎಂಬದು |
| ಎಂಭತ್ತೈದು | ಎಂಬದಂಜಿ |
| ತೊಂಬತ್ತು | ತೊನ್ನೂರು |
| ತೊಂಬತ್ತೈದು | ತೊನ್ನುತಂಜಿ |
| ನೂರು | ನೂರು |
| ಒಂದು ನೂರು | ನೂರ ಒನ್ |
| ಎರಡು ನೂರು | ನೂತ್ತಿ ರಂಡು |
| ಮೂರು ನೂರು | ನೂತ್ತಿ ಮೂಣ್ |
| ನಾಲ್ಕು ನೂರು | ನೂತ್ತಿ ನಾಲ್ |
| ಐದು ನೂರು | ನೂತ್ತಿ ಅಂಜಿ |
| ಆರು ನೂರು | ನೂತ್ತಿ ಆರ್ |
| ಏಳು ನೂರು | ನೂತ್ತಿ ಏಳ್ |
| ಎಂಟು ನೂರು | ನೂತ್ತಿ ಎಂಟ್ಟ |
| ಒಂಬೈನೂರು | ನೂತ್ತಿ ಒಂಬದು(ಒನ್ಬದು) |
| ಒಂದು ಸಾವಿರ | ನೂತ್ತಿ ಅಯ್ಯೃಮ್ |

| | |
|---|---|
| ಐದು ಸಾವಿರ | ಅಂಜ ಆಯ್ಯಿರಮ್ |
| ಹತ್ತು ಸಾವಿರ | ಪತ್ತ ಅಯ್ಯಿರಮ್ |
| ಐವತ್ತು ಸಾವಿರ | ಅಂಭದ ಆಯ್ಯಿರಮ್ |
| ಒಂದು ಲಕ್ಷ | ಒರ್ ಲಕ್ಷಮ್/ಲಕ್ಷಂ |

ಭಾಷಾದ್ವೀಪಗಳಲ್ಲಿರುವ ತಮಿಳು ಭಾಷಿಕರು ಬಳಕೆ ಮಾಡುತ್ತಿರುವ ತಮಿಳು ಭಾಷೆಯ ಸಂಖ್ಯಾವಾಚಕಗಳು ದ್ರಾವಿಡ ಭಾಷೆಯ ಸಂಖ್ಯಾವಾಚಕಗಳನ್ನು ಹಾಗೆಯೇ ಉಳಿಸಿಕೊಂಡಿವೆ. ಅಂದರೆ ಸಂಖ್ಯಾವಾಚಕಗಳು 'ದ್ರಾವಿಡದಲ್ಲಿ ೧ ರಿಂದ ೮ ಸಂಖ್ಯೆಯವರೆಗೆ ಸ್ವತಂತ್ರ ನಾಮಪ್ರಕೃತಿಗಳನ್ನು ಹೊಂದಿವೆ. ೯ ರಿಂದ ೧೦ರ ಸಂಖ್ಯೆಗಳು ಸಂಯುಕ್ತ ಪದಗಳಾಗಿವೆ. ಆದುದರಿಂದ ಪೂರ್ವ ದ್ರಾವಿಡ ಸಂಖ್ಯಾ ವ್ಯವಸ್ಥೆ ಅಷ್ಟಮಾಂಕ ಪದ್ಧತಿಯನ್ನು ಅನುಸರಿಸಿದ್ದು, ದಶಮಾಂಶ ಪದ್ಧತಿ ಅನಂತರದ ಬೆಳವಣಿಗೆಯಾಗಿ ತೋರುತ್ತದೆ' ಎಂದು ಎಂ. ಬಿ. ಎಮಿನೋ ಅವರು ಹೇಳುತ್ತಾರೆ.

'ದ್ರಾವಿಡ ಸಂಖ್ಯಾವಾಚಿಗಳನ್ನು ಮಾನವಿಕ ಮತ್ತು ಮಾನವೇತರ ಎಂದು ಎರಡು ವಿಧವಾಗಿ ವರ್ಗೀಕರಿಸಬಹುದು. ಮಾನವಿಕಗಳಿಗೆ ಲಿಂಗ-ವಚನಾನುಗತವಾಗಿ ಅವಕ್ಕೆ ನಾಮ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಲು ಸಾಧ್ಯ. ಇದನ್ನು ೧ ರಿಂದ ೫ರವರೆಗೆ ಮಾತ್ರ ಪ್ರಯೋಗಿಸಬಹುದು. ಮುಂದಿನ ಸಂಖ್ಯೆಗಳಿಗೆ 'ಮಂದಿ' ಅಥವಾ 'ಜನ' ಸೇರಿದಾಗ ಅವು ವರ್ಗ ಸೂಚಕವಾಗುತ್ತವೆ. ಮಾನವೇತರಗಳು ಹೆಚ್ಚಾಗಿ ವಿಶೇಷಣಗಳಂತೆ ಕಾರ್ಯನಿರ್ವಹಿಸುತ್ತವೆ'(ಶಿವಾನಂದ ವ್ಹಿ., ತಾಲನಿಕ ದ್ರಾವಿಡ ಭಾಷಾ ವಿಜ್ಞಾನ, ಪುಟ.೧೧೦)

ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರು ಸಂಖ್ಯಾವಾಚಿಗಳನ್ನು ತಮ್ಮ ವ್ಯಾವಹಾರಿಕ ಸಂದರ್ಭಗಳಲ್ಲಿ ಬಳಕೆ ಮಾಡುವುದನ್ನು ಕಾಣಬಹುದು. ತಮಿಳು ತಮಿಳು ಭಾಷಿಕರು ಮಾತನಾಡುವಾಗ ಈ ತಮಿಳು ಸಂಖ್ಯಾವಾಚಿಗಳ ಬಳಕೆಯು ಹೆಚ್ಚಿರುತ್ತದೆ. ತಮಿಳು ಭಾಷಿಕರು ತಮಿಳು ಭಾಷೆ ಕಲಿತಿರುವ ಕನ್ನಡಿಗರೊಂದಿಗೆ ಬಳಸುತ್ತಾರೆ. ಕೆಲವು ಕನ್ನಡದ ಪರಿಸರದಲ್ಲಿ ವ್ಯಾವಹರಿಸುವಾಗ ತಮಿಳು ಸಂಖ್ಯಾವಾಚಕಗಳು ಬಳಕೆ ಮಾಡುತ್ತಾರೆ.

ಉದಾ: **ಮೂಣ್** ಟೀ ಕೊಡು.

**ನಾಲ್** ಲೀಟರ್ **ಪಾಲ್** ಕೊಡು.

ಮೇಲಿನ ಉದಾಹರಣೆಯಲ್ಲಿ ಕಾಣುವಂತೆ ಕನ್ನಡದಲ್ಲಿ ತಮಿಳಿನ ಸಂಖ್ಯಾವಾಚಕಗಳನ್ನು ಬಳಕೆ ಮಾಡುವುದು ಗಮನಿಸಬಹುದು. ಬಳಕೆಯ ಸಂದರ್ಭವನ್ನು ಗಮನಿಸಿದರೆ ಕನ್ನಡದ ವ್ಯಾಪಾರಿಯೊಂದಿಗೆ ತಮಿಳು ಭಾಷಿಕರು ಮಾತನಾಡುವಾಗ ತಮಿಳು ಸಂಖ್ಯಾವಾಚಕಗಳು ಬಳಸಿ ಮಾತನಾಡುತ್ತಾರೆ. ಕನ್ನಡದ ವ್ಯಾಪಾರಿಗಳು ವ್ಯಾವಹಾರ ಕಾರಣಕ್ಕೆ ಸಂಖ್ಯಾವಾಚಕಗಳನ್ನು, ವಸ್ತುಗಳ ಹೆಸರುಗಳನ್ನು ತಮಿಳು ಭಾಷೆಯ ಹೆಸರುಗಳನ್ನು ಕಲಿತಿದ್ದಾರೆ. ಇದರಿಂದ ಅವರುಗಳು ತಮಿಳಿನ ಸಂಖ್ಯಾವಾಚಕಗಳನ್ನು ಅರ್ಥಮಾಡಿಕೊಳ್ಳುತ್ತಾರೆ. ಹೀಗೆ

ಸಾಮಾನ್ಯವಾಗಿ ಒಂದರಿಂದ ಒಂಭತ್ತರವರೆಗಿನ ಸಂಖ್ಯಾವಾಚಕಗಳು ಬಳಕೆ ಮಾಡುವುದು ಹೆಚ್ಚಿದೆ.

ಕನ್ನಡ ಪರಿಸರದಲ್ಲಿ ಪಾಲ್ಗೊಳ್ಳುವ ಮತ್ತು ಕನ್ನಡ ಶಿಕ್ಷಣವನ್ನು ಪಡೆದಿರುವ ಮಕ್ಕಳುಗಳು(ಮೂರು ಮತ್ತು ನಾಲ್ಕನೇ ತಲೆಮಾರಿನ) ಇಂಗ್ಲಿಷ್ ಅಥವಾ ಕನ್ನಡದ ಸಂಖ್ಯಾವಾಚಕಗಳನ್ನು ಬಳಕೆ ಮಾಡುತ್ತಾರೆ. ಇವರುಗಳು ಸಾಮಾನ್ಯವಾಗಿ ೧-೧೦ರವರೆಗಿನ ತಮಿಳು ಸಂಖ್ಯಾವಾಚಕಗಳನ್ನು ನಿರರ್ಗಳವಾಗಿ ಬಳಕೆ ಮಾಡುತ್ತಾರೆ. ನಂತರದಲ್ಲಿ ಬರುವ ಸಂಖ್ಯಾವಾಚಕಗಳನ್ನು ಇಂಗ್ಲಿಷ್‌ನಲ್ಲಿ ಬಳಕೆ ಮಾಡುತ್ತಾರೆ. ಈ ರೀತಿಯ ಬಳಕೆಯು ಕನ್ನಡ ಪರಿಸರದಲ್ಲಿ ಕಲಿಕೆ ಮತ್ತು ಇಂಗ್ಲಿಷ್‌ನ ಬಳಕೆಯಿಂದಾಗಿ ಪ್ರಭಾವಿತಗೊಂಡಿದೆ.

ಮೂರನೇ ತಲೆಮಾರಿನವರು ಕೆಲವು ಸಂದರ್ಭದಲ್ಲಿ ತಮಿಳು ಸಂಖ್ಯಾವಾಚಕಗಳನ್ನು ನೆನಪು ಮಾಡಿಕೊಂಡು ಬಳಸುತ್ತಾರೆ. ಅಂದರೆ ಕನ್ನಡದ ಪರಿಸರದಲ್ಲಿ ಬೆಳೆದಿರುವವರು ತಮಿಳು ಸಂಖ್ಯಾವಾಚಕಗಳ ಪೂರ್ಣ ಪರಿಚಯವಿರುವುದಿಲ್ಲ, ಕೆಲವನ್ನು ನೆನಪಿಸಿಕೊಂಡು ಅಥವಾ ಮತ್ತೊಬ್ಬರಿಂದ ಕೇಳಿಕೊಂಡು ಬಳಕೆ ಮಾಡುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಕೊಂಡಿದೆ.

**ಕ್ರಮವಾಚಕಗಳು:**

| | |
|---|---|
| ಒಂದನೆಯ | ಮೂತವ |
| ಎರಡನೆಯ | ರಂಡಾವುದು |
| ಮೂರನೆಯ | ಮೂಣಾವುದು |
| ನಾಲ್ಕನೆಯ | ನಾಲಾವುದು |
| ಐದನೆಯ | ಅಂಜಿವುದು |
| ಆರನೆಯ | ಆರವುದು |
| ಏಳನೆಯ | ಏಳಾವುದು |
| ಎಂಟನೆಯ | ಎಟ್ಟಾವುದು |
| ಒಂಬತ್ತನೆಯ | ಒನ್ಬದಾವುದು |

ತಮಿಳಿನ ಕ್ರಮವಾಚಕಗಳಲ್ಲಿ ಸಂಖ್ಯಾವಾಚಕದ ಜೊತೆಯಲ್ಲಿ 'ಆವುದು' ಪ್ರತ್ಯಯ ಬಳಕೆ ಮಾಡುತ್ತಾರೆ. ಮೇಲೆ ತಿಳಿಸಿರುವಂತೆ ಒಂದನೆಯ ಎಂದು ಹೇಳುವುದಕ್ಕೆ ಮೂತವ ಎಂದು 'ಆವುದು' ಪ್ರತ್ಯಯವನ್ನು ಬಳಸಿರುವುದಿಲ್ಲ. ಮಿಕ್ಕ ಕ್ರಮವಾಚಕಗಳಲ್ಲಿ 'ಆವುದು' ಪ್ರತ್ಯಯವನ್ನು ಬಳಕೆ ಮಾಡಿರುವುದು ಕಾಣಬಹುದು. ಈ ರೀತಿಯ ಕ್ರಮವಾಚಕಗಳನ್ನು ಸಾಮಾನ್ಯವಾಗಿ ಒಂಭತ್ತು ಸಂಖ್ಯಾವಾಚಕಗಳ ವರೆಗೆ ಕಾಣುತ್ತೇವೆ. ಈ ಕ್ರಮವಾಚಕಗಳನ್ನು ತಮಿಳು ಭಾಷೆಯನ್ನು ಬಳಕೆ ಮಾಡುವ ಒಂದು, ಎರಡು, ಮೂರನೇ ತಲೆಮಾರಿನವರು ನಿರರ್ಗಳವಾಗಿ ಬಳಕೆ ಮಾಡುತ್ತಾರೆ. ಆದರೆ ನಾಲ್ಕನೇ ತಲೆಮಾರಿನ ಮಕ್ಕಳು ಕ್ರಮವಾಚಕಗಳನ್ನು ಬಳಕೆ ಮಾಡುವುದಿಲ್ಲ. ಮನೆಯಲ್ಲಿ ತಮಿಳು ಮತ್ತು ಬಾಹ್ಯಪರಿಸರದಲ್ಲಿ ತಮಿಳನ್ನು ಬಳಕೆ ಮಾಡುವ ಮಕ್ಕಳು

ಮಾತ್ರ ಕ್ರಮವಾಚಕಗಳನ್ನು ನೇರವಾಗಿ ಗುರುತಿಸಿ ಹೇಳುತ್ತಾರೆ. ಆದರೆ ಮನೆಯಲ್ಲಿಯೂ ತಮಿಳು ಬಳಕೆ ಕಡಿಮೆ ಮತ್ತು ಬಾಹ್ಯಪರಿಸರದಲ್ಲಿ ಕನ್ನಡವನ್ನು ಬಳಕೆ ಮಾಡುವ ಮಕ್ಕಳು ಈ ಕ್ರಮವಾಚಕಗಳ ಗುರುತಿಸುವುದಿಲ್ಲ. ಅವರುಗಳು ಕನ್ನಡದಲ್ಲಿಯೇ ನೇರವಾಗಿ ಹೇಳುತ್ತಾರೆ. ಅಥವಾ ತಮ್ಮ ಹಿರಿಯರಿಗೆ ಕೇಳಿ ಈ ಪದವನ್ನು ಬಳಕೆ ಮಾಡುತ್ತಾರೆ. ಹೀಗೆ ಕ್ರವಾಚಕಗಳ ನಾಲ್ಕನೇ ತಲೆಮಾರಿನ ಮಕ್ಕಳಲ್ಲಿ ಹೆಚ್ಚು ಬಳಕೆಯಲ್ಲಿ ಇಲ್ಲದೇ ಇರುವುದು ಕಾಣಬಹುದು.

**ತಿಂಗಳುಗಳ ಕ್ರಮವಾಚಕಗಳು:**

| | |
|---|---|
| ಒಂದು ತಿಂಗಳು | ಒರ್ ಮಾಸಂ |
| ಎರಡು ತಿಂಗಳು | ರಂಡು ಮಾಸಂ |
| ಮೂರು ತಿಂಗಳು | ಮೂಣ್ ಮಾಸಂ |
| ನಾಲ್ಕು ತಿಂಗಳು | ನಾಲ್ ಮಾಸಂ |
| ಐದು ತಿಂಗಳು | ಅಂಜಿ ಮಾಸಂ |
| ಆರು ತಿಂಗಳು | ಆರು ಮಾಸಂ |
| ಏಳು ತಿಂಗಳು | ಏಳು ಮಾಸಂ |
| ಎಂಟು ತಿಂಗಳು | ಎಂಟ್ಟು ಮಾಸಂ |
| ಒಂಭತ್ತು ತಿಂಗಳು | ಒಂಬದು ಮಾಸಂ |
| ಹತ್ತು ತಿಂಗಳು | ಪತ್ತು ಮಾಸಂ |
| ಹನ್ನೊಂದು ತಿಂಗಳು | ಪದವಂದು ಮಾಸಂ |
| ಹನ್ನೆರಡು ತಿಂಗಳು | ಪನ್ನೆರಡು ಮಾಸಂ |
| ಒಂದು ವರ್ಷ | ಒಂದು ವರ್ಷಂ |

**ವ್ಯಕ್ತಿಗುಂಪುಗಳನ್ನು ಸೂಚಿಸಲು ಬಳಸುವ ಕ್ರಮವಾಚಕಗಳು**

| | |
|---|---|
| ಒಬ | ಒರುವ |
| ಇಬ್ಬರು | ರಂಡು ಪೇರ್ |
| ಮೂವರು | ಮೂಣ್ ಪೇರ್ |
| ನಾಲ್ವರು | ನಾಲ್ ಪೇರ್ |
| ಐವರು | ಅಂಜಿ ಪೇರ್ |

| ಆರು ಜನ | ಆರ್ ಪೇರ್ |
|---|---|
| ಏಳು ಜನ | ಏಳ್ ಪೇರ್ |
| ಎಂಟು ಜನ | ಎಟ್ಟ್ ಪೇರ್ |
| ಒಂಬತ್ತು ಜನ | ಒಂಬದು(ಒನ್ಬದು) ಪೇರ್ |
| ಹತ್ತು ಜನ | ಪತ್ತು ಪೇರ್ |

ತಮಿಳು ಭಾಷಿಕರಲ್ಲಿ ವ್ಯಕ್ತಿಗುಂಪುಗಳನ್ನು ಸೂಚಿಸುವ ಕ್ರಮವಾಚಕಗಳು ಮೊದಲು ಸಂಖ್ಯಾವಾಚಕಗಳಿದ್ದು ನಂತರದಲ್ಲಿ 'ಪೇರ್' ರೂಪವನ್ನು ಬಳಸಿ ಹೇಳಲಾಗುತ್ತದೆ. ಒಟ್ಟಾರೆಯಾಗಿ ತಮಿಳು ಭಾಷಿಕರು ತಮ್ಮ ತಮ್ಮ ಭಾಷೆಯನ್ನು ಬಳಕೆ ಮಾಡುವಾಗ ಈ ಸಂಖ್ಯಾವಾಚಕಗಳನ್ನು ಬಳಕೆ ಮಾಡುವುದು ಹೆಚ್ಚು.

| ಕ್ರ. ಸಂ | ತಲೆಮಾರುಗಳು | ಸಂಖ್ಯಾವಾಚಕಗಳು | ಕ್ರಮವಾಚಕಗಳು |
|---|---|---|---|
| 01 | 1ನೇ ತಲೆಮಾರು | 90% | 90% |
| 02 | 2ನೇ ತಲೆಮಾರು | 85% | 81% |
| 03 | 3ನೇ ತಲೆಮಾರು | 48% | 62% |
| 04 | 4ನೇ ತಲೆಮಾರು | 20% | 15% |

ಕೋಷ್ಟಕದಲ್ಲಿ ಸೂಚಿಸಿರುವಂತೆ ಸಂಖ್ಯಾವಾಚಕಗಳನ್ನು ಮತ್ತು ಕ್ರಮವಾಚಕಗಳನ್ನು ತಲೆಮಾರುಗಳು ಆಧರಿಸಿ ಬಳಸುವ ಶೇಕಡವಾರು ಅಂಶಗಳನ್ನು ನೀಡಲಾಗಿದೆ. ಇಲ್ಲಿ ೧ನೇ ತಲೆಮಾರು ಎಂದರೆ ೫೫ ವರ್ಷ ಮೇಲಪ್ಪಟ್ಟವರು ಎಂದು. ೨ನೇ ತಲೆಮಾರು ಎಂದರೆ ೩೦ರಿಂದ ೫೫ ವರ್ಷದವರು. ೩ನೇ ತಲೆಮಾರು ಎಂದರೆ ೧೫ರಿಂದ ೩೦ ವರ್ಷದವರು. ೪ನೇ ತಲೆಮಾರು ಎಂದರೆ ೧೫ ವರ್ಷದೊಳಿನವರು ಎಂದು ವಿಭಾಗಿಸಿಕೊಳ್ಳಲಾಗಿದೆ. ಅಲ್ಲದೇ ವಯಸ್ಸನ್ನು ಆಧರಿಸಿ ತಲೆಮಾರುಗಳಾಗಿ ವಿಂಡಗಿಸಿದೆ. ಕೋಷ್ಟಕದಲ್ಲಿನ ಶೇಕಡವಾರು ಸಂಖ್ಯೆಗಳು ಬಳಕೆಯ ಶೇಕಡವಾರು ಪ್ರಮಾಣವನ್ನು ಸೂಚಿತ್ತದೆ. ಒಂದನೇ ತಲೆಮಾರಿನವರು ಸಂಖ್ಯಾವಾಚಕಗಳನ್ನು ಮತ್ತು ಕ್ರಮವಾಚಕಗಳನ್ನು ಶೇ. ೯೦ಕ್ಕಿಂತಲೂ ಹೆಚ್ಚು ಜನರು ತಮಿಳು ಭಾಷೆಯಲ್ಲಿ ಬಳಕೆ ಮಾಡುತ್ತಾರೆ ಎಂದು ತಿಳಿಸುತ್ತಾರೆ. ಇದಕ್ಕೆ ಕಾರಣ ಅವರುಗಳು ಬಹುತೇಕರು ಕನ್ನಡದ ಪರಿಸರೊಂದಿಗೆ ಬೆರೆಯದೇ ಇರುವುದು ಮತ್ತು ಬಾಹ್ಯ ಪರಿಸರದೊಂದಿಗೆ ಸಂಪರ್ಕಕ್ಕೆ ಅವಕಾಶ ಇಲ್ಲದೇ ಇರುವುದು. ಇದರೊಂದಿಗೆ ಇವರು ವಯೊವೃದ್ಧರಾಗಿರುವ ಕಾರಣಕ್ಕೆ ಮೊದಲಿಂದಲೂ ಕನ್ನಡದ ಪರಿಸದಲ್ಲಿ ಬೆರೆತು ವ್ಯವಹರಿಸಿರುವುದು ಕಡಿಮೆ, ಕನ್ನಡ ಪರಿಸರದ ಸಂಪರ್ಕ ಕಡಿಮೆಯಾಗಿರುವ ಕಾರಣಕ್ಕೆ ಇವುಗಳ ಬಳಕೆಯು ಪೂರ್ಣಪ್ರಮಾಣದಲ್ಲಿ ತಮಿಳು ಸಂಖ್ಯಾವಾಚಕಗಳನ್ನು ಮತ್ತು ಕ್ರಮವಾಚಕಗಳನ್ನು ಬಳಕೆ ಮಾಡುತ್ತಾರೆ. ಎರಡನೇ ತಲೆಮಾರಿನವರು ಸಹ ಸಂಖ್ಯಾವಾಚಕಗಳನ್ನು ಮತ್ತು ಕ್ರಮವಾಚಕಗಳನ್ನು ತಮಿಳಿನಲ್ಲಿ ಬಳಕೆ ಬಳಕೆಮಾಡುವ ಶೇಕಡವಾರು ಹೆಚ್ಚಿದೆ. ಇವರು ಸಹ ಮೊದಲ ತಲೆಮಾರಿನಂತೆ

ಕನ್ನಡ ಪರಿಸರ ಪ್ರಭಾವಕ್ಕೆ ಒಳಗಾಗಿದ್ದು ಕಡಿಮೆ. ಆದ್ದರಿಂದ ಇವರು ಬಳಕೆಯಲ್ಲಿ ತಮಿಳು ಸಂಖ್ಯಾಚಕಗಳು ಉಳಿದುಕೊಂಡಿವೆ. ಇನ್ನು ಮೂರು ಮತ್ತು ನಾಲ್ಕನೇ ತಲೆಮಾರಿನವರು ಸಂಖ್ಯಾವಾಚಕಗಳನ್ನು ಮತ್ತು ಕ್ರಮವಾಚಿಗಳನ್ನು ಬಳಕೆ ಮಾಡುವಲ್ಲಿ ಶೇಕಡವಾರು ಮೊದಲೆರಡು ತಲೆಮಾರಿಗೆ ಹೋಲಿಸಿದರೆ ಕಡಿಮೆ ಇದೆ. ಇದಕ್ಕೆ ಕಾರಣ ಈ ಎರಡು ತಲೆಮಾರಿನವರು ಕನ್ನಡದ ಪರಿಸರದಲ್ಲಿ ಬೆಳೆದು ಕನ್ನಡಿಗರೊಂದಿಗೆ ಬೆರತು ಹೋಗಿದ್ದಾರೆ. ಅಲ್ಲದೇ ಇವರುಗಳು ಮನೆಯಲ್ಲಿ ತಮಿಳನ್ನು ಮತ್ತು ಬಾಹ್ಯಪರಿಸರದಲ್ಲಿ ಕನ್ನಡ ಅಥವಾ ಬೇರೆ ಭಾಷೆಯನ್ನು ಬಳಕೆ ಮಾಡುವುದರಿಂದ ತಮಿಳು ಭಾಷೆಯ ಈ ಅಂಶಗಳ ಬಳಕೆ ಕಡಿಮೆ ಇದೆ. ಕೇವಲ ದಿನನಿತ್ಯದ ಬಳಕೆಯಲ್ಲಿರುವ ಅಂಶಗಳನ್ನು ಮಾತ್ರ ನಿರರ್ಗಗಳವಾಗಿ ಬಳಕೆ ಮಾಡುತ್ತಾರೆ. ಇನ್ನು ಸಂಖ್ಯಾವಾಚಕಗಳನ್ನು ನಾಲ್ಕನೇ ತಲೆಮಾರಿನವರು ಕಡಿಮೆ ಪ್ರಮಾಣದಲ್ಲಿ ಬಳಸಿದರು, ಕ್ರಮವಾಚಕಗಳನ್ನು ಬಳಸದೇ ಇರುವುದು ಕಾಣಬಹುದು. ಅಲ್ಲದೇ ಇವುಗಳ ಪರಿಚಯವು ಇಲ್ಲದೇ ಇರುವುದು ಸಹ ಇದೆ. ಇಲ್ಲಿ ಭಾಷೆಯ ಪರಿಚಯವಿಲ್ಲ ಎಂದು ಅಲ್ಲ. ಆದರೆ ದಿನನಿತ್ಯದ ಭಾಷೆಯಲ್ಲಿ ಈ ಕಲ್ಪನೆಯನ್ನು ಬಳಕೆ ಮಾಡುತ್ತಿಲ್ಲ. ಆದ್ದರಿಂದ ಇವುಗಳ ಪರಿಚಯವಾಗಲಿ, ಬಳಕೆಯ ಕ್ರಮವಾಗಿಲಿ ನಿರರ್ಗಗಳವಾಗಿಲ್ಲ.

**೬.೪. ವ್ಯಾವಹಾರಿಕ ಭಾಷೆಯಾಗಿ ಕನ್ನಡ ಅಥವಾ ತಮಿಳು**

ದ್ವಿಭಾಷಿಕ ಮತ್ತು ಬಹುಭಾಷಿಕ ಪರಿಸರಗಳಲ್ಲಿ ಸಾಮಾನ್ಯ ವ್ಯವಹಾರಕ್ಕಾಗಿ ಒಂದು ಭಾಷೆಯನ್ನು ರೂಢಿಸಿಕೊಳ್ಳುವುದು ಕಾಣಬಹುದು. ಅದು ಪರಿಸರದ ಒಂದು ಪ್ರಭಾವಿ ಭಾಷೆಯಾಗಿರಬಹುದು. ಅಥವಾ ಎರಡೂ ಭಾಷೆಯಲ್ಲಿನ ಆಯ್ದ ಪದಗಳನ್ನು ಬಳಸಿ ವ್ಯವಹಾರ ನಡೆಸುದಾಗಿದೆ. ಭಾಷಾಶಾಸ್ತ್ರದಲ್ಲಿ ಈ ಭಾಷಿಕ ಬಳಕೆಯನ್ನು ಪಿಜಿನ್ ಭಾಷೆ ಎಂದು ಗುರುತಿಸುತ್ತಾರೆ. ಆದರೆ ಪಿಜಿನ್ ಭಾಷೆ ಎಂದರೆ ಎರಡು ಭಿನ್ನ ಭಾಷಿಕ ವಂಶಕ್ಕೆ ಸೇರಿದ ಎರಡು ಭಾಷೆಗಳು ವ್ಯಾವಹಾರಿಕ ಸಂಬಂಧಕ್ಕಾಗಿ ಕೆಲವು ಪದಗಳೊಂದಿಗೆ ವ್ಯವಹಾರ ನಡೆಸಿದರೆ ಅದನ್ನು ಪಿಜಿನ್ ಎಂದು ಕರೆಯುತ್ತಾರೆ. ಪ್ರಪಂಚದ ಬಹುಭಾಗಗಳಲ್ಲಿ ಈ ರೀತಿಯ ಭಾಷೆಯು ರೂಢಿಯಲ್ಲಿದೆ. ಆದರೆ ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರು ವಲಸೆ ಮತ್ತು ಅನ್ಯಭಾಷಿಕರಾಗಿರುವುದರಿಂದ ಸ್ಥಳೀಯ ಭಾಷೆಯಾದ ಕನ್ನಡವನ್ನು ಕೆಲವು ಕಾರಣಗಳಿಗೆ ಕಲಿಯದೆ ಜೀವಿಸಿದರೆ. ಇನ್ನೂ ಕೆಲವು ತಮಿಳು ಭಾಷಿಕರು ಕೆಲವು ಕಾರಣಕ್ಕೆ ಕನ್ನಡವನ್ನು ಕಲಿತು ಜೀವನ ಸಾಗಿಸುತ್ತಿದ್ದಾರೆ. ಇದಕ್ಕೆ ಸಾಮಾಜಿಕ ಮತ್ತು ಆರ್ಥಿಕ ಒತ್ತಡಗಳನ್ನು ಕಾಣಬಹುದು. ಹಿರಿಯೂರಿನಲ್ಲಿ ಸಾಮಾಜಿಕ ಮತ್ತು ಆಡಳಿತ ಭಾಷೆಯಾದ ಕನ್ನಡ ಮತ್ತು ಹೊಸಪೇಟೆ ಪರಿಸರದಲ್ಲಿ ಆಡಳಿತ ಭಾಷೆಯಾಗಿ ಕನ್ನಡ ಮತ್ತು ಪ್ರಭಾವಿ ಭಾಷೆಯಾಗಿ ತೆಲುಗು ಇರುವುದರಿಂದ ಎರಡು ಭಾಷೆಗಳೊಂದಿಗೆ ವ್ಯವಹಾರ ನಡೆಸಲು ಭಾಷೆಯನ್ನು ಕಲಿಯಲೇ ಬೇಕಾಗಿದೆ. ಹೀಗೆ ಕನ್ನಡ ಮತ್ತು ತೆಲುಗು ಭಾಷೆಯನ್ನು ಕಲಿತಿರುವ ತಮಿಳು ಭಾಷಿಕರು ಯಾವ ಯಾವ ಸಂದರ್ಭಗಳಲ್ಲಿ ಕನ್ನಡವನ್ನು ಮತ್ತು ತೆಲುಗು ಭಾಷೆಯನ್ನು ಬಳಸುತ್ತಾರೆ. ಈ ಎರಡು ಭಾಷೆಗಳನ್ನು ಬಳಸುವಾಗ ಇರುವ ಸಾಮಾಜಿಕ ಒತ್ತಡವೇನು? ಎಂಬುದನ್ನು ಮತ್ತು ವ್ಯಾವಹಾರಿಕ ಭಾಷೆಯನ್ನು ಕಂಡುಕೊಳ್ಳುವ ಮೂಲಕ ವಿವರಿಸುವುದು ಇಲ್ಲಿನ ಉದ್ದೇಶವಾಗಿದೆ.

ಹಿರಿಯೂರು ಮತ್ತು ಹೊಸಪೇಟೆ ಪರಿಸರಗಳು ಹೆಚ್ಚು ಕನ್ನಡವನ್ನು ಬಳಕೆ ಮಾಡುವ ಪ್ರದೇಶಗಳಾಗಿವೆ. ಮಾರುಕಟ್ಟೆ ಮತ್ತು ಇತರೆ ವ್ಯಾವಹಾರಿಕ ಸ್ಥಳಗಳಲ್ಲಿ ಕನ್ನಡವನ್ನು ಹೆಚ್ಚಾಗಿ ಬಳಸುತ್ತಾರೆ. ಹಿರಿಯೂರು ಪರಿಸರದಲ್ಲಿ ಕನ್ನಡವು ಆಡಳಿತ ಮತ್ತು ಬಹುಸಂಖ್ಯಾತರ ಭಾಷೆಯಾಗಿರುವುದರಿಂದ ಸರ್ಕಾರಿ ಮತ್ತು ಖಾಸಗಿ ಪರಿಸರಗಳಲ್ಲಿ ಕನ್ನಡವನ್ನು ವ್ಯಾವಹಾರಿಕ ಭಾಷೆಯಾಗಿ ಬಳಕೆ ಮಾಡುತ್ತಾರೆ. ಇನ್ನು ಕೆಲವು ಖಾಸಗಿ ಪರಿಸರಗಳಲ್ಲಿ ಹಿಂದಿ, ಉರ್ದು ಭಾಷೆಗಳನ್ನು ಬಳಕೆ ಮಾಡುವುದು ಕಾಣಬಹುದು. ಇನ್ನು ಹೊಸಪೇಟೆ ಪರಿಸರದಲ್ಲಿ ಕನ್ನಡವು ಆಡಳಿತ ಮತ್ತು ಬಹುಸಂಖ್ಯಾತರ ಭಾಷೆಯಾಗಿದೆ. ಇದರೊಂದಿಗೆ ತೆಲುಗು ಸಹ ಬಹುಸಂಖ್ಯಾತರ ಭಾಷೆಯಾಗಿ ಬಳಕೆಯಲ್ಲಿದೆ. ಇದಕ್ಕೆ ಕಾರಣ ಆಂಧ್ರದ ಗಡಿ ಭಾಗವು ಈ ಪ್ರದೇಶಕ್ಕೆ ಹೊಂದಿಕೊಂಡಿರುವುದು. ಅದರೊಂದಿಗೆ ಬಳ್ಳಾರಿ ಜಿಲ್ಲೆಯ ಗಣಿಗಾರಿಕೆ ಮತ್ತು ಇತರೆ ಉದ್ಯೋಗಕ್ಕಾಗಿ ಆಂಧ್ರದಿಂದ ವಲಸೆ ಬಂದು ನೆಲೆಸಿರುವುದರಿಂದ ತೆಲುಗು ಭಾಷಿಕರು ಹೆಚ್ಚಿದ್ದಾರೆ. ಇನ್ನು ಹೊಸಪೇಟೆಯ ವ್ಯಾವಹಾರಿಕ ಪರಿಸರಗಳಾದ ತರಕಾರಿ ಮಾರುಕಟ್ಟೆ, ಹೂವಿನ ಮಾರುಕಟ್ಟೆಗಳಲ್ಲಿ ತೆಲುಗು ಭಾಷಿಕರು ಪ್ರಾಬಲ್ಯ ಹೊಂದಿರುವುದನ್ನು ಕಾಣಬಹುದು. ಇವರುಗಳು ನೇಕಾರ ಸಮುದಾಯದವರಾಗಿದ್ದಾರೆ. ಆದರೆ ಹಿರಿಯೂರು ಪರಿಸರದಲ್ಲಿ ತಮಿಳು ಭಾಷಿಕರು ತರಕಾರಿ ಮಾರುಕಟ್ಟೆ ಮತ್ತು ಹೂವಿನ ಮಾರುಕಟ್ಟೆಯಲ್ಲಿ ಪ್ರಾಬಲ್ಯವನ್ನು ಹೊಂದಿರುವುದು ಕಾಣಬಹುದು. ಹೀಗೆ ಈ ಎರಡು ಪ್ರದೇಶಗಳು ರಚನೆಯಲ್ಲಿ ಮತ್ತು ಭಾಷಾ ಬಳಕೆಯಲ್ಲಿ ವ್ಯತ್ಯಾಸವನ್ನು ಹೊಂದಿವೆ. ಆದರೆ ತಮಿಳು ಭಾಷಿಕರು ವಲಸೆ ಬಂದು ನೆಲಸುವ ವಿಚಾರದಲ್ಲಿ ಸಾಮ್ಯತೆಯನ್ನು ಕಾಣಬಹುದು. ಎರಡು ಪ್ರದೇಶಗಳಲ್ಲಿ ಸುಮಾರು ೩೦-೩೫ವರ್ಷಗಳ ಅಂತರದಲ್ಲಿ ತಮಿಳು ಭಾಷಿಕರು ಬಂದು ನೆಲೆಸಿರುವುದನ್ನು ಕಾಣಬಹುದು. ಹಿರಿಯೂರು ಪರಿಸರದಲ್ಲಿ ತಮಿಳು ಭಾಷಿಕರು ಗುಂಪುಗಳಾಗಿ ವಾಸವಾಗಿದ್ದರೂ ಅವರುಗಳು ವ್ಯಾವಹಾರಿಕ ಸಂದರ್ಭಗಳಲ್ಲೂ ಗುಂಪು ಗುಂಪುಗಳಾಗಿಯೇ ಇರುವುದು ಹೆಚ್ಚು. ಅಂದರೆ ವ್ಯಾಪಾರಿ ಸ್ಥಳಗಳಾದ ಹೊಟೇಲ್, ತರಕಾರಿ ಮಾರುಕಟ್ಟೆ ಪ್ರದೇಶಗಳಲ್ಲಿ ಇವರು ಗುಂಪುಗಳಾಗಿ ವ್ಯಪಾರ ನಡೆಸುತ್ತಾರೆ. ಇಲ್ಲಿಯೂ ವ್ಯಾಪಾರಿಕವಾಗಿ ದ್ವೀಪವಾಗಿ ಇರುವುದು ಕಾಣಬಹುದು. ಆದರೆ ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರು ಕನ್ನಡ ಭಾಷಿಕರೊಂದಿಗೆ ನಿರ್ದಿಷ್ಟ ವ್ಯಾಪಾರ ಕಸುಬುಗಳೊಂದಿಗೆ ಗುರುತಿಸಿಕೊಂಡಿರುವುದು ಕಡಿಮೆ. ಸಾಮಾನ್ಯವಾಗಿ ಹೊಸಪೇಟೆಯಲ್ಲಿರುವ ತಮಿಳರು ಬೇರೆ ಬೇರೆ ಖಾಸಗಿ ಕೆಲಸಗಳಿಗೆ ಹೋಗುತ್ತಾರೆ. ಇದರೊಂದಿಗೆ ಗ್ರಾಮೀಣ ಪ್ರದೇಶದಲ್ಲಿರುವವರು ಕೃಷಿ ಕೂಲಿ ಕಾರ್ಮಿಕರಾಗಿ ದುಡಿಯುತ್ತಾರೆ. ಆದ್ದರಿಂದ ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕರು ವ್ಯಾವಹಾರಿಕವಾಗಿ ಅಂತಹ ಪ್ರಾಬಲ್ಯವನ್ನು ಹೊಂದಿರುವುದಿಲ್ಲ. ಇದರಿಂದಾಗಿ ಹೊಸಪೇಟೆ ಪರಿಸರದಲ್ಲಿರುವ ತಮಿಳು ಭಾಷಿಕರು ವ್ಯಾವಹಾರಿಕ ಭಾಷೆಯನ್ನು ನಿರ್ಧರಿಸುವಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುವುದಿಲ್ಲ. ಆದರೆ ಹಿರಿಯೂರು ಪರಿಸರದ ತಮಿಳು ಭಾಷಿಕರು ಮಾರುಕಟ್ಟೆಯ ಕೆಲವು ಭಾಗಗಳಲ್ಲಿ ಪಾಬಲ್ಯವನ್ನು ಹೊಂದಿರುವ ಕಾರಣಕ್ಕೆ ವ್ಯಾವಹಾರಿಕ ಭಾಷೆಯನ್ನು ನಿರ್ಧರಿಸುವಲ್ಲಿ ಪಾತ್ರವಹಿಸುತ್ತಾರೆ. ಅಂದರೆ ವ್ಯಾವಹಾರಿಕ ಸಂದರ್ಭದಲ್ಲಿ ಕನ್ನಡವನ್ನು ಬಳಕೆ ಮಾಡುತ್ತಾರೋ ಅಥವ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೋ ಎಂಬುದನ್ನು ಇಲ್ಲಿ ತಿಳಿಯಬಹುದು.

ಭಾಷಾದ್ವೀಪದಲ್ಲಿನ ತಮಿಳು ಭಾಷಿಕರನ್ನು ಮುಖ್ಯವಾಗಿರಿಸಿಕೊಂಡು ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿನ ವ್ಯಾವಹಾರಿಕ ಭಾಷೆಯನ್ನು ಕಂಡುಕೊಳ್ಳುವುದು ಮುಖ್ಯವಾಗಿದೆ. ಅಂದರೆ ಒಂದು ಬಹುಸಂಖ್ಯಾತರ ಭಾಷೆಯಾಗಿರು ಕನ್ನಡ ಪರಿಸರದಲ್ಲಿ ಅಲ್ಪಸಂಖ್ಯಾತರ ಭಾಷೆಯಾಗಿರುವ ತಮಿಳು ಭಾಷೆಗೆ ವ್ಯಾವಹಾರಿಕ ಸಂದರ್ಭದಲ್ಲಿ ಹೇಗೆ ಮನ್ನಣೆ ದೊರಕುತ್ತದೆ ಎಂಬುದನ್ನು ಇಲ್ಲಿ ಕಂಡುಕೊಂಡಿದೆ. ಪ್ರಭಾವಿ ಭಾಷೆ ಮತ್ತು ಅಧೀನ ಭಾಷೆಯಾಗಿ ಅಧಿಕಾರ ಮತ್ತು ವ್ಯಾಪಾರಿ ದೃಷ್ಟಿಯಿಂದ ನೋಡಬಹುದಾಗಿದೆ. ತಮಿಳು ಭಾಷೆಯ ಜನರು ತಮ್ಮ ಮನೆ ಆವರಣದಲ್ಲಿ ತಮಿಳನ್ನು ಬಳಕೆ ಮಾಡಿದರೆ, ಸಾಮಾಜಿಕ ಪರಿಸರದಲ್ಲಿ ಕನ್ನಡವನ್ನು ಬಳಕೆ ಮಾಡುತ್ತಾರೆ. ಕನ್ನಡದ ಸಾಮಾಜಿಕ ಪರಿಸರದಲ್ಲಿ ಕನ್ನಡವನ್ನು ಅನೇಕ ಕಾರಣಗಳಿಗೆ ಬಳಕೆ ಮಾಡುತ್ತಾರೆ. ಆದರೆ ವ್ಯಾವಹಾರಿಕ ಭಾಷೆಯಾಗಿ ಬಳಕೆ ಮಾಡುವ ಉದ್ದೇಶವು ಬೇರೆಯದ್ದಾಗಿರುತ್ತದೆ. ಇಲ್ಲಿ ಭಾಷೆಯು ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುವ ಜೊತೆಯಲ್ಲಿಯೇ ಆರ್ಥಿಕ ಚಟುವಟಿಕೆ ನಡೆಸುತ್ತಿರುತ್ತದೆ. ಈ ರೀತಿಯ ಆರ್ಥಿಕ ಚಟುವಟಿಕೆಯು ಕೆಲವು ಸಂದರ್ಭಗಳಲ್ಲಿ ಭಾಷೆಯನ್ನು ಆಧರಿಸಿ ನಡೆಯುತ್ತಿರುತ್ತದೆ.

ಭಾಷಾದ್ವೀಪಗಳಲ್ಲಿನ ವ್ಯಾವಹಾರಿಕ ಸಂದರ್ಭಗಳನ್ನು ಭಾಷಾಬಳಕೆಯನ್ನು ಆಧರಿಸಿ ಎರಡು ರೀತಿಯಲ್ಲಿ ವಿಭಾಗಿಸಬಹುದು. ಒಂದು ತಮಿಳು–ತಮಿಳು ಭಾಷಿಕರು ವ್ಯವಹಾರ ನಡೆಸುವುದು. ಮತ್ತೊಂದು ತಮಿಳು–ಕನ್ನಡ ಭಾಷಿಕರು ವ್ಯವಹಾರ ನಡೆಸುವುದು. ಇಲ್ಲಿ ತಮಿಳು–ತಮಿಳು ಭಾಷಿಕರು ವ್ಯವಹಾರ ನಡೆಸುವಾಗ ಭಾಷೆಯನ್ನು ಗ್ರಹಿಸಲು ಮತ್ತು ಪ್ರತ್ಯುತ್ತರ ನೀಡಲು ಯಾವುದೇ ಸಮಸ್ಯೆಯಾಗುವುದಿಲ್ಲ. ಈ ರೀತಿಯ ವ್ಯವಹಾರವು ತಮಿಳು ಭಾಷಿಕರು ವಾಸಿಸುವ ಸ್ಥಳಗಳಲ್ಲಿಯೇ ನಡೆಯುತ್ತದೆ. ಇಲ್ಲಿ ಅನ್ಯಭಾಷಿಕರು ಇರುವುದಿಲ್ಲ. ಆದರೆ ತಮಿಳು–ಕನ್ನಡ ಭಾಷಿಕರು ವ್ಯವಹಾರ ನಡೆಸುವಾಗ ವ್ಯಾವಹಾರಿಕ ಭಾಷೆಯೊಂದು ಅವಶ್ಯಕತೆ ಇರುತ್ತದೆ. ಇಲ್ಲಿ ತಮಿಳರು ಕನ್ನಡಿಗರಿಗೆ ಕನ್ನಡಿಗರು ತಮಿಳರಿಗೆ ಅರ್ಥವಾಗುವಂತೆ ವ್ಯವಹರಿಸಬೇಕಾಗುತ್ತದೆ. ಆದ ಕಾರಣ ಈ ಪ್ರಕ್ರಿಯೆಯಲ್ಲಿ ಭಾಷೆಯು ಮುಖ್ಯ ಪಾತ್ರ ವಹಿಸುತ್ತದೆ. ಈ ರೀತಿಯ ಭಾಷಿಕ ಪರಿಸರವನ್ನು ಹಿರಿಯೂರು ಪರಿಸರದಲ್ಲಿ ಹೆಚ್ಚಾಗಿ ಕಾಣುತ್ತೇವೆ. ಕಾರಣ ಹಿರಿಯೂರು ಪರಿಸರದಲ್ಲಿ ತಮಿಳು ಭಾಷಿಕರು ಗುಂಪು ಗುಂಪಾಗಿ ಹೂವಿನ ಮಾರುಕಟ್ಟೆ, ತರಕಾರಿ ಮಾರುಕಟ್ಟೆ, ಹೋಟೆಲ್‌ಗಳನ್ನು ನಡೆಸುತ್ತಾರೆ. ಈ ವ್ಯಾವಹಾರಿಕ ಸಂದರ್ಭಗಳಲ್ಲಿ ಕನ್ನಡಿಗರೊಂದಿಗೆ ವ್ಯವಹರಿಸುವಾಗ ಕನ್ನಡ ಬಳಕೆ ಮಾಡುತ್ತಾರೆ. ಈ ಒಟ್ಟು ವ್ಯಾವಹಾರಿಕ ಸಂದರ್ಭವು ಕನ್ನಡ ಪರಿಸರದಲ್ಲಿ ಜರುಗುತ್ತದೆ. ತಮಿಳು ಭಾಷಿಕರು ತಮಗೆ ಗೊತ್ತಿರುವ ಕನ್ನಡದಲ್ಲಿ ಕೆಲವು ಪದಗಳನ್ನು ಬಳಸಿಕೊಂಡು ವ್ಯವಹರಿಸುತ್ತಾರೆ. ಇನ್ನು ಕೆಲವು ಸಂದರ್ಭಗಳಲ್ಲಿ ತಮಿಳು ಭಾಷೆಯ ಪದಗಳನ್ನು ಉಪಯೋಗಿಸಿಕೊಂಡು ವ್ಯವಹಾರ ಚಟುವಟಿಕೆಗಳನ್ನು ನಡೆಸುತ್ತಾರೆ. ಇಲ್ಲಿ ಕನ್ನಡವನ್ನು ಒಂದು ವ್ಯಾವಹಾರಿಕ ಭಾಷೆಯಾಗಿ ಬಳಸುವುದಕ್ಕೆ ಸಾಮಾಜಿಕ ಒತ್ತಡ ಮತ್ತು ಆರ್ಥಿಕ ಒತ್ತಡವು ಕಾರಣವಾಗಿದೆ. ಆರ್ಥಿಕ ಒತ್ತಡದಲ್ಲಿ ತಮಿಳು ಭಾಷಿಕರು ತಮ್ಮ ಜೀವನವನ್ನು ಕಟ್ಟಿಕೊಳ್ಳಲು ವ್ಯಾವಹಾರಿಕ ಚಟುವಟಿಕೆಯ ಮೂಲಕ ಹಣ ಸಂಪಾದನೆ ಮಾಡಬೇಕು. ಕನ್ನಡದ ಪರಿಸರದಲ್ಲಿ ತಮಿಳು ಭಾಷೆಯ ಮೂಲಕ ವ್ಯವಹಾರ ಮಾಡುವುದರಿಂದ, ಕನ್ನಡಿಗರೊಂದಿಗೆ

ಸರಿಯಾದ ಸಂಪರ್ಕವನ್ನು ಸಾಧಿಸಿ, ಆರ್ಥಿಕ ಚಟುವಟಿಕೆಗಳಲ್ಲಿ ಯಶಸ್ವಿಯಾಗಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಇವರು ಕನ್ನಡ ಭಾಷೆಯನ್ನು ಆತ್ಮೀಯತೆ ಮತ್ತು ಅರ್ಥಗ್ರಹಿಕೆಯ ಸಾಧನವಾಗಿ ಬಳಸಿ ವ್ಯವಹಾರ ಮಾಡುತ್ತಾರೆ. ಇಲ್ಲಿ ಕನ್ನಡ ಭಾಷೆಯು ಬಾಹ್ಯವಾಗಿ ಸಂಪರ್ಕ ಭಾಷೆಯಾಗಿ ಕಂಡರೂ, ಅದು ವ್ಯಾವಹಾರಿಕ ಸಂದರ್ಭದಲ್ಲಿ ಆರ್ಥಿಕ ಚಟುವಟಿಕೆಯ ಹಿಂದೆ ತನ್ನ ವ್ಯಾಪಾರಿ ಕೆಲಸವನ್ನು ನಿರ್ವಹಿಸುತ್ತದೆ. ಎಷ್ಟೋ ಸಂದರ್ಭಗಳಲ್ಲಿ ತಮಿಳು ಭಾಷಿಕರು ತಮ್ಮ ವ್ಯಾಪಾರ ವಹಿವಾಟನ್ನು ಸುಗಮಗೊಳಿಸಿಕೊಳ್ಳಲು, ಜನರನ್ನು ಆಕರ್ಷಿಸಲು ಸ್ಥಳೀಯ ಭಾಷೆಯಲ್ಲಿ ವ್ಯವಹರಿಸುವುದು ಮತ್ತು ಮಾತನಾಡುತ್ತಾರೆ.ಇದು ಒಂದರ್ಥದಲ್ಲಿ ಸ್ಥಳೀಯರನ್ನು ಭಾಷೆಯ ಮೂಲಕ ವಿಶ್ವಾಸಕ್ಕೆ ತೆಗೆದುಕೊಳ್ಳುವುದು ಎಂದು ಅರ್ಥೈಸಲಾಗುತ್ತದೆ.

ಹಿರಿಯೂರು ಪರಿಸರದಲ್ಲಿ ತಮಿಳು-ಕನ್ನಡ ಭಾಷಿಕರು ವ್ಯವಹಾರ ನಡೆಯುವ ಸ್ಥಳಗಳು:

ತರಕಾರಿ ಮಾರುಕಟ್ಟೆ

ಹೂವಿನ ಮಾರುಕಟ್ಟೆ

ಹೋಟೆಲ್‌ಗಳು

ಅಂಗಡಿಗಳಲ್ಲಿ

ಮೊದಲೇ ತಿಳಿಸಿದಂತೆ ಹಿರಿಯೂರು ಪರಿಸರದಲ್ಲಿ ತಮಿಳು ಭಾಷಿಕರು ಮೇಲಿನ ಮೂರು ವ್ಯಾವಹಾರಿಕ ಪರಿಸರದಲ್ಲಿ ತೊಡಗಿಕೊಂಡಿದ್ದಾರೆ. ಗ್ರಾಹಕರಾಗಿ ಕನ್ನಡ, ತಮಿಳು ಮತ್ತು ಇತರ ಭಾಷಿಕರು ಭೇಟಿ ನೀಡಿ ವ್ಯವಹರಿಸುತ್ತಾರೆ. ಹೀಗೆ ವ್ಯಾವಹಾರಿಕ ಸಂದರ್ಭವು ರೂಢಿಯಲ್ಲಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಕನ್ನಡಿಗರು ವ್ಯವಹರಿಸಬೇಕಾದ ಸಂದರ್ಭದಲ್ಲಿ ಕನ್ನಡವನ್ನು ಮಾತನಾಡುತ್ತಾರೆ. ಒಂದುವೇಳೆ ತಮಿಳು ಭಾಷಿಕರು ವ್ಯವಹರಿಸಬೇಕಾದ ಸಂದರ್ಭದಲ್ಲಿ ತಮಿಳನ್ನು ವ್ಯವಹಾರಿಕ ಭಾಷೆಯಾಗಿ ಬಳಕೆಮಾಡುತ್ತಾರೆ. ಹೀಗೆ ಕನ್ನಡಿಗರೊಂದಿಗೆ ಕನ್ನಡವನ್ನು ಮಾತನಾಡಬೇಕು ಮತ್ತು ತಮಿಳಿರೊಂದಿಗೆ ತಮಿಳಿನಲ್ಲಿ ಮಾತನಾಡಬೇಕು ಎಂಬ ಯಾವುದೇ ನಿಯಮವಿಲ್ಲ. ಇಲ್ಲಿ ಕನ್ನಡಿಗರೊಂದಿಗೆ ಮಾತನಾಡುವಾಗ ಕನ್ನಡ ಮಾತನಾಡುವುದು ಅವಶ್ಯಕವಾಗಿದೆ. ಈ ಅವಶ್ಯಕತೆಯು ಆರ್ಥಿಕ ಮತ್ತು ದುಡಿಮೆಯ ಭಾಷೆಯಾಗಿ ಕನ್ನಡವನ್ನು ರೂಢಿಸಿದೆ. ಅಂದರೆ ಬಹುಸಂಖ್ಯಾತ ಭಾಷಿಕರಾಗಿರುವ ಕನ್ನಡಿಗರು ತಮ್ಮ ವ್ಯವಹಾರಗಳನ್ನು ನಡೆಸುವಾಗ ಕನ್ನಡವನ್ನು ಬಳಕೆ ಮಾಡುತ್ತಾರೆ. ಈ ಸಂದರ್ಭದಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡಿದರೆ ಕನ್ನಡದ ಗ್ರಾಹಕರ ಮೇಲೆ ತಮಿಳು ಭಾಷೆಯ ಗ್ರಹಿಕೆಯ ಪರಿಣಾಮಕಾರಿಯಾಗಿ ಆಗದೇ ಇರಬಹುದು, ಕೆಲವು ಸಂದರ್ಭಗಳಲ್ಲಿ ಭಾಷಾತೊಡುಕು, ಭಾಷಾಭಿಮಾನ, ಅನ್ಯಭಾಷಿಕರು ಎಂಬ ರೀತಿಯ ಸಾಮಾಜಿಕ ಒತ್ತಡಗಳು ರಚಿತಗೊಂಡು ತಮಿಳು ಬಳಕೆಗೆ ಹಿಂದೇಟು ಹಾಕುವ ಸಂದರ್ಭಗಳು ಹೆಚ್ಚು. ಆದರೆ ಕನ್ನಡವನ್ನು ವ್ಯಾವಹಾರಿಕ ಸಂದರ್ಭದಲ್ಲಿ ಬಳಕೆ ಮಾಡುವುದರಿಂದ ಹೆಚ್ಚು ಹೆಚ್ಚು ಅನುಕೂಲವಾಗುತ್ತದೆ. ಇಲ್ಲಿ ಕನ್ನಡಿಗರೊಂದಿಗೆ ವ್ಯವಹರಿಸುವುದು ಸಲುಭವಾಗುತ್ತದೆ. ಅವರೊಂದಿಗೆ ವ್ಯಾವಹಾರಿಕ ಸಂಪರ್ಕವು ಸುಗಮಗೊಳ್ಳುತ್ತದೆ. ಹೀಗೆ ಬಹುಸಂಖ್ಯಾತರ ಭಾಷೆಯಾಗಿರುವ ಕನ್ನಡವು ಭಾಷಾದ್ವೀಪಗಳಲ್ಲಿರುವ ವ್ಯಾವಹಾರಿಕ ಭಾಷೆಯಾಗಿ ಬಳಕೆಯಾಗುತ್ತದೆ.

ಇಲ್ಲಿ ತಮ್ಮದೇ ಭಾಷೆಯನ್ನು ರೂಪಿಸಿಕೊಂಡಿರುವುದು ಕಾಣಬಹುದು. ಮಾರುಕಟ್ಟೆಯ ಪರಿಸರದಲ್ಲಿ ಮುಖ್ಯವಾಗಿ ತರಕಾರಿ ಮಾರುಕಟ್ಟೆಯಲ್ಲಿ ತರಕಾರಿಯ ಹೆಸರುಗಳನ್ನು ಹೇಳುವಾಗ ಕೆಲವು ಸಂದರ್ಭಗಳಲ್ಲಿ ತಮಿಳು ಶಬ್ದಗಳನ್ನು ಬಳಕೆ ಮಾಡುತ್ತಾರೆ. ಇಲ್ಲವೆಂದರೆ ತಮಿಳಿನ ಧ್ವನಿಗಳನ್ನು ಬಳಕೆ ಮಾಡಿಕೊಂಡು ತರಕಾರಿಯ ಹೆಸರುಗಳನ್ನು ಹೇಳುವುದು ಕಾಣಬಹುದು.

ಉದಾ:

| **ಕನ್ನಡ ರೂಪಗಳು** | **ತಮಿಳರು ಬಳಸುವ ರೂಪಗಳು** |
|---|---|
| ನಿಂಬೆಕಾಯಿ | ನಿಂಬೆಗಾಯಿ |
| ತೆಂಗಿನಕಾಯಿ | ತೆಂಗಾಯಿ(ತ್ಯಾಂಗಾಯಿ) |
| ಕರಿಬೇವು | ಕರುಪುಳ/ಕರಿವ್ಯಾಪುಳ |

ಪ್ರಯೋಗ: ಅಮ್ಮ 'ನಿಂಬೆಗಾಯಿ' ಬೇಕ

ಏನ್ ಬೇಕಣ್ಣ? 'ತೆಂಗಾಯಿ' ಬೇಕಾ.

ಹೀಗೆ ತರಕಾರಿ ಮಾರುಕಟ್ಟೆಯಲ್ಲಿ ಕೆಲವು ಸಂದರ್ಭಗಳಲ್ಲಿ ತಮಿಳು ವ್ಯಾಪಾರಿಗಳು ಕನ್ನಡಿಗರೊಂದಿಗೆ ವ್ಯವಹಾರವನ್ನು ಕನ್ನಡದಲ್ಲಿ ನಡೆಸಿದರು. ಅದರಲ್ಲಿ ತಮಿಳು ಭಾಷೆಯ ಕೆಲವು ನಾಮಪದಗಳು, ಸಂಖ್ಯಾವಾಚಕಗಳು, ಸಂಬೋಧನಾ ರೂಪಗಳು ಬಂದು ಹೋಗುತ್ತವೆ. ಕೆಲವು ಸಂದರ್ಭಗಳಲ್ಲಿ ತಮಿಳಿನ ಧ್ವನಿಗಳು ಕನ್ನಡದಲ್ಲಿ ಬರುತ್ತವೆ. ನಿಂಬೆಕಾಯಿ ಎನ್ನುವಲ್ಲಿ ನಿಂಬೆಗಾಯಿ ಎನ್ನುತ್ತಾರೆ. ಇಲ್ಲಿ 'ಕ' ಬದಲಾಗಿ 'ಗ' ಬಳಕೆಯಾಗುತ್ತದೆ. ಇದು ತಮಿಳು ಭಾಷೆಯಲ್ಲಿ ಬಳೆಯಲ್ಲಿನ ರೂಢಿಯೂ ಕನ್ನಡದಲ್ಲಿಯೂ ಬಳಕೆಯಾಗುತ್ತಿದೆ.

ಹೂವಿನ ಮಾರುಕಟ್ಟೆಯಲ್ಲಿಯೂ ತಮಿಳು ಭಾಷಿಕರು ಅದರಲ್ಲೂ ಸ್ತ್ರೀಯರು ಹೆಚ್ಚು ವ್ಯಾಪಾರಸ್ಥರಾಗಿದ್ದಾರೆ. ಕನ್ನಡಿಗರೊಂದಿಗೆ ಮಾತನಾಡುವಾಗ ಕನ್ನಡದಲ್ಲಿ ಹೆಚ್ಚು ಬಳಕೆ ಮಾಡುತ್ತಾರೆ. ಇಲ್ಲಿಯೂ ತಮಿಳು ಕೆಲವೊಂದು ಸಂದರ್ಭಗಳಲ್ಲಿ ಪದರೂಪಗಳಲ್ಲಿ ಅಥವಾ ಧ್ವನಿರೂಪದಲ್ಲಿ ಬಳಕೆಯಾಗುತ್ತದೆ. ಹೂವು ಎನ್ನುವುದನ್ನು ತಮಿಳಿನಲ್ಲಿ 'ಪೂವ್' ಎಂದು ಬಳಕೆಮಾಡುತ್ತಾರೆ.

ಅಂಗಡಿಗಳಲ್ಲಿ ಮತ್ತು ಹೋಟೆಲ್‌ಗಳಲ್ಲಿಯೂ ಕನ್ನಡ ಬಳಕೆ ಮಾಡುತ್ತಾರೆ. ಇಲ್ಲಿ ಸಾಮಾನ್ಯವಾಗಿ ತಮಿಳು ಭಾಷಿಕರು ವ್ಯವಹರಿಸುವಾಗ ಮಾತ್ರ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಇನ್ನುಳಿದಂತೆ ಕನ್ನಡವನ್ನು ಬಳಕೆ ಮಾಡುತ್ತಾರೆ.

| ಕ್ರಸಂ | ವ್ಯಾಪಾರಿ ಸ್ಥಳಗಳು | ಹೆಚ್ಚು ಬಳಸುವ ಭಾಷೆ | ಕಡಿಮೆ ಬಳಸುವ ಭಾಷೆ |
|---|---|---|---|
| ೦೧ | ತರಕಾರಿ ಮಾರುಕಟ್ಟೆ | ಕನ್ನಡ | ತಮಿಳು |
| ೦೨ | ಹೂವಿನ ಮಾರುಕಟ್ಟೆ | ಕನ್ನಡ | ತಮಿಳು |
| ೦೩ | ಹೋಟೆಲಗಳಲಿ | ಕನ್ನಡ | ತಮಿಳು |
| ೦೪ | ಅಂಗಡಿಗಳಲ್ಲಿ | ಕನ್ನಡ | ತಮಿಳು |

ಈ ಕೋಷ್ಟಕವು ತಮಿಳು ಭಾಷಿಕರು ವ್ಯಾವಹಾರಿಕ ಭಾಗವಹಿಸುವ ಸ್ಥಳಗಳಲ್ಲಿ ವ್ಯವಹಾರಕ್ಕಾಗಿ ಬಳಸುವ ಭಾಷೆಯ ಕುರಿತು ಮಾಹಿತಿಯನ್ನು ನೀಡುತ್ತಾರೆ. ಹಿರಿಯೂರು ಪರಿಸರದಲ್ಲಿ ತಮಿಳು ಭಾಷಿಕರು ಮಾರುಕಟ್ಟೆ, ಅಂಗಡಿಗಳು ಮತ್ತು ಹೋಟೆಲ್‌ಗಳಲ್ಲಿ ವ್ಯಾವಹಾರಿಕ ಚಟುವಟಿಕೆಯಲ್ಲಿ ಪಾಲ್ಗೊಳ್ಳುತ್ತಾರೆ. ಇಲ್ಲಿ ಬಳಸುವ ಭಾಷೆ ಕನ್ನಡವೋ ಅಥವಾ ತಮಿಳೋ ಎಂಬುದರ ಬಗ್ಗೆ ತಿಳಿಯಲು ಸಹಾಯವಾಗಿದೆ. ಈ ನಾಲ್ಕು ವ್ಯಾಪಾರಿ ಪರಿಸರದಲ್ಲಿ ತಮಿಳು ಭಾಷಿಕರು 'ಕನ್ನಡ'ವನ್ನು ವ್ಯಾವಹಾರಿಕ ಭಾಷೆಯಾಗಿ ಬಳಕೆ ಮಾಡುತ್ತಾರೆ ಎಂದು ತಿಳಿಸುತ್ತಾರೆ. ಇಲ್ಲಿ ಕನ್ನಡವನ್ನು ವ್ಯಾವಹಾರಿಕ ಭಾಷೆಯಾಗಿ ಬಳಕೆ ಮಾಡಬೇಕು ಎಂಬ ಯಾವ ಅಧಿಕೃತ ನಿಯಮವಿಲ್ಲ. ಆದರೆ ಸ್ಥಳೀಯ ಪರಿಸರದ ಸಾಮಾಜಿಕ ಮತ್ತು ತಮ್ಮ ಜೀವನದ ಆರ್ಥಿಕ ನಿರ್ವಹಣೆಗಾಗಿ ಕನ್ನಡವನ್ನು ಬಳಸಲೇಬೇಕಾದ ಸಂದರ್ಭ ಇರುವುದರಿಂದ ಸಾಮಾಜಿಕ ಮತ್ತು ವ್ಯಾವಹಾರಿಕ ಭಾಷೆಯಾಗಿ ಕನ್ನಡವನ್ನು ಬಳಕೆ ಮಾಡುತ್ತಾರೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ ತಮಿಳು ಭಾಷಿಕರು ವಾಸಿಸುವ ಪ್ರದೇಶಗಳಲ್ಲಿನ ಅಂಗಡಿ ಮತ್ತು ಮಾರುಕಟ್ಟೆಯಲ್ಲಿ ತಮಿಳು ಭಾಷೆಯನ್ನು ಹೆಚ್ಚು ಬಳಕೆ ಮಾಡಿದರೆ. ಕನ್ನಡದ ಸಾಮಾಜಿಕ ಪರಿಸರದಲ್ಲಿ ಇರುವ ಬೃಹತ್ ಮಾರುಕಟ್ಟೆಗಳಲ್ಲಿ ಕನ್ನಡವನ್ನು ವ್ಯಾವಹಾರಿಕವಾಗಿ ಬಳಕೆ ಮಾಡುವುದು ಕಾಣಬಹುದು. ಹೀಗೆ ಕನ್ನಡವನ್ನು ಬಳಕೆ ಮಾಡುವವರಲ್ಲಿ ತಮಿಳು ಭಾಷಿಕ ವ್ಯಾಪಾರಸ್ಥರು ಇದ್ದಾರೆ.

ಒಟ್ಟಾರೆಯಾಗಿ ಭಾಷಾದ್ವೀಪಗಳಲ್ಲಿ ವಾಸಿಸುವ ಜನರು ವ್ಯಾವಹಾರಿಕ ಭಾಷೆಯಾಗಿ ಬಾಹ್ಯಪರಿಸರದ ಭಾಷೆಯನ್ನು ಬಳಕೆ ಮಾಡುತ್ತಾರೆ. ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿಯೂ ತಮಿಳು ಭಾಷಿಕರು ಕನ್ನಡವನ್ನು ವ್ಯಾವಹಾರಿಕ ಭಾಷೆಯಾಗಿ ಬಳಕೆ ಮಾಡುತ್ತಾರೆ. ಅಲ್ಲದೆ ಇವರು ಇದೇ ಭಾಷೆಯನ್ನು ಬಳಸಬೇಕು ಎಂಬ ಯಾವುದೇ ನಿಯಮವಿಲ್ಲ. ಆದರೆ ಕನ್ನಡ ಪರಿಸರದಲ್ಲಿರವ ಬೃಹತ್ ಭಾಷಿಕ ಬಳಕೆಯ ಒತ್ತಡವು ಕನ್ನಡವನ್ನು ಬಳಸುವಂತೆ ಮಾಡುತ್ತದೆ. ಇದರೊಂದಿಗೆ ತಮ್ಮ ವ್ಯಾಪಾರಗಳು ಭಾಷೆಯಿಂದ ಯಾವುದೇ ತೊಡಕಾದಂತೆ ಕನ್ನಡವನ್ನು ಬಳಸಿ ವ್ಯವಹರಿಸುತ್ತಾರೆ. ಆದ್ದರಿಂದ ತಮಿಳು ಕನ್ನಡ ಪರಿಸರದಲ್ಲಿ ಕನ್ನಡವನ್ನು ವ್ಯಾವಹಾರಿಕ ಭಾಷೆಯಾಗಿ ಬಳಕೆ ಮಾಡುತ್ತಾರೆ.

ತಮಿಳು ಭಾಷಾದ್ವೀಪಗಳಲ್ಲಿನ ಜನರು ತಮ್ಮ ಭಾಷೆಯನ್ನು ಜನರು ಹೇಗೆ ಬಳಕೆ ಮಾಡುತ್ತಾರೆ. ತಮಿಳು ಭಾಷೆಯಲ್ಲಿನ ಕೆಲವು ಭಾಷಿಕಾಂಶಗಳ ಮೂಲಕ ಭಾಷಾ ಬಳಕೆಯನ್ನು ಕಂಡುಕೊಳ್ಳುವುದು ಇಲ್ಲಿ ಮುಖ್ಯವಾಗಿತ್ತು. ಈ ಭಾಷಾಂಶಗಳ ಮೂಲಕ ಅವರ ಸಾಂಸ್ಕೃತಿಕ ಮತ್ತು ಐತಿಹಾಸಿಕ ಅಂಶಗಳನ್ನು

ಉಳಿಸಿಕೊಂಡಿದ್ದಾರೆಯೇ ಎಂಬುದನ್ನು ಸ್ಪಷ್ಟಪಡಿಕೊಳ್ಳುವುದು ಸೇರಿತ್ತು. ಅದರಂತೆ ಭಾಷಾಂಶಗಳಾದ ಸಂಖ್ಯಾವಾಚಕಗಳು ಮತ್ತು ಪ್ರಮಾಣ ವಾಚಕಗಳ ಮೂಲಕ ಭಾಷಾ ಬಳಕೆಯನ್ನು ಗಮನಿಸಿದಾಗ ಭಾಷಾದ್ವೀಪಗಳಲ್ಲಿನ ಜನರು ತಲೆಮಾರುಗಳನ್ನು ಆಧರಿಸಿ ಭಾಷಾ ಬಳಕೆಯಲ್ಲಿನ ಭಿನ್ನತೆಯನ್ನು ಕಾಣಬಹುದು. ಈ ರೀತಿಯ ಭಿನ್ನತೆಗೆ ಸಾಮಾಜಿಕ ಮತ್ತು ಆಧುನಿಕತೆಯ ಒತ್ತಡವು ಕಾರಣವಾಗಿರುವುದು ಕಂಡುಕೊಳ್ಳಲಾಗಿದೆ. ಅಂದರೆ ಸಂಖ್ಯಾವಚಗಳನ್ನು ನಾಲ್ಕನೇ ತಲೆಮಾರಿನ ಮಕ್ಕಳ ಬಳಕೆಯಲ್ಲಿ ವ್ಯತ್ಯಯವಾಗಿರುವುದು ಅಲ್ಲದೆ ಕನ್ನಡ ಮತ್ತು ಇಂಗ್ಲಿಷ್ ಶಿಕ್ಷಣದಿಂದ ಸಂಖ್ಯಾವಾಚಕಗಳ ಪ್ರಾಥಮಿಕ ಅಂಕಿಗಳನ್ನು ಮಾತ್ರ ತಮಿಳಿನಲ್ಲಿ ಬಳಸಿ ಮುಂದುರೆದ ಸಂಖ್ಯೆಗಳನ್ನು ಕನ್ನಡದಲ್ಲಿ ಅಥವಾ ಇಂಗ್ಲಿಷ್‌ನಲ್ಲಿ ಬಳಕೆ ಮಾಡುತ್ತಾರೆ. ಅದರಂತೆ ವ್ಯಕ್ತಿನಾಮಗಳನ್ನು ಗಮನಿಸಿದಾಗ ವ್ಯಕ್ತಿನಾಮಗಳ ರಚನೆಯು ಸಾಮಾನ್ಯವಾಗಿ ವಾರ್ಗಿಕ ನಿರ್ದಿಷ್ಟಗಳ ರಚನೆಯಿಂದಲೇ ಕೂಡಿದೆ. ಈ ರಚನೆಯಲ್ಲಿ ತಮಿಳುನಾಡಿನ ಮೂಲ ಹೆಸರುಗಳು, ಸಂಸ್ಕೃತಿ, ಆಚರಣೆಗೆ ಸಂಬಂಧಿಸಿದ ಹೆಸರುಗಳು ಒಳಗೊಂಡು ರಚನೆಯಾಗಿವೆ. ಈ ವ್ಯಕ್ತಿನಾಮಗಳನ್ನು ಸಾಮಾನ್ಯವಾಗಿ ಕನ್ನಡದ ಪರಿಸರದಲ್ಲಿ ಬಳಕೆಯಲ್ಲಿಲ್ಲ. ಇವುಗಳ ಮೂಲಕ ತಮಿಳುನಾಡಿನ ಭಾಷೆ, ಸಂಸ್ಕೃತಿ, ಮತ್ತು ಸಮುದಾಯಗಳನ್ನು ಕಂಡುಕೊಂಡಿದೆ. ಇನ್ನು ಮುಖ್ಯವಾಗಿ ಕನ್ನಡದ ಪರಿಸರದಲ್ಲಿ ತಮಿಳು ಭಾಷಿಕರು ವ್ಯಾವಹಾರಿಕ ಕಾರಣಕ್ಕಾಗಿ ಕನ್ನಡವನ್ನು ಬಳಕೆ ಮಾಡುವ ಸಂದರ್ಭವನ್ನು ಇಲ್ಲಿ ಚರ್ಚಿಸಿದೆ. ತಮಿಳು ಕನ್ನಡ ಭಾಷಾ ಬಳಕೆಗೆ ಇರುವ ಅಮೂರ್ತ ರೂಪದ ಕಾರಣಗಳನ್ನು ಇಲ್ಲಿ ತಿಳಿಸಲಾಗಿದೆ. ಮಾರುಕಟ್ಟೆ, ಅಂಗಡಿ ಮತ್ತು ಇತರೆ ವ್ಯಾಪಾರಿ ಸ್ಥಳಗಳಲ್ಲಿ ತಮಿಳು ಭಾಷಿಕರು ವ್ಯಪಾರಕ್ಕಾಗಿ ಬಳಕೆ ಮಾಡುವ ಭಾಷೆಯನ್ನು ಕಂಡುಕೊಳ್ಳಲಾಗಿದೆ. ಹೀಗೆ ತಮಿಳು ತಮ್ಮ ಭಾಷೆಯನ್ನು ಬಳಕೆಯಲ್ಲಿ ಉಳಿಸಿಕೊಂಡಿರುವ ಮತ್ತು ಕನ್ನಡದ ಪರಿಸರದಲ್ಲಿ ವ್ಯಾವಹಾರಿಕ ಕಾರಣಕ್ಕೆ ಕನ್ನಡ ಬಳಕೆ ಮಾಡುವ ಭಾಷೆಯನ್ನು ಕಂಡುಕೊಳ್ಳಲಾಗಿದೆ.

* * *

ಅಧ್ಯಾಯ: ಏಳು

# ತಮಿಳು ಭಾಷಾದ್ವೀಪಗಳಲ್ಲಿ ಶಿಕ್ಷಣ ಮತ್ತು ಭಾಷೆ

೭.೧. ತಮಿಳು ಮಕ್ಕಳ ಶಿಕ್ಷಣದ ಭಾಷೆ

೭.೨. ಭಾಷಾದ್ವೀಪ: ಶಿಕ್ಷಣದ ಸಮಸ್ಯೆ ಮತ್ತು ಸವಾಲುಗಳು

೭.೨.೧. ತಮಿಳು ಮಕ್ಕಳ ಕನ್ನಡ ಕಲಿಕೆಗೆ ಇರುವ ಪ್ರೇರಕಾಂಶಗಳು

೭.೩. ಸಮಾಜದ ಇತರೆ ಪರಿಸರದಲ್ಲಿ ಮಕ್ಕಳು ಬಳಸುವ ಭಾಷೆ

ಅಧ್ಯಾಯ: ಏಳು

# ತಮಿಳು ಭಾಷಾದ್ವೀಪಗಳಲ್ಲಿ ಶಿಕ್ಷಣ ಮತ್ತು ಭಾಷೆ

ಕನ್ನಡ ಮತ್ತು ತಮಿಳು ದ್ವಿಭಾಷಿಕ ಪರಿಸರದಲ್ಲಿ ಬೆಳೆಯುತ್ತಿರುವ ತಮಿಳು ಭಾಷಿಕರ ಮಕ್ಕಳು ಮನೆ ಭಾಷೆಯಾಗಿ ತಮಿಳನ್ನು ಹಾಗೂ ಪರಿಸರ ಭಾಷೆಯಾಗಿ ಕನ್ನಡವನ್ನು ಕಲಿಯುತ್ತಾರೆ. ಇನ್ನು ಶಾಲಾ ಆವರಣದಲ್ಲಿ ಇಂಗ್ಲಿಷ್ ಮತ್ತು ಹಿಂದಿಯನ್ನು ಕಲಿಯುತ್ತಾರೆ. ಹೀಗೆ ತಮಿಳು ಭಾಷಿಕರ ಮಕ್ಕಳು ಅಲ್ಪಕಾಲಾವಧಿಯಲ್ಲಿಯೇ ನಾಲ್ಕು ಭಾಷೆಗಳ ಸಂಪರ್ಕವನ್ನು ಹೊಂದುತ್ತಾರೆ. ಈ ರೀತಿಯ ಭಾಷಿಕ ಪರಿಸ್ಥಿತಿಯಲ್ಲಿ ತಮಿಳು ಮಕ್ಕಳು ಯಾವ ಭಾಷೆಯಲ್ಲಿ ತಮ್ಮ ಕಲಿಕೆಯನ್ನು ಮಾಡುತ್ತಾರೆ. ಶಾಲಾ ಆವರಣದಲ್ಲಿ ತಮಿಳು ಭಾಷೆಯನ್ನು ಬಳಸುತ್ತಾರೋ ಅಥವಾ ಕನ್ನಡವನ್ನು ಬಳಸುತ್ತಾರೋ. ಈ ಮೂಲಕ ಮಕ್ಕಳಿಗೆ ಕನ್ನಡವು ಬಾಹ್ಯ ಪರಿಸರದ ಒತ್ತಡದಿಂದ ರೂಢಿಯಾಗುತ್ತದೆಯೋ ಅಥವಾ ಕಲಿಕೆಯ ಭಾಗವಾಗಿ ರೂಢಿಯಾಗುತ್ತದೆಯೋ ಎಂಬುದನ್ನು ಕಂಡುಕೊಳ್ಳಬೇಕಿದೆ. ಇದರೊಂದಿಗೆ ಭಾಷಾದ್ವೀಪಗಳಲ್ಲಿ ಭಾಷಾಸಂಗೋಪನೆ ದೃಷ್ಟಿಯಿಂದಾಗಿ ತಮಿಳು ಕಲಿಕೆಯ ಮೂಲಕ ಮಕ್ಕಳಿಗೆ ತಲುಪತ್ತದೋ ಅಥವಾ ಮನೆಯ ಆವರಣದಿಂದ ತಲುಪುತ್ತದೋ ಎಂಬುದನ್ನು ತಿಳಿಯಬೇಕಿದೆ. ಬಾಹ್ಯ ಪರಿಸರದ ಭಾಷೆಗಳು ತಮಿಳು ಭಾಷೆಯ ಶೈಕ್ಷಣಿಕತೆಯ ಮೇಲೆ ಯಾವುದಾದರೂ ಪ್ರಭಾವಗಳನ್ನು ಬೀರುತ್ತಿದೆಯೆ? ಎಂಬುದನ್ನು ಕಂಡುಕೊಳ್ಳಬೇಕಿದೆ. ಇವುಗಳ ಮೂಲಕ ತಮಿಳು ಭಾಷಾದ್ವೀಪಗಳಲ್ಲಿ ಮಕ್ಕಳ ಭಾಷೆ, ಶಿಕ್ಷಣದ ಭಾಷೆ, ತಮಿಳು ಶೈಕ್ಷಣಿಕತೆಯನ್ನು ಪರಿಶೀಲಿಸುವ ಅಗತ್ಯವಿದೆ. ಸಮಾಜೋಭಾಷಿಕ ಹಿನ್ನೆಲೆಯಲ್ಲಿ ಯಾವ ಸಾಮಾಜಿಕ ವರ್ಗಗಳು ತಮಿಳು ಅಥವಾ ಕನ್ನಡವನ್ನು ತಮ್ಮ ಮಕ್ಕಳ ಕಲಿಕಾ ಮಾಧ್ಯಮವನ್ನು ರೂಢಿಗೊಳಿಸಿವೆ. ಇವುಗಳ ಮೂಲಕ ತಮಿಳು ಭಾಷಾದ್ವೀಪಗಳಲ್ಲಿ ಮಕ್ಕಳ ಭಾಷಿಕ ಸ್ಥಿತಿಯನ್ನು ತಿಳಿಯಬೇಕಿದೆ.

## ೭.೧. ತಮಿಳು ಮಕ್ಕಳ ಅಧ್ಯಯನದ ಭಾಷೆ

ಪ್ರತಿ ಸಮುದಾಯದ ಮಕ್ಕಳು ತಮ್ಮ ಮಾತೃಭಾಷೆಯಲ್ಲಿ(ಮೊದಲ ಭಾಷೆ) ಕಲಿಕೆಯನ್ನು ಮಾಡಬೇಕು ಎನ್ನುವುದು ಎಲ್ಲೆಡೆ ಕೇಳಿಬರುವ ಮಾತು. ಆದರೆ ಕೆಲವು ಸ್ಥಳ-ಪರಿಸರಗಳಲ್ಲಿ ಇದಕ್ಕೆ ವಿರುದ್ಧವಾಗಿ ಬೇರೊಂದು ಭಾಷೆಯಲ್ಲಿ ಕಲಿಕೆಯನ್ನು ಮಾಡುವುದು ಕಾಣಬಹುದು. ಇಂದು ಕರ್ನಾಟಕದಲ್ಲಿ ಬಹುತೇಕ ಮಕ್ಕಳಿಗೆ ಕನ್ನಡ ಮಾತೃಭಾಷೆಯಾಗಿದೆ. ಆದರೆ ಜಾಗತೀಕರಣದ ಪ್ರಭಾವದಿಂದಾಗಿ ಬೆಂಗಳೂರು,

ಧಾರವಾಡ, ಕಲಬುರ್ಗಿ ಮುಂತಾದ ಬೃಹತ್ ನಗರಗಳಲ್ಲಿ ಅನೇಕ ಮಕ್ಕಳು ಇಂಗ್ಲಿಷ್ ಭಾಷಾ ಮಾಧ್ಯಮದಲ್ಲಿ ಕಲಿಯುತ್ತಿದ್ದಾರೆ. ಇತ್ತೀಚೆಗೆ ಗ್ರಾಮಾಂತರ ಪ್ರದೇಶಗಳಲ್ಲಿಯೂ ಕನ್ನಡದ ಮಕ್ಕಳು ಖಾಸಗಿ ಶಾಲೆಗಳಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಕಲಿಯುತ್ತಿದ್ದಾರೆ. ಇದೇ ಸ್ಥಿತಿಯನ್ನು ಭಾಷಾದ್ವೀಪಗಳಲ್ಲಿ ಕಾಣಬಹುದು. ಅಂದರೆ ತಮಿಳು ಭಾಷಿಕ ಮಕ್ಕಳಿಗೆ ತಮಿಳು ಭಾಷೆಯಲ್ಲಿ ಕಲಿಕೆಗೆ ಅನುವಾಗುವಂತೆ ಕೆಲವು ಸೀಮಿತ ಅವಕಾಶಗಳು ಇದ್ದರೂ, ಅವುಗಳ ಕಡೆ ಹೆಚ್ಚು ಗಮನ ಕೊಡದೆ ಪರಿಸರದ ಭಾಷೆಯಾದ ಕನ್ನಡ ಮತ್ತು ಜಾಗತೀಕ ಭಾಷೆಯಾದ ಇಂಗ್ಲಿಷ್ ಭಾಷೆಗಳ ಮೂಲಕ ಕಲಿಯುತ್ತಿದ್ದಾರೆ. ಇದಕ್ಕೆ ಅನೇಕ ಕಾರಣಗಳಿವೆ. ಕನ್ನಡದ ಪರಿಸರದಲ್ಲಿ ಆಡಳಿತ ಭಾಷೆಯಾಗಿರುವ ಕನ್ನಡವು ವಿದ್ಯಾಭ್ಯಾಸ, ಉದ್ಯೋಗ, ಸಂಪರ್ಕ ಕಾರಣಕ್ಕಾಗಿ ಮುಖ್ಯವಾಗುತ್ತದೆ. ಅಲ್ಲದೇ ತಮಿಳು ಭಾಷಿಕರು ನಾಲ್ಕು ತಲೆಮಾರುಗಳಿಂದ ಇಲ್ಲಿ ವಾಸವಾಗಿರುವುದರಿಂದ ಇವರುಗಳು ಕನ್ನಡದ ಪರಿಸರದಲ್ಲಿ ಬೆರೆತು ಹೋಗಿದ್ದಾರೆ. ಇವರುಗಳು ತಮ್ಮ ಜೀವನವನ್ನು ಕಟ್ಟಿಕೊಳ್ಳುವಲ್ಲಿ ಕನ್ನಡ ಭಾಷೆ, ಶಿಕ್ಷಣ ಇವು ಯಾವುದೇ ಲಿಖಿತ ರೂಪದ ಒತ್ತಡವಲ್ಲ. ಸಾಮಾಜಿಕ ಮತ್ತು ಆರ್ಥಿಕ ನೆಲೆಯಲ್ಲಿರುವ ಅಮೂರ್ತ ರೂಪದ ಒತ್ತಡಗಳು. ಇದರೊಂದಿಗೆ ವಲಸಿಗರು ಮತ್ತೊಂದು ಪ್ರದೇಶದಲ್ಲಿ ವಾಸವಾಗಿರುವುದಕ್ಕೆ ಬಾಹ್ಯ ಪರಿಸರದೊಂದಿಗೆ ಕೆಲವು ಹೊಂದಾಣಿಕೆ ಮಾಡಿಕೊಳ್ಳಬೇಕಾಗುತ್ತದೆ. ಈ ರೀತಿಯ ಹೊಂದಾಣಿಕೆಗಳು ತಲೆಮಾರಿನಿಂದ ತಲೆಮಾರಿಗೆ ಹೆಚ್ಚುತಾ ಹೋಗುತ್ತವೆ. ನಂತರದ ತಲೆಮಾರುಗಳಲ್ಲಿ ಪೂರ್ಣ ಪ್ರಮಾಣದ ಬದಲಾವಣೆಗಳು ಆಗಬಹುದು. ಹೀಗೆ ತಮಿಳು ಭಾಷಿಕರ ಮಕ್ಕಳ ಶಿಕ್ಷಣವು ಒಂದು ಹಂತದಲ್ಲಿ ಆಡಳಿತ ಭಾಷೆಯಾದ ಕಾರಣಕ್ಕೆ ಕನ್ನಡವನ್ನು ಒಂದು ಭಾಷೆಯಾಗಿ ಕಲಿತು, ಇದೇ ಭಾಷೆಯೂ ಮುಂದೆ ಪ್ರೌಢಶಾಲಾ ಶಿಕ್ಷಣದಲ್ಲಿ ಮುಖ್ಯ ಭಾಷೆಯಾಗಿ ರೂಢಿಯಾಗುತ್ತದೆ.

ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕ ಮಕ್ಕಳು ಕಲಿಕೆಗಾಗಿ ಆಯ್ದುಕೊಳ್ಳುವ ಭಾಷೆಯ ಕುರಿತು ಇಲ್ಲಿ ಚರ್ಚಿಸಿದೆ. ಮುಖ್ಯವಾಗಿ ತಮಿಳು ಭಾಷಿಕರು ತಮ್ಮ ಅಧ್ಯಯನಕ್ಕಾಗಿ ಆಯ್ದುಕೊಂಡಿರುವ ಭಾಷೆಯ ಕುರಿತು ಎರಡು ಕಾಲಘಟ್ಟಗಳಾಗಿ ವರ್ಗೀಕರಿಸಿಕೊಂಡು ಚರ್ಚಿಸಬಹುದು. ಅಂದರೆ ಕರ್ನಾಟಕಕ್ಕೆ ವಲಸೆ ಬಂದು ನೆಲೆನಿಂತ ಮೇಲೆ ತಮ್ಮ ಮಕ್ಕಳ ಶಿಕ್ಷಣಕ್ಕಾಗಿ ಸರ್ಕಾರಗಳು ಕೈಗೊಂಡ ಕ್ರಮಗಳು ಮತ್ತು ಅಂದಿನ ತಮಿಳು ಭಾಷಿಕರ ತೋರಿದ ಪ್ರತಿಕ್ರಿಯೆ ಮತ್ತು ಇನ್ನೊಂದು ಪ್ರಸ್ತುತ ತಮಿಳು ಭಾಷಿಕರು ಮಕ್ಕಳ ಅಧ್ಯಯನಕ್ಕಾಗಿ ಯಾವ ಭಾಷೆಯನ್ನು ಆಯ್ಕೆ ಮಾಡುತ್ತಿದ್ದಾರೆ ಎಂಬುದು ಅದು ಯಾವ ವರ್ಗಗಳ ಭಾಷಿಕರು ಯಾವ ಮಾಧ್ಯಮದಲ್ಲಿ ಅಧ್ಯಯನಕ್ಕೆ ಆಸಕ್ತಿ ತೋರಿಸುತ್ತಾರೆ ಎಂಬುದನ್ನು ಕಾಣಬಹುದು.

ಕರ್ನಾಟಕದಲ್ಲಿ ನೆಲೆನಿಂತ ತಮಿಳು ಭಾಷಿಕರು ೧೯೫೦ರ ನಂತರದಲ್ಲಿ ತಮಿಳು ಮಾಧ್ಯಮದ ಭಾಷೆಯನ್ನು ಅಧಿಕೃತವಾಗಿ ಆರಂಭಿಸಿದೆವು ಎಂದು ಮಾಹಿತಿ ನೀಡುತ್ತಾರೆ. ಹಿರಿಯೂರು ಪರಿಸರದಲ್ಲಿ ಈಗಿನ ಸಂತೆ ಮೈದಾನದಲ್ಲಿ ಕಿರಿಯ ಪ್ರಾಥಮಿಕ ಶಾಲೆಯನ್ನು ೧೯೫೫ರಲ್ಲಿ ಆರಂಭಿಸಲಾಯಿತು. ನಂತರ

ಹಿರಿಯೂರು ಪರಿಸರದಲ್ಲಿ ಒಟ್ಟು ಆರು ಶಾಲೆಗಳು ಚಾಲನೆಯಲ್ಲಿದ್ದವು. ಅದರಲ್ಲಿ ಹುಳಿಯಾರು ರಸ್ತೆಯಲ್ಲಿರುವ ಸರ್ಕಾರಿ ಶಾಲೆ, ಆದಿವಾಲ ಗ್ರಾಮದಲ್ಲಿ ಇರುವ ಕಿರಿಯ ಪ್ರಾಥಮಿಕ ಶಾಲೆ, ಗೋಪಾಲಪುರ ಶಾಲೆ ಹೀಗೆ ತಮಿಳು ಭಾಷಿಕರು ಹೆಚ್ಚಿರುವ ಕಡೆಗಳಲ್ಲಿ ಶಾಲೆಗಳನ್ನು ಪ್ರಾರಂಭಿಸಿತು. ಇನ್ನು ಹೊಸಪೇಟೆಯ ಪರಿಸರದಲ್ಲಿ ಟಿ.ಬಿ.ಡ್ಯಾಂನ ಮುಂಭಾಗದಲ್ಲಿ, ಹೆಚ್.ಪಿ.ಸಿಯಲ್ಲಿ ತಮಿಳು ಮಾಧ್ಯಮ ಶಾಲೆಗಳನ್ನು ಪ್ರಾರಂಭಿಸಿ ತಮಿಳು ಭಾಷೆಯ ಕಲಿಕೆಗೆ ಪ್ರೋತ್ಸಾಹಿಸಲಾಯಿತು.

ತಮಿಳು ಮಾಧ್ಯಮದ ಭಾಷೆಯ ಶಾಲೆಗಳನ್ನು ಪ್ರಾರಂಭಿಸಿದ್ದು ಒಂದು ಹಂತವಾದರೆ. ಇನ್ನೊಂದು ಹಂತದಲ್ಲಿ ಮಾಧ್ಯಮಿಕ ಹಂತದ ಶಿಕ್ಷಣಕ್ಕಾಗಿ ತಮ್ಮ ಪ್ರದೇಶಗಳನ್ನು ಬಿಟ್ಟು ಬೇರೆ ಪ್ರದೇಶಗಳಿಗೆ ಹೋಗಬೇಕಾಗಿತ್ತು. ಅದರೊಂದಿಗೆ ಕನ್ನಡ ಮಾಧ್ಯಮ ಪ್ರೌಢಶಾಲೆಯ ನಂತರದಲ್ಲಿ ಕನ್ನಡ ಮಾಧ್ಯಮ ಶಾಲಾ-ಕಾಲೇಜುಗಳಲ್ಲಿ ತಮಿಳನ್ನು ಆಯ್ಕೆವಿಷಯವಾಗಿ ಕಲಿಯಬೇಕಿತ್ತು. ಹೀಗೆ ತಮಿಳು ಭಾಷೆಯ ಕಲಿಕೆಯು ಪ್ರಾಥಮಿಕ ಹಂತದಲ್ಲಿ ಮಾತ್ರ ಇದ್ದು ಪ್ರೌಢ ಹಂತದಲ್ಲಿ ಕನ್ನಡವನ್ನು ಕಲಿಯಬೇಕಿತ್ತು.

ಪ್ರಸ್ತುತ ಹಿರಿಯೂರು ಪರಿಸರದಲ್ಲಿ ಎರಡೂ ತಮಿಳು ಮಾಧ್ಯಮ ಶಾಲೆಗಳು ಚಾಲ್ತಿಯಲ್ಲಿವೆ. ಅವುಗಳು ವಿದ್ಯಾರ್ಥಿಗಳ ಕೊರತೆಯಿಂದಾಗಿ ಮುಚ್ಚುವ ಹಂತಕ್ಕೆ ಬಂದಿವೆ. ಇನ್ನು ಹೊಸಪೇಟೆ ಪರಿಸರದಲ್ಲಿ ಇದ್ದ ಎರಡು ಶಾಲೆಗಳಲ್ಲಿ ಹೆಚ್.ಪಿ.ಸಿ ಶಾಲೆಯನ್ನು ವಿದ್ಯಾರ್ಥಿಗಳ ಕೊರತೆಯಿಂದ ಮುಚ್ಚಲಾಗಿದೆ. ಇನ್ನು ಹೊಸಪೇಟೆ ಡ್ಯಾಂನಲ್ಲಿರುವ ತಮಿಳು ಮಾಧ್ಯಮದ ಶಾಲೆಯಲ್ಲಿಯೂ ವಿದ್ಯಾರ್ಥಿಗಳ ಕೊರತೆ ಇದೆ.

ಹಿರಿಯೂರುನಲ್ಲಿರುವ ಹುಳಿಯಾರು ರಸ್ತೆಯಲ್ಲಿರುವ ತಮಿಳು ಮಾಧ್ಯಮ ಶಾಲೆಯ ವಿದ್ಯಾರ್ಥಿಗಳ ಸಂಖ್ಯೆ:

| **ವರ್ಷ** | **ವಿದ್ಯಾರ್ಥಿಗಳ ಸಂಖ್ಯೆ** |
|---|---|
| ೨೦೧೪ | ೨೫ ವಿದ್ಯಾರ್ಥಿಗಳು |
| ೨೦೧೫ | ೨೨ ವಿದ್ಯಾರ್ಥಿಗಳು |
| ೨೦೧೬ | ೨೬ ವಿದ್ಯಾರ್ಥಿಗಳು |
| ೨೦೧೭ | ೧೭ ವಿದ್ಯಾರ್ಥಿಗಳು |
| ೨೦೧೮ | ೧೪ ವಿದ್ಯಾಥಿಗಳು |

ಹೀಗೆ ಕಳೆದ ಐದು ವರ್ಷಗಳ ವಿದ್ಯಾರ್ಥಿಗಳ ದಾಖಲಾತಿಯನ್ನು ಗಮನಿಸಿದಾಗ ವಿದ್ಯಾರ್ಥಿಗಳ ಸಂಖ್ಯೆಯು ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿದೆ. ಇದೇ ಪರಿಸ್ಥಿತಿಯನ್ನು ಶಿವಮೊಗ್ಗ, ಚಿಕ್ಕಮಗಳೂರು ಪ್ರದೇಶಗಳಲ್ಲಿರುವ ತಮಿಳು ಮಾಧ್ಯಮ ಶಾಲೆಗಳಲ್ಲಿಯೂ ಕಂಡುಬಂದಿದೆ. ಅಂದರೆ ತಮಿಳು ಮಾಧ್ಯಮ ಶಾಲೆಯಲ್ಲಿ ವಿದ್ಯಾರ್ಥಿಗಳ ಸಂಖ್ಯೆಯು ಕಡಿಮೆಯಾಗಿರುವುದರಿಂದ ಆಡಳಿತ ವರ್ಗವು ಅವುಗಳನ್ನು ಮುಚ್ಚಿರುವುದಾಗಿ ತಿಳಿದುಬರುತ್ತದೆ. ಹೀಗೆ ತಮಿಳು ಭಾಷಿಕರು ತಮಿಳು ಮಾಧ್ಯಮ ಶಾಲೆಗಳ ಕುರಿತು ಆಸಕ್ತಿ ತೋರದೇ ಇರುವುದು ಕಂಡುಕೊಳ್ಳಲಾಗಿದೆ.

**ಹಿರಿಯೂರು ಮತ್ತು ಹೊಸಪೇಟೆ ಪರಿಸರದಲ್ಲಿ ತಮಿಳು ಭಾಷಿಕ ಮಕ್ಕಳ ಅಧ್ಯಯನದ ಭಾಷೆ:**

ಉನ್ನತ ವರ್ಗದ ಮಕ್ಕಳು ಅಧ್ಯಯನ ಮಾಡುತ್ತಿರುವ ಭಾಷೆ:

| ಕ್ರ ಸಂ. | ಹೆಸರು | ಜಾತಿ | ತರಗತಿ | ಅಧ್ಯಯನದ ಭಾಷೆ |
|---|---|---|---|---|
| ೦೧ | ಅರುಣ್ | ಮೊದಲಿಯಾರ್ | ೪ನೇ ತರಗತಿ | ಇಂಗ್ಲಿಷ್ |
| ೦೨ | ನಿತಿನ್ | ಗೌಂಡರ್ | ೫ನೇ ತರಗತಿ | ಇಂಗ್ಲಿಷ್ |
| ೦೩ | ಉಲ್ಲಾಸ್ | ಚೆಟ್ಟಿಯಾರ್ | ೫ನೇ ತರಗತಿ | ಇಂಗ್ಲಿಷ್ |
| ೦೪ | ವಿಜಯ | ಗೌಂಡರ್ | ೭ನೇ ತರಗತಿ | ಇಂಗ್ಲಿಷ್ |
| ೦೫ | ವಸಂತ | ಗೌಂಡರ್ | ೭ನೇ ತರಗತಿ | ಕನ್ನಡ |
| ೦೬ | ಹರೀಶ್ | ಮೊದಲಿಯಾರ್ | ೭ನೇ ತರಗತಿ | ಇಂಗ್ಲಿಷ್ |
| ೦೭ | ಮಂಜುನಾಥ | ಗೌಂಡರ್ | ೯ನೇ ತರಗತಿ | ಇಂಗ್ಲಿಷ್ |
| ೦೮ | ವಿಜಯಲಕ್ಷ್ಮಿ | ಮೊದಲಿಯಾರ್ | ೧೦ನೇ ತರಗತಿ | ಇಂಗ್ಲಿಷ್ |
| ೦೯ | ವಿಶ್ವನಾಥನ್ | ಗೌಂಡರ್ | ೯ನೇ ತರಗತಿ | ಇಂಗ್ಲಿಷ್ |
| ೧೦ | ಗಿರೀಶ್ | ಮೊದಲಿಯಾರ್ | ೧೦ನೇ ತರಗತಿ | ಇಂಗ್ಲಿಷ್ |

ತಮಿಳು ಭಾಷಿಕ ಮಕ್ಕಳ ಶಾಲಾ ಆವರಣದಲ್ಲಿ ಅಧ್ಯಯನ ಭಾಷೆಯನ್ನು ಕಂಡುಕೊಳ್ಳಲು ಮುಖ್ಯವಾಗಿ ಉನ್ನತವರ್ಗ ಮತ್ತು ಕೆಳವರ್ಗಗಳ ವಿದ್ಯಾರ್ಥಿಗಳು ಎಂದು ವರ್ಗೀಕರಿಸಿಕೊಂಡು ಅವರುಗಳು ಕಲಿಯುತ್ತಿರುವ ಭಾಷೆಯ ಕುರಿತ ಮಾಹಿತಿ ಸಂಗ್ರಹಿಸಲಾಗಿದೆ. ಇಲ್ಲಿ ವರ್ಗವಾಗರು ಮಾಹಿತಿ ಸಂಗ್ರಹಿಸಲು ಕಾರಣವೆಂದರೆ ಸಾಮಾಜಿಕ ಭಿನ್ನಾಂಶಗಳಿಂದ ಮಕ್ಕಳ ಶಿಕ್ಷಣ ಕಲಿಕೆಯ ಮೇಲಾಗಿರುವ ಪರಿಣಾಮಗಳನ್ನು ಕಂಡುಕೊಳ್ಳಲು ಹೀಗೆ ಮಾಡಿಕೊಂಡಿದೆ. ಉನ್ನತ ವರ್ಗಗಳು ಎಂದು ಗೌಂಡರ್, ಮೊದಲಿಯಾರ್, ಚೆಟ್ಟಿಯಾರ್ ಸಮುದಾಯಗಳನ್ನು ಗುರುತಿಸಿಕೊಳ್ಳಲಾಗಿದೆ. ಇವರುಗಳು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ತಮಿಳು ಸಮುದಾಯಗಳಲ್ಲಿ ಪ್ರಬಲವಾಗಿರುವುದರಿಂದ ಗುರುತಿಸಿಕೊಳ್ಳಲಾಗಿದೆ. ಇನ್ನು ಕೆಳವರ್ಗಗಳಲ್ಲಿ ಆದಿದ್ರಾವಿಡ, ಚಕ್ಕಳಿಯಾರ್, ಸೆಂಬಡವಾರ್, ವಡ್ಡಾರ್ ಇತರೆ ಸಮುದಾಯಗಳನ್ನು ಗುರುತಿಸಿಕೊಳ್ಳಲಾಗಿದೆ. ಇವರುಗಳು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಕೆಳಹಂತದಲ್ಲಿ ಇರುವುದರಿಂದ ಇವರನ್ನು ಕೆಳವರ್ಗಗಳು ಎಂದು ಗುರುತಿಸಿಕೊಳ್ಳಲಾಗಿದೆ.

ಈ ಮೇಲಿನ ಕೋಷ್ಠದಲ್ಲಿ ಉನ್ನತ ಜಾತಿಯ ಮಕ್ಕಳು ಅಧ್ಯಯನ ಮಾಡುವ ಭಾಷೆಯ ಕುರಿತು ಮಾಹಿತಿ ತಿಳಿಸುತ್ತದೆ. ಇಲ್ಲಿ ಬೇರೆ ಬೇರೆ ಜಾತಿಗೆ ಸೇರಿದ ಮಕ್ಕಳು ತಮ್ಮ ಅಧ್ಯಯನದ ಭಾಷೆಯನ್ನು ತಿಳಿಸಿದ್ದಾರೆ. ಗೌಂಡರ್, ಚೆಟ್ಟಿಯಾರ್, ಮೊದಲಿಯಾರ್ ಸಮುದಾಯದ ಮಕ್ಕಳು ಬಹುತೇಕರು ಇಂಗ್ಲಿಷ್ ಮಾಧ್ಯಮ ಭಾಷೆಯಲ್ಲಿ ಅಧ್ಯಯನ ಮಾಡುತ್ತಿರುವುದು ತಿಳಿಯುತ್ತದೆ. ಕೋಷ್ಠಕದಲ್ಲಿನ ಇಬ್ಬರು ಮಕ್ಕಳು ಕನ್ನಡವನ್ನು ಅಧ್ಯಯನ ಭಾಷೆಯಾಗಿ ಆಯ್ಕೆ ಮಾಡಿಕೊಂಡಿದ್ದಾರೆ.

ಕೆಳವರ್ಗದ ಮಕ್ಕಳು ಅಧ್ಯಯನ ಮಾಡುತ್ತಿರುವ ಭಾಷೆ:

| ಕ್ರಸಂ | ಹೆಸರು | ಜಾತಿ | ತರಗತಿ | ಅಧ್ಯಯನ ಭಾಷೆ |
|---|---|---|---|---|
| ೦೧ | ಮಣಿಕಂಠ | ಚಕ್ಕಲಿಯಾರ್ | ೫ನೇ ತರಗತಿ | ಕನ್ನಡ |
| ೦೨ | ಸೆಲ್ವಿ | ಆದಿದ್ರಾವಿಡ | ೫ನೇ ತರಗತಿ | ಕನ್ನಡ |
| ೦೩ | ರಾಮಸ್ವಾಮಿ | ಸೆಂಬಡವಾರ್ | ೭ನೇ ತರಗತಿ | ಕನ್ನಡ |
| ೦೪ | ಸುಬ್ಬುಲಕ್ಷ್ಮಿ | ಕಂಡರ್ | ೬ನೇ ತರಗತಿ | ಕನ್ನಡ |
| ೦೫ | ಮಣಿ | ಕಂಡರ್ | ೬ನೇ ತರಗತಿ | ಕನ್ನಡ |
| ೦೬ | ಗಣೇಶನ್ | ಆದಿದ್ರಾವಿಡ | ೮ನೇ ತರಗತಿ | ಕನ್ನಡ |
| ೦೭ | ನಿರ್ಮಲ | ನಾಡರ್ | ೮ನೇ ತರಗತಿ | ಕನ್ನಡ |
| ೦೮ | ಸಂತೋಷ | ಪಲ್ಲರ್ | ೧೦ನೇ ತರಗತಿ | ಕನ್ನಡ |
| ೧೦ | ಕುಮಾರ್ | ಆದಿದ್ರಾವಿಡ | ೧೦ನೇ ತರಗತಿ | ಕನ್ನಡ |

ಈ ಕೋಷ್ಟಕವು ಕೆಳವರ್ಗದವರ ಮಕ್ಕಳು ಅಧ್ಯಯನದ ಮಾಧ್ಯಮವನ್ನು ಕುರಿತು ತಿಳಿಸುತ್ತದೆ. ವಿವಿಧ ತರಗತಿ ವಿದ್ಯಾರ್ಥಿಗಳು ಕನ್ನಡ ಕಲಿಕಾ ಮಾಧ್ಯಮದಲ್ಲಿ ಅಧ್ಯಯನ ಮಾಡುತ್ತಿದ್ದಾರೆ. ಇವರು ಕನ್ನಡವನ್ನು ಅಧ್ಯಯನ ಭಾಷೆಯಾಗಿ ಮಾಡಿಕೊಂಡಿರುವುದಕ್ಕೆ ಹಲವು ಸಾಮಾಜಿಕ ಕಾರಣಗಳನ್ನು ಇವರ ಪೋಷಕರು ನೀಡುತ್ತಾರೆ. ಅಂದರೆ ತಮಿಳು ಮಾಧ್ಯಮದಲ್ಲಿ ಓದಿದರೆ ಕರ್ನಾಟಕದಲ್ಲಿ ಓದಿಯೂ ಉಪಯೋಗವಿಲ್ಲದಂತಾಗುತ್ತದೆ. ಅಲ್ಲದೆ ತಮಿಳು ಭಾಷೆಯಿಂದ ನಮ್ಮ ನಡುವೆ ಸಂಪರ್ಕ ಸಾಧಿಸಲು ಸಾಧ್ಯವಾಗುತ್ತದೆ. ಆದರೆ ಕನ್ನಡದ ಪರಿಸರದಲ್ಲಿ ಪಾಲ್ಗೊಳ್ಳಲು ಸಾಧ್ಯವಾಗುವುದಿಲ್ಲ. ಇದರಿಂದ ನಮ್ಮ ಮಕ್ಕಳು ಇಲ್ಲಿ ಜೀವನ ನಡೆಸಲು ಸಾಧ್ಯವಾಗುವುದಿಲ್ಲ. ಹೀಗಾಗಿ ನಾವು ಕನ್ನಡವನ್ನು ಮಾಧ್ಯಮ ಭಾಷೆಯಾಗಿ ಆಯ್ಕೆ ಮಾಡಿಕೊಂಡಿದ್ದೇವೆ ಎನ್ನುತ್ತಾರೆ. ಇವರು ಕನ್ನಡ ಮಾಧ್ಯಮದಲ್ಲಿ ಅದರಲ್ಲೂ ಸರ್ಕಾರಿ ಶಾಲೆಗಳಲ್ಲಿ ಓದಿಸುತ್ತಿರುವುದಕ್ಕೆ ಸಾಮಾಜಿಕ ಮತ್ತು ಆರ್ಥಿಕ ಕಾರಣವು ಇದೆ. ಅಂದರೆ ಇವರುಗಳು ಕೂಲಿ ಕೆಲಸ ಮಾಡುವುದರಿಂದಾಗಿ ಖಾಸಗಿ ಶಾಲೆಗಳಲ್ಲಿ ಓದಿಸಲು ಸಾಧ್ಯವಾಗುತ್ತಿಲ್ಲ.

ಹೀಗೆ ಉನ್ನತವರ್ಗದವರು ಇಂಗ್ಲಿಷ್ ಮತ್ತು ಕನ್ನಡ ಭಾಷೆಯನ್ನು ಶಾಲಾ ಆವರಣಗಳಲ್ಲಿ ಅಧ್ಯಯನ ಭಾಷೆಯಾಗಿ ಮಾಡಿಕೊಂಡಿದ್ದಾರೆ. ಆದರೆ ಕೆಳವರ್ಗದವರು ಕನ್ನಡವನ್ನು ಅಧ್ಯಯನ ಭಾಷೆಯಾಗಿ ಆಯ್ಕೆ ಮಾಡಿಕೊಂಡಿದ್ದಾರೆ. ಇದು ಇವರ ಸಾಮಾಜಿಕ ಮತ್ತು ಆರ್ಥಿಕ ಸ್ಥಾನವನ್ನು ತೋರಿಸುತ್ತದೆ. ಅಲ್ಲದೇ ಕನ್ನಡದ ಪರಿಸರದ ಪ್ರಭಾವವು ಇವರ ಮೇಲೆ ಪರೋಕ್ಷವಾಗಿ ಭಾಷಿಕ ನಿಯಂತ್ರಣ ಮಾಡುತ್ತಿದೆ. ಅದು ಆಡಳಿತ ಕಾರಣಕ್ಕೆ, ಮತ್ತೊಂದು ಸಾಮಾಜಿಕವಾಗಿ ಕನ್ನಡದ ಪರಿಸರದಲ್ಲಿ ಜೀವನ ನಡೆಸಲು ಮತ್ತು ಮಕ್ಕಳು ಮುಂದಿನ ಜೀವನದ ದೃಷ್ಟಿಯಿಂದಾಗಿ ಕನ್ನಡವನ್ನು ಅಧ್ಯಯನ ಭಾಷೆಯಾಗಿ ರೂಢಿಸಿಕೊಂಡಿದ್ದಾರೆ. ಇದರಿಂದ ನಾಲ್ಕನೇ ತಲೆಮಾರಿನ ಮಕ್ಕಳು ನೇರವಾಗಿ ಕನ್ನಡ–ತಮಿಳು ದ್ವಿಭಾಷಿಕತೆಯಲ್ಲಿ ಬೆಳೆಯುತ್ತಾರೆ. ಮನೆಯಲ್ಲಿ ತಮಿಳು ಬಳಕೆ ಮಾಡುತ್ತಾರೆ. ಶಾಲೆ ಆವರಣದಲ್ಲಿ ಕನ್ನಡವನ್ನು ಭಾಷೆಯನ್ನು ಮತ್ತು ಶಾಲಾ ಆವರಣದಲ್ಲಿ ಕನ್ನಡ ಬಳಕೆ ಮಾಡುತ್ತಾರೆ.

**೭.೨. ಭಾಷಾದ್ವೀಪ: ಶಿಕ್ಷಣದ ಸಮಸ್ಯೆಗಳು ಮತ್ತು ಸವಾಲುಗಳು**

ತಮಿಳು ಭಾಷಿಕರು ಕನ್ನಡ ಪರಿಸರದಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡಿದ್ದಾರೆ. ಕನ್ನಡವನ್ನು ಅಧಿಕೃತ ಭಾಷೆಯಾಗಿ ಬಳಸುವ ಪರಿಸರದಲ್ಲಿ ತಮಿಳು ಭಾಷೆಯನ್ನು ಕಲಿಸುವುದಕ್ಕೆ ಇರುವ ಶೈಕ್ಷಣಿಕ ಸಮಸ್ಯೆಗಳು ಮತ್ತು ಇವರು ಜೀವನದಲ್ಲಿ ತಮಿಳು ಭಾಷೆಯನ್ನು ಕಲಿಯುವುದರಿಂದ ಕನ್ನಡ ಪರಿಸರದಲ್ಲಿ ಎದುರಿಸುವ ಸವಾಲುಗಳು ಯಾವುವು ಎಂಬುದನ್ನು ತಿಳಿಯಬೇಕಿದೆ. ಇಲ್ಲಿ ಸಮಸ್ಯೆಗಳು ಎಂದರೆ ತಮಿಳು ಭಾಷಿಕರು ಕನ್ನಡದ ಪರಿಸರದಲ್ಲಿ ತಮಿಳು ಭಾಷಿಕ ಶಿಕ್ಷಣವನ್ನು ಪಡೆಯುವಲ್ಲಿ ಎದುರಿಸುವ ತೊಂದರೆಗಳನ್ನು ಸಮಸ್ಯೆಗಳು ಎಂದು ಗುರುತಿಸಿಕೊಳ್ಳಲಾಗಿದೆ. ಹಾಗೆಯೇ ಸವಾಲುಗಳು ಎಂದರೆ ತಮಿಳು ಭಾಷಿಕರು ತಮಿಳು ಭಾಷೆಯನ್ನು ಶೈಕ್ಷಣಿಕ ಪರಿಸರದಿಂದ ಕಲಿತ ಮೇಲೆ ಕನ್ನಡದ ಪರಿಸರದಲ್ಲಿ ಅವರಿಗೆ ಇರುವ ಸಾಮಾಜಿಕ, ಜೀವನದ ತೊಂದರೆಗಳನ್ನು ಸವಾಲುಗಳು ಎಂದು ಗುರುತಿಸಿಕೊಳ್ಳಲಾಗಿದೆ.

**ಸಮಸ್ಯೆಗಳು:** ಕನ್ನಡದ ಪರಿಸರದಲ್ಲಿ ತಮಿಳು ಭಾಷಿಕರು ವಾಸಿಸುವ ಪ್ರದೇಶಗಳಲ್ಲಿ ತಮಿಳು ಮಾಧ್ಯಮ ಶಾಲೆಗಳು ಇಲ್ಲದೇ ಇರುವುದು ಸಮಸ್ಯೆಯಾಗಿದೆ. ಒಂದು ವೇಳೆ ದೊರೆತರು ಅದು ಕೇವಲ ಪೂರ್ವ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳವರೆಗೆ ಮಾತ್ರವಾಗಿದೆ. ಆದ್ದರಿಂದ ಮುಂದಿನ ಹಂತದಲ್ಲಿ ತಮಿಳು ಭಾಷೆಯ ಶಿಕ್ಷಣ ಪಡೆಯುವುದು ಸಮಸ್ಯೆಯಾಗಿದೆ. ತಮಿಳು ಶಿಕ್ಷಣ ಪಡೆಯಲು ಇವರು ಶಾಲೆಗಳಲ್ಲಿ ತಮಿಳು ಮಾಧ್ಯಮದ ಬೋಧನೆಗೆ ಸಂಪನ್ಮೂಲ, ಭಾಷಾ ಶಿಕ್ಷಕರ ಕೊರತೆ, ಇದರೊಂದಿಗೆ ಪಠ್ಯ ಪುಸ್ತಕಗಳ ಕೊರತೆ ಇದೆ. ಇದರಲ್ಲಿ ಸಮಯಕ್ಕೆ ಸರಿಯಾಗಿ ಪಠ್ಯಪುಸ್ತಕಗಳು ತಲುಪದೇ ಇರುವುದು ಸಮಸ್ಯೆಯಾಗಿದೆ. ಕನ್ನಡದ ಪರಿಸರದಲ್ಲಿ ತಮಿಳು ಕಲಿಯುವುದು ಕೆಲವು ಸಂದರ್ಭಗಳಲ್ಲಿ ಸಮಸ್ಯೆಯಾಗಿದೆ. ಅಂದರೆ ಇಲ್ಲಿ ಕನ್ನಡ ಮತ್ತು ತಮಿಳು ಭಾಷೆಯಲ್ಲಿ ಕೆಲವು ಧ್ವನಿಗಳ ವ್ಯತ್ಯಾಸವಿರುವುದು ಕಾಣಬಹುದು ಇವುಗಳ ಬಳಕೆಯಲ್ಲಿ ವ್ಯತ್ಯಾಸದಿಂದಾಗಿ ಕನ್ನಡ–ತಮಿಳು ಭಾಷೆಯನ್ನು ಬಳಕೆಯಲ್ಲಿ ವ್ಯತ್ಯಯಗೊಂಡು ಕಲಿಕೆಯಲ್ಲಿ ಸಮಸ್ಯೆಯಾಗುತ್ತದೆ. ಹೀಗೆ ವಿವಿಧ ರೀತಿಯಲ್ಲಿ ಸಮಸ್ಯೆಗಳನ್ನು ಕಾಣಬಹುದು.

**ಸವಾಲುಗಳು:** ಕನ್ನಡ ಪರಿಸರದಲ್ಲಿ ಮೊದಲ ತಲೆಮಾರಿನವರು ತಮಿಳು ಭಾಷೆಯನ್ನು ಅಧ್ಯಯನ ಭಾಷೆಯಾಗಿ ಕಲಿತರು. ಆಗ ಅವರಿಗೆ ಕನ್ನಡ ಪರಿಸರದಲ್ಲಿ ತಮ್ಮ ನೆಲೆಯನ್ನು ಕಂಡುಕೊಳ್ಳುವ ಬಗ್ಗೆ ಅಷ್ಟಾಗಿ ಸ್ಪಷ್ಟನೆ ಇರಲಿಲ್ಲ. ಈಗ ಅವರುಗಳು ತಮಿಳು ಶೈಕ್ಷಣಿಕತೆಯಿಂದ ಆಗುವ ತೊಂದರೆಗಳು ಅರಿವಿಗೆ ಬಂದಿವೆ. ಅಂದರೆ ತಮಿಳು ಭಾಷೆಯನ್ನು ಕಲಿಯುವಾಗ ಕೆಲವು ಸಮಸ್ಯೆಗಳನ್ನು ಎದುರಿಸಿದರೆ. ಕಲಿತ ಮೇಲೆ ಮತ್ತೊಂದು ತರಹದ ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಅಂದರೆ ತಮಿಳು ಮಾಧ್ಯಮದಲ್ಲಿ ಶಿಕ್ಷಣವನ್ನು ಪಡೆದವರು ಕನ್ನಡದ ಪರಿಸರದಲ್ಲಿ ತಮಿಳು ಭಾಷೆಯ ಆಧಾರದ ಮೇಲೆ ಉದ್ಯೋಗವನ್ನು ಕಂಡುಕೊಳ್ಳುವುದು ಕಷ್ಟಸಾಧ್ಯವಾಗಿದೆ. ಕರ್ನಾಟಕದಲ್ಲಿ ಪ್ರತಿ ಉದ್ಯೋಗಕ್ಕೂ ಇತ್ತೀಚೆಗೆ ಕನ್ನಡವನ್ನು ಕಡ್ಡಾಯ ಮಾಡುತ್ತಿರುವಾಗ ತಮಿಳು ಮಾಧ್ಯಮದಲ್ಲಿ ಅಧ್ಯಯನ ಮಾಡಿ ಯಾವುದೇ ಉದ್ಯೋಗ ಸಿಗದೇ ಇರುವುದು ಇವರಿಗೆ ಸವಾಲುಗಳಾಗಿ ಪರಿಣಮಿಸಿದೆ. ಇನ್ನು ಕನ್ನಡದ ಪರಿಸರದಲ್ಲಿ ಸಾಮಾಜಿಕವಾಗಿ ಪಾಲ್ಗೊಳ್ಳುವ ಪರಿಸ್ಥಿತಿಯು ಇದೇ ರೀತಿಯದ್ದಾಗಿದೆ. ಆದ್ದರಿಂದ ಶೈಕ್ಷಣಿಕವಾಗಿ ತಮಿಳು ಭಾಷೆಯನ್ನು ಪಡೆದುಕೊಂಡು ನಂತರ ಕನ್ನಡ ಬಳಕೆಯಿಂದ ದೂರವಾದರೆ ಕನ್ನಡ ಸಾಮಾಜಿಕ ಪರಿಸರದಲ್ಲಿ ಪಾಲ್ಗೊಳ್ಳುವುದು ಕಷ್ಟಸಾಧ್ಯವಾಗುತ್ತದೆ. ಇದು ಮಾರುಕಟ್ಟೆ, ವ್ಯಾವಹಾರಿಕ ಪ್ರದೇಶಗಳಲ್ಲಿ ಸವಾಲಾಗಿ ಪರಿಣಮಿಸುತ್ತದೆ. ಹೀಗೆ ಬೇರೆ ಬೇರೆ ಸವಾಲುಗಳನ್ನು ಕಾಣಬಹುದು.

### ೭.೨.೧. ತಮಿಳು ಮಕ್ಕಳಿಗೆ ಕನ್ನಡ ಕಲಿಕೆಗಿರುವ ಪ್ರೇರಕಾಂಶಗಳು:

ತಮಿಳು ಭಾಷಿಕರ ಮಕ್ಕಳು ತಮಿಳು ಭಾಷೆಯನ್ನು ಮನೆಯ ಆವರಣದಲ್ಲಿ ಬಳಸಿದರೂ ಬಾಹ್ಯ ಪರಿಸರದಲ್ಲಿ ಕನ್ನಡವನ್ನು ಬಳಸಬೇಕಾಗುತ್ತದೆ. ಮೂರು ಮತ್ತು ನಾಲ್ಕನೇ ತಲೆಮಾರಿನವರು ಕನ್ನಡದ ಪರಿಸರದೊಂದಿಗೆ ಹೆಚ್ಚು ಹೊಂದಿಕೊಂಡಿರುವ ಕಾರಣ ಇವರು ಕನ್ನಡವನ್ನು ತಮ್ಮ ಜೀವನ ಬಳಕೆಯ ಪ್ರಮಾಣವನ್ನು ಹೆಚ್ಚಿಸಿದ್ದಾರೆ. ಅಂದರೆ ಶಿಕ್ಷಣದ ಭಾಗವಾಗಿ, ಬಾಹ್ಯ ಪರಿಸರದಲ್ಲಿ ಬಳಕೆಗಾಗಿ,

ಸ್ನೇತಹಿತರೊಂದಿಗೆ, ನೆರೆಯವರೊಂದಿಗೆ ಕನ್ನಡವನ್ನು ಬಳಸುತ್ತಾರೆ. ಹೀಗೆ ಕನ್ನಡವನ್ನು ಬಳಕೆಯಲ್ಲಿ ಕನ್ನಡ ಪರಿಸರವು ಒತ್ತಡವನ್ನು ಹೇರುತ್ತಿದೆ. ಇವುಗಳನ್ನು ಹೊರತಾದಂತೆ ಕನ್ನಡವನ್ನು ಕಲಿಯಲು ಪ್ರೇರಕವಾಗಿರುವ ಅಂಶಗಳೆಂದರೆ: * ಸುಲಭವಾಗಿ ಶೈಕ್ಷಣಿಕ ಸವಲತ್ತುಗಳು ದೊರೆಯುತ್ತವೆ.: ತಮಿಳು ಭಾಷೆಗೆ ಹೋಲಿಸಿಕೊಂಡರೆ ಕನ್ನಡದಲ್ಲಿ ಸುಲಭವಾಗಿ ಶೈಕ್ಷಣಿಕ ಸವಲತ್ತುಗಳು ದೊರೆಯುತ್ತವೆ. ಅಂದರೆ ಶಾಲೆಗಳು ಹೆಚ್ಚಿದ್ದು, ಆ ಮೂಲಕ ಕಲಿಕೆಗೆ ಸಹಾಯಕವಾಗುತ್ತದೆ. * ಕನ್ನಡದ ಪರಿಸರದಲ್ಲಿ ಬದುಕುತ್ತಿರುವುದರಿಂದ ಕನ್ನಡವನ್ನು ಕಲಿಯುವುದು ಅವಶ್ಯಕವಾಗಿದೆ. * ಉದ್ಯೋಗ ಮತ್ತು ಸಾಮಾಜಿಕ ಭದ್ರತೆಯ ದೃಷ್ಟಿಯಿಂದಾಗಿ ಕನ್ನಡವನ್ನು ಕಲಿಯುವುದು ಅನಿವಾರ್ಯವಾಗಿದೆ. ಹಾಗಾಗಿ ಕನ್ನಡವನ್ನು ಅವಲಂಭಿಸಬೇಕಾಗಿದೆ. ಭಾಷಿಕವಾಗಿ ಕನ್ನಡ ಪರಿಸರದಲ್ಲಿ ಪಾಲ್ಗೊಳ್ಳಲು, ಕನ್ನಡಿಗರೊಂದಿಗೆ ಜೀವಿಸಲು ಕನ್ನಡವನ್ನು ಕಲಿಯುವ ಸಂದರ್ಭಗಳು ಹೆಚ್ಚಿವೆ. ತಮಿಳು ಭಾಷಿಕರು ಕನ್ನಡದ ಪರಿಸರದಲ್ಲಿ ವ್ಯಾವಹಾರಿಕ ಸಂದರ್ಭಗಳಲ್ಲಿ ಭಾಗವಹಿಸುವ ಕಾರಣದಿಂದಾಗಿ ಕನ್ನಡವನ್ನು ಕಲಿತು ಬಳಕೆ ಮಾಡುವ ಸಂದರ್ಭಗಳು ಹೆಚ್ಚು ಹೀಗಾಗಿ ಕನ್ನಡವನ್ನು ಅರ್ಥಿಕ ಚಟುವಟಿಕೆಗಳ ಕಾರಣಕ್ಕಾಗಿ ಕನ್ನಡವನ್ನು ಕಲಿಯಬೇಕಾಗುತ್ತದೆ. ಇನ್ನು ಕನ್ನಡದ ಪರಿಸರದಲ್ಲಿ ಸಾಂಸ್ಕೃತಿಕವಾಗಿ ತಮಿಳು ಭಾಷಿಕರು ಬೆರೆತು ಹೋಗಿರುವುದರಿಂದ ಇವರುಗಳು ನೆರೆಯವರಿಂದ ಕನ್ನಡದ ಆಚರಣೆ, ಸಂಪ್ರದಾಯಗಳು, ಹಬ್ಬಗಳ ಕುರಿತು ತಿಳಿದುಕೊಳ್ಳುತ್ತಿದ್ದಾರೆ. ಇಲ್ಲಿ ಸಾಂಸ್ಕೃತಿಕ ಕೊಡುಕೊಳ್ಳುವಿಕೆಯು ರೂಢಿಯಾಗಿದ್ದು. ಇದರಿಂದಾಗಿ ಕನ್ನಡವನ್ನು ಬಳಕೆ ಮಾಡಲು ಸಾಂಸ್ಕೃತಿಕ ಮತ್ತು ಧಾರ್ಮಿಕ ಪರಿಸರಗಳು ಪ್ರೇರೇಪಿಸುತ್ತವೆ. ಒಟ್ಟಾರೆಯಾಗಿ ಕನ್ನಡವನ್ನು ಕಲಿಯಲು ತಮಿಳು ಭಾಷಿಕರಿಗೆ ಬೇರೆ ಬೇರೆ ಸಂದರ್ಭ, ಪರಿಸರ, ವ್ಯಾವಹಾರಿಕ ಚಟುವಟಿಕೆಗಳು, ಜೀವನ ಸಂದರ್ಭಗಳು ಪ್ರೇರಕಾಂಶಗಳಾಗಿರುವುದು ಕಾಣಬಹುದು. ಈ ದೃಷ್ಟಿಯಿಂದಾಗಿ ಹಿರಿಯೂರು ಮತ್ತು ಹೊಸಪೇಟೆ ಪರಿಸರದ ತಮಿಳು ಭಾಷಿಕರು ಕನ್ನಡವನ್ನು ಕಲಿತಿರುವುದು ಕಾಣಬಹುದು.

### ೭.೩. ಸಮಾಜದ ಇತರೆ ಪರಿಸರಗಳಲ್ಲಿ ತಮಿಳು ಭಾಷಿಕ ಮಕ್ಕಳು ಬಳಸುವ ಭಾಷೆ

ತಮಿಳು ಭಾಷೆಯ ಮಕ್ಕಳು ಕನ್ನಡ ಇತರೆ ಪರಿಸರಗಳಾದ ಮಾರುಕಟ್ಟೆ, ಅಂಗಡಿಗಳು, ಕ್ರೀಡಾಂಗಣಗಳಲ್ಲಿ, ಸ್ನೇಹಿತರೊಂದಿಗೆ ಯಾವ ಭಾಷೆಗಳನ್ನು ಬಳಸುತ್ತಾರೆ. ಈ ಮೂಲಕ ತಮಿಳು ಭಾಷಿಕರ ಮಕ್ಕಳು ಬೇರೆ ಯಾವ ಭಾಷೆಗಳನ್ನು ಬಳಸುವ ಕೌಶಲ್ಯಗಳನ್ನು ಪಡೆಯುತ್ತಾರೆ. ಈ ಮೂಲಕ ಬೇರೆ ಭಾಷೆಗಳನ್ನು ಏಕೆ ಬಳಕೆ ಮಾಡುತ್ತಾರೆ ಎಂಬುದನ್ನು ತಿಳಿಯುವುದಾಗಿದೆ. ಇಲ್ಲಿ ತಮಿಳು ಭಾಷಿಕರ ಮಕ್ಕಳು ಯಾವ ಯಾವ ಕಾರಣಕ್ಕೆ ಬೇರೆ ಬೇರೆ ಪರಿಸರಗಳಲ್ಲಿ ಪಾಲ್ಗೊಳ್ಳುತ್ತಾರೆ ಎಂಬ ಅಂಶಗಳನ್ನು ತಿಳಿಯಬಹುದು.

ಸಾಮಾನ್ಯವಾಗಿ ತಮಿಳು ಭಾಷಿಕರ ಮಕ್ಕಳು ಮನೆಯಲ್ಲಿ ಮತ್ತು ಭಾಷಾದ್ವೀಪದ ಆವರಣದಲ್ಲಿ ತಮಿಳು ಭಾಷೆಯನ್ನು ಬಳಕೆ ಮಾಡುತ್ತಾರೆ. ಇನ್ನುಳಿದಂತ ಪರಿಸರಗಳಲ್ಲಿ ತಮಿಳು ಬಳಕೆ ಮಾಡುವುದು ಕಡಿಮೆ. ಬಾಹ್ಯ ಪರಿಸರಗಳಾದ ಶಾಲೆ, ಸ್ನೇಹಿತರೊಂದಿಗೆ, ಅಂಗಡಿ, ಕ್ರೀಡಾಂಗಣ ಇತರೆಡೆಗಳಲ್ಲಿ ಯಾವ ಭಾಷೆಯನ್ನು ಬಳಕೆ ಮಾಡುತ್ತಾರೆ ಎಂಬುದನ್ನು ಇಲ್ಲಿ ತಿಳಿಯಲಾಗಿದೆ..

| ಕ್ರಸಂ | ವಯಸ್ಸು | ಶಾಲೆಯಲ್ಲಿ | | | ಸ್ನೇಹಿತರೊಂದಿಗೆ | | | ಅಂಗಡಿಗಳಲ್ಲಿ | | ಕ್ರೀಡಾಂಗಣ | |
|---|---|---|---|---|---|---|---|---|---|---|---|
| | | ಕ | ತ | ಇ | ಕ | ತ | | ಕ | ತ | ಕ | ತ |
| 01 | 8–10 | ✓ | | | ✓ | | | ✓ | | ✓ | |
| 02 | 10–15 | ✓ | | | ✓ | | | ✓ | | ✓ | |
| 03 | 15–20 | ✓ | | ✓ | ✓ | | ✓ | ✓ | | ✓ | |

ಈ ಕೋಷ್ಟವು ತಮಿಳು ಭಾಷಿಕರ ೮ ರಿಂದ ೨೦ ವರ್ಷದ ಮಕ್ಕಳನ್ನು ಮೂರು ರೀತಿಯಲ್ಲಿ ವಿಭಾಗಿಸಿ ಶಾಲೆಯಲ್ಲಿ, ಸ್ನೇಹಿತರೊಂದಿಗೆ, ಅಂಗಡಿಗಳಲ್ಲಿ ಮತ್ತು ಕ್ರೀಡಾಂಗಣದಲ್ಲಿ ಬಳಸುವ ಭಾಷೆಯನ್ನು ಕುರಿತು ಮಾಹಿತಿಯನ್ನು ತಿಳಿಸುತ್ತದೆ. ಇಲ್ಲಿ ಎಲ್ಲಾ ವಯಸ್ಸಿನ ಮಕ್ಕಳು ತಮಿಳು ಭಾಷೆಯನ್ನು ಬಿಟ್ಟು ಕನ್ನಡವನ್ನು ಬಳಕೆ ಮಾಡುತ್ತೇವೆ ಎಂದು ಮಾಹಿತಿ ನೀಡುತ್ತಾರೆ. ಶಾಲೆಗಳಲ್ಲಿ ಸಾಮಾನ್ಯವಾಗಿ ಕನ್ನಡವನ್ನು ಹೆಚ್ಚು ಬಳಕೆ ಮಾಡುವುದರಿಂದ ಕನ್ನಡವನ್ನು ಬಳಸುತ್ತೇವೆ. ಎಂದು ತಿಳಿಸುತ್ತಾರೆ. ಇನ್ನು ಸ್ನೇಹಿತರೊಂದಿಗೆ ಕನ್ನಡವನ್ನು ಬಳಸುತ್ತೇವೆ. ಆದರೆ ತಮಿಳು ಭಾಷಿಕ ಸ್ನೇಹಿತರು ಸಿಕ್ಕರೆ ಅವರೊಂದಿಗೆ ತಮಿಳಿನಲ್ಲಿ ಮಾತನಾಡುತ್ತೇವೆ ಎನ್ನುತ್ತಾರೆ. ಇನ್ನು ಅಂಗಡಿಗಳಲ್ಲಿ ಸಾಮಾನ್ಯವಾಗಿ ಕನ್ನಡವನ್ನು ಬಳಕೆ ಮಾಡುತ್ತೇವೆ. ಇನ್ನು ಕ್ರೀಡಾಂಗಣದಲ್ಲಿ ಅಥವಾ ಆಟವಾಡುವ ಸಮಯದಲ್ಲಿ ಎಂದು ಕೇಳಲಾದ ಪ್ರಶ್ನೆಗೆ ಆಟದ ಸಮಯದಲ್ಲಿ ಕನ್ನಡವನ್ನು ಬಳಕೆ ಮಾಡುತ್ತೇವೆ ಎಂದು ಹೇಳುತ್ತಾರೆ. ಇಲ್ಲಿ ಎಲ್ಲಾ ಪರಿಸರಗಳಲ್ಲಿ ಕನ್ನಡವನ್ನು ಬಳಕೆ ಮಾಡುವುದು ಕಂಡುಬರುತ್ತದೆ. ನಾಲ್ಕನೇ ತಲೆಮಾರಿನ ಮಕ್ಕಳಾಗಿರುವ ಇವರುಗಳು ಶಿಕ್ಷಣದಿಂದಾಗಿ ಮತ್ತು ಸಾಮಾಜಿಕವಾಗಿ ಮೇಲೆ ಗಮನಿಸಿದಂತೆ ವಿವಿಧ ಪರಿಸರಗಳಲ್ಲಿ ಪಾಲ್ಗೊಳ್ಳುವುದರಿಂದಾಗಿ ಇವರುಗಳು ಕನ್ನಡವನ್ನು ಕಲಿತು, ಬಳಕೆ ಮಾಡುವುದು ಸಾಮಾನ್ಯವಾಗಿದೆ. ಆದರೆ ಇವರುಗಳು ತಮಿಳು ಭಾಷಾದ್ವೀಪಗಳ ಆವರಣದಲ್ಲಿ ಅಂದರೆ ತಮ್ಮ ಮನೆಗಳ ಮತ್ತು ಸುತ್ತಲಿನ ಪರಿಸರದಲ್ಲಿ ತಮಿಳು ಭಾಷೆಯನ್ನ ಹೆಚ್ಚು ಬಳಸುತ್ತಾರೆ. ಹೀಗೆ ತಮಿಳು ಭಾಷಿಕರ ಮಕ್ಕಳು ತಮಿಳು ಪರಿಸರಗಳನ್ನು ಬಿಟ್ಟು ಕನ್ನಡದ ಪರಿಸರದಲ್ಲಿ ಕನ್ನಡವನ್ನು ಬಳಕೆ ಮಾಡುವುದು ಕಂಡುಕೊಳ್ಳಲಾಗಿದೆ. ಕೆಲವು ಖಾಸಗಿ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳು ಶಾಲೆಗಳಲ್ಲಿ ಮತ್ತು ಶಾಲೆಯ ಆವರಣದಲ್ಲಿ ಸ್ನೇಹಿತರೊಂದಿಗೆ ಮಾತನಾಡುವಾಗ ಇಂಗ್ಲಿಷ್ ಬಳಸುತ್ತೇವೆ ಎಂದು ತಿಳಿಸುತ್ತಾರೆ. ಇದಕ್ಕೆ ಶಾಲೆಯಲ್ಲಿ ಇಂಗ್ಲಿಷ್ ಭಾಷೆ ಬಳಸಬೇಕೆಂಬ ನಿಯಮ ಇದಕ್ಕೆ ಕಾರಣವಾಗಿದೆ ಎಂದು ತಿಳಿಸುತ್ತಾರೆ. ಆದರೆ ಬಹುತೇಕ ವಿದ್ಯಾರ್ಥಿಗಳು ಹೊರ ಆವರಣದಲ್ಲಿ ಕನ್ನಡವನ್ನು ಬಳಕೆ ಮಾಡುತ್ತಾರೆ.

ಒಟ್ಟಾರೆಯಾಗಿ ಭಾಷಾದ್ವೀಪಗಳ ತಮಿಳು ಮಕ್ಕಳ ಶಿಕ್ಷಣವು ಕನ್ನಡ ಪರಿಸರದಲ್ಲಿ ಇದ್ದರೂ ಕನ್ನಡ ಸಾಮಾಜಿಕ, ಆರ್ಥಿಕ ಮತ್ತು ಜಾಗತೀಕರಣದ ಪ್ರಭಾವದಿಂದಾಗಿ ಮಕ್ಕಳ ಅಧ್ಯಯನದ ಭಾಷೆಯು ಕನ್ನಡ ಮತ್ತು ಇಂಗ್ಲಿಷ್ ಬಳಕೆಯಲ್ಲಿದೆ. ಅಲ್ಲದೆ ಕೆಳವರ್ಗದ ತಮಿಳು ಭಾಷಿಕ ಮಕ್ಕಳು ಕನ್ನಡವನ್ನು ಅಧ್ಯಯನದ ಭಾಷೆಯಾಗಿಸಿಕೊಂಡಿದ್ದಾರೆ. ಇದಕ್ಕೆ ಅವರ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಯೂ ಕಾರಣವಾಗಿದೆ. ಇನ್ನು ಕನ್ನಡದ ಪರಿಸರದಲ್ಲಿ ಶೈಕ್ಷಣಿಕ ಸಮಸ್ಯೆಗಳು ಮತ್ತು ಸವಾಲುಗಳು ಕಂಡರೂ ಅವುಗಳ ಸ್ವರೂಪವು

ಮತ್ತು ಪರಿಹಾರವು ಏಕ ಮುಖವಾಗಿಲ್ಲ. ಇಲ್ಲಿ ಶೈಕ್ಷಣಿಕ ಸಮಸ್ಯೆಗಳು ತಮಿಳು ಶಿಕ್ಷಣಕ್ಕೆ ಸಂಬಂಧಿಸಿದಂತೆ ಇದ್ದರೂ ಸವಾಲುಗಳು ಸರ್ಕಾರ ಮಟ್ಟದಲ್ಲಿ ಚರ್ಚಿಸುವ ಮತ್ತು ಅವುಗಳನ್ನು ಪರಿಹರಿಸುವಂತವಾಗಿವೆ. ಕನ್ನಡದ ಸಾಮಾಜಿಕ ಪರಿಸರದಲ್ಲಿ ತಮಿಳರ ಜೀವನದ ವ್ಯಾವಹಾರಿಕ ಚಟುವಟಿಕೆಗಳು ಸವಾಲಾಗಿ ಕಂಡುಬರುತ್ತವೆ. ಇದರೊಂದಿಗೆ ಕನ್ನಡ ಭಾಷೆಯನ್ನು ಕಲಿಯಲು ಕನ್ನಡ ಪರಿಸರದ ಒತ್ತಡವನ್ನು ಕಾಣಬಹುದು. ಇದು ಸಾಮಾಜಿಕ ಮತ್ತು ಆರ್ಥಿಕ ನೆಲೆಯಲ್ಲಿದೆ. ಇದರೊಂದಿಗೆ ತಮಿಳು ಭಾಷಿಕ ಮಕ್ಕಳು ಸಮಾಜದ ಇತರೆ ಪರಿಸರದಲ್ಲಿ ತಮಿಳು ಮಕ್ಕಳು ಕನ್ನಡದ ಪರಿಸರದ ಪ್ರಭಾವದಿಂದಾಗಿ ಕನ್ನಡವನ್ನು ಬಳಕೆ ಮಾಡುತ್ತಿದ್ದಾರೆ.

* * *

## ಅಧ್ಯಾಯ: ಎಂಟು

# ಸಮಾರೋಪ

ಬೃಹತ್ ಭಾಷಿಕ ಪರಿಸರದಲ್ಲಿ ವಾಸವಾಗಿರುವ ವಲಸಿಗ ಭಾಷಿಕರು ತಮ್ಮ ಭಾಷೆ ಮತ್ತು ಸಂಸ್ಕೃತಿಯನ್ನು ಉಳಿಸಿಕೊಳ್ಳಲು ತಮ್ಮ ಸಮುದಾಯಗಳಲ್ಲಿ ಗುಂಪು ಗುಂಪುಗಳಾಗಿ ನೆಲೆಸುತ್ತಾರೆ. ಈ ರೀತಿಯ ಭಾಷಿಕರ ಗುಂಪುಗಳೇ ಭಾಷಾದ್ವೀಪಗಳಾಗಿರುತ್ತವೆ. ಈ ರೀತಿಯ ಭಾಷಾದ್ವೀಪಗಳಲ್ಲಿ ಏಕೆ ಇವರು ತಮ್ಮ ಭಾಷೆಗಳಲ್ಲಿಯೇ ಜೀವನವನ್ನು ರೂಪಿಸಿಕೊಂಡಿರುತ್ತಾರೆ. ಇದಕ್ಕೆ ಸಾಮಾಜಿಕ ಒತ್ತಡಗಳೇನು, ಬಾಹ್ಯ ಪರಿಸರದ ಭಾಷೆಯನ್ನು ಯಾವ ಪರಿಸರದಲ್ಲಿ ಬಳಸುತ್ತಾರೆ. ಬಾಹ್ಯ ಪರಿಸರದಲ್ಲಿ ಕನ್ನಡ ಅಥವಾ ಬೇರೆ ಭಾಷೆಗಳನ್ನು ಬಳಸಲು ಇರುವ ಕಾರಣಗಳೇನು, ಬೃಹತ್ ಭಾಷಿಕ ಪರಿಸರಗಳಲ್ಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಸ್ಥಾನವೇನು, ಬಾಹ್ಯ ಪರಿಸರದ ಭಾಷೆಯಿಂದ ಭಾಷಾದ್ವೀಪಗಳ ಭಾಷೆಯಲ್ಲಾಗಿರುವ ಬದಲಾವಣೆಗಳು ಹಾಗೂ ಭಾಷಾದ್ವೀಪಗಳಲ್ಲಿರುವ ಭಾಷೆಯಿಂದ ಬೃಹತ್ ಭಾಷಿಕ ಪರಿಸರಗಳಲ್ಲಾಗಿರುವ ಪರಿಣಾಮಗಳೇನು. ಹಾಗೆಯೇ ಭಾಷಾದ್ವೀಪಗಳಲ್ಲಿರುವ ಮಕ್ಕಳ ಶೈಕ್ಷಣಿಕತೆಯು ಬಾಹ್ಯ ಪರಿಸರದ ಒತ್ತಡಕ್ಕೆ ಸಿಲುಕಿ, ಎದುರಿಸುತ್ತಿರುವ ಸಮಸ್ಯೆಗಳು ಹಾಗೂ ಸವಾಲುಗಳನ್ನು ಕಂಡುಕೊಳ್ಳುವುದು ಈ ಅಧ್ಯಯನದ ಉದ್ದೇಶವಾಗಿತ್ತು. ಅದರಂತೆ ಈ ಅಧ್ಯಯನದ ಫಲಿಗಳನ್ನು ಕಂಡುಕೊಂಡಿದೆ.

ಭಾಷಾದ್ವೀಪದ ವ್ಯಾಖ್ಯಾನವನ್ನು ಭೌಗೋಳಿಕ 'ದ್ವೀಪ'ದ ವ್ಯಾಖ್ಯಾನದಂತೆ ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಭಾಷಾದ್ವೀಪದ ಸಾಧ್ಯತೆಗಳು ಪ್ರದೇಶದಿಂದ ಪ್ರದೇಶಕ್ಕೆ, ಭಾಷೆಯಿಂದ ಭಾಷೆಗೆ ಬದಲಾಗುತ್ತಾ ಹೋಗುತ್ತವೆ. ಮತ್ತು ಭಾಷಾದ್ವೀಪಗಳು ಕೇವಲ ಭಾಷಾದ್ವೀಪಗಳಾಗದೆ, ಅವುಗಳು ಹಲವು ಸಂದರ್ಭಗಳಲ್ಲಿ ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ, ಆರ್ಥಿಕ ದ್ವೀಪಗಳಾಗಿಯೂ ರೂಪುಗೊಂಡಿರುತ್ತವೆ. ಅಂದರೆ ಅಲ್ಲಿ ಈ ಎಲ್ಲಾ ಹಂತಗಳಲ್ಲಿ ಬಾಹ್ಯ ಅಂಶಗಳನ್ನು ತನ್ನೊಳಗೆ ಸೇರಿಸಿಕೊಳ್ಳದೇ ತಮ್ಮದೇ ನೆಲೆಯಲ್ಲಿ ಜೀವನ ಮತ್ತು ಸಂಸ್ಕೃತಿಯನ್ನು ಕಟ್ಟಿಕೊಂಡಿರುತ್ತವೆ. ಅಂತಹ ಹಲವು ಉದಾಹರಣೆಗಳನ್ನು ಕರ್ನಾಟಕದಲ್ಲಿ ಕಾಣಬಹುದು. ಉದಾ: ಮುಂಡಗೋಡಿನ ಟಿಬೇಟಿಯನ್ ಕ್ಯಾಂಪ್‌ಗಳು ಇಂದಿಗೂ ತನ್ನದೇ ಜೀವನ, ರಾಜಕೀಯ, ಧಾರ್ಮಿಕ, ಶೈಕ್ಷಣಿಕ ಹಾಗೂ ಆರ್ಥಿಕತೆಯಲ್ಲಿ ಬದುಕುತ್ತಿದ್ದಾರೆ. ಕರ್ನಾಟಕದಲ್ಲಿ ಭಾಷೆ, ಪ್ರದೇಶ, ಸಂಸ್ಕೃತಿಗೆ ಅನುಸಾರವಾಗಿ ಬೇರೆ ಬೇರೆ ಭಾಷಾದ್ವೀಪಗಳನ್ನು ಗುರುತಿಸಬಹುದು. ಹಾಗೆಯೇ ತಮಿಳು ಭಾಷೆ ಮತ್ತು ಸಂಸ್ಕೃತಿಯನ್ನು ಆಧರಿಸಿ ತಮಿಳು ಭಾಷಾದ್ವೀಪಗಳನ್ನು ಗುರುತಿಸಿದೆ.

ತಮಿಳು ಭಾಷಾದ್ವೀಪಗಳ ಒಟ್ಟು ಸ್ವರೂಪವನ್ನು ಅಧ್ಯಯನದಿಂದ ಕಂಡುಕೊಂಡಿರುವಂತೆ ತಮಿಳು ಭಾಷಾದ್ವೀಪಗಳು ಕೇವಲ ಒಂದು ನಿರ್ದಿಷ್ಟ ಕಾಲದಲ್ಲಿ ರೂಪುಗೊಂಡವಲ್ಲ. ವಿವಿಧ ಕಾರಣಗಳಿಗೆ

ಅನುಸಾರವಾಗಿ ಚರಿತ್ರೆಯ ಕಾಲಘಟ್ಟಗಳಲ್ಲಿ ತಮಿಳು ಭಾಷಿಕರು ಗುಂಪುಗುಂಪುಗಳಾಗಿ ವಲಸೆ ಬಂದು ವಾಸವಾಗಿರುವುದು ಗುರುತಿಸಿದೆ. ಈ ರೀತಿಯ ಗುಂಪುಗಳು ಬ್ರಿಟಿಷರ ಕಾಲದಲ್ಲಿಯೂ ಕರ್ನಾಟದಲ್ಲಿ ನೆಲೆಗೊಂಡಿದ್ದಾರೆ. ನಂತರದಲ್ಲಿಯೂ ತಮಿಳುನಾಡಿನಿಂದ ಬಂದು ಕರ್ನಾಟಕದ ಹಲವು ಪ್ರದೇಶಗಳಲ್ಲಿ ನೆಲೆಸಿ ತಮ್ಮ ಭಾಷೆ ಮತ್ತು ಸಮುದಾಯವನ್ನು ಕಟ್ಟಿಕೊಂಡು ತಮಿಳು ಭಾಷಾದ್ವೀಪಗಳಾಗಿವೆ.

ತಮಿಳು ಭಾಷಿಕರು ಭಾಷಾದ್ವೀಪಗಳಲ್ಲಿ ಏಕಭಾಷಿಕರಾಗಿ, ದ್ವಿಭಾಷಿಕರಾಗಿ ಮತ್ತು ಬಹುಭಾಷಿಕರಾಗಿದ್ದಾರೆ. ಭಾಷಾದ್ವೀಪಗಳಲ್ಲಿ ಏಕಭಾಷಿಕರಾಗಿ ಉಳಿದುಕೊಳ್ಳಲು ಸಾಮಾನ್ಯವಾಗಿ ಬಾಹ್ಯ ಪರಿಸರಗಳ ಒತ್ತಡವಾಗಲಿ ಅಥವಾ ಬೇರೊಂದು ಭಾಷಿಕ ಪರಿಸರದೊಂದಿಗೆ ವ್ಯವಹರಿಸುವ ಸಂದರ್ಭ ಒದಗದೇ ಇರುವಾಗ ಇವರು ಏಕಭಾಷಿಕರಾಗಿ ಉಳಿದುಕೊಳ್ಳುತ್ತಾರೆ. ಇವರಲ್ಲಿ ಮಹಿಳೆಯರು ಹೆಚ್ಚಾಗಿ  ಏಕಭಾಷಿಕರಾಗಿ ಉಳಿದುಕೊಂಡಿದ್ದಾರೆ. ಇನ್ನು ದ್ವಿಭಾಷಿಕರು ಮತ್ತು ಬಹುಭಾಷಿಕರು ತಮ್ಮ ಅವಶ್ಯಕತೆಗಳಿಗೆ ಅನುಗುಣವಾಗಿ ಬೇರೆ ಭಾಷಿಕ ಪರಿಸರದೊಂದಿಗೆ ಸಾಮಾಜಿಕ, ಆರ್ಥಿಕ ಕಾರಣಗಳಿಗಾಗಿ ಬೇರೆ ಬೇರೆ ಭಾಷೆಗಳನ್ನು ಕಲಿತಿದ್ದಾರೆ.

ತಮಿಳು ಭಾಷಾದ್ವೀಪಗಳಲ್ಲಿನ ಮೂರು ಮತ್ತು ನಾಲ್ಕನೇ ತಲೆಮಾರಿನ ಮಕ್ಕಳು ಶಿಕ್ಷಣ ಮತ್ತು ಸಾಮಾಜಿಕ ಕಾರಣದಿಂದಾಗಿ ದ್ವಿಭಾಷಿಕರು ಮತ್ತು ಬಹುಭಾಷಿಕರಾಗಿದ್ದಾರೆ. ಶಿಕ್ಷಣದಲ್ಲಿ ಕನ್ನಡ, ಇಂಗ್ಲಿಷ್, ತಮಿಳು, ಹಿಂದಿ ಭಾಷೆಗಳನ್ನು ಕಲಿಯುವ ಮೂಲಕ ಬಹುಭಾಷಿಕರಾಗಿದ್ದಾರೆ.

ಕರ್ನಾಟದ ತಮಿಳು ಭಾಷಾದ್ವೀಪಗಳು ಭೌಗೋಳಿಕ ಸ್ವರೂಪವನ್ನು ಗುರುತಿಸಬಹುದು. ಅಂದರೆ ಈ ಭಾಷಾದ್ವೀಪಗಳು ಭೌಗೋಳಿಕವಾಗಿ ನಗರದ ಹೊರಭಾಗದಲ್ಲಿ ಅಥವಾ ಬೃಹತ್‌ನಗರಗಳಲ್ಲಿ ಗುಂಪುಗುಂಪುಗಳಾಗಿ ವಾಸಮಾಡುತ್ತಿದ್ದಾರೆ. ಈ ರೀತಿಯ ನಗರಗಳು ನದಿ ದಡದಲ್ಲಿ ಅಥವಾ ಆಧುನಿಕ ಬೃಹತ್ ಕಟ್ಟಗಳ ಪ್ರದೇಶಗಳಲ್ಲಿವೆ.

ಕರ್ನಾಟದಲ್ಲಿನ ತಮಿಳು ಭಾಷಾದ್ವೀಪಗಳು ಸಾಮಾನ್ಯವಾಗಿ ಸಾಮಾಜಿಕ ಭಿನ್ನಾಂಶವಾದ ಜಾತಿ, ಧರ್ಮವನ್ನು ಆಧರಿಸಿ ಗುಂಪು ಗುಂಪುಗಳಾಗಿ ರಚನೆಗೊಂಡಿವೆ. ಅಂದರೆ ಒಂದು ಜಾತಿಗೆ ಸೇರಿದ ಭಾಷಿಕರು ಒಂದು ಕಡೆ ವಾಸಮಾಡುತ್ತಾರೆ. ಇದು ಸಾಮಾಜಿಕ ಸ್ಥಾನಮಾನವನ್ನು ಅನುಸರಿಸಿ ವರ್ಗೀಕರಣಗೊಂಡು ರಚನೆಯಾಗಿವೆ. ಉದಾ: ಗೌಡ ಜಾತಿಗೆ ಸೇರಿದ ಜನರು ಹೊಸಪೇಟೆಯ ನಿಶಾನಿ ಕ್ಯಾಂಪ್‌ನಲ್ಲಿ ವಾಸವಗಿದ್ದಾರೆ. ಹಿರಿಯೂರಿನಲ್ಲಿ ಭಗವತಿ ಎಂಬ ದೇವಾಲಯದ ಹತ್ತಿರ ವಾಸವಗಿರುವುದು ಕಂಡುಬರುತ್ತದೆ.

ಅಧ್ಯಯನ ಉದ್ದೇಶಗಳಲ್ಲಿ ತಿಳಿಸಿದಂತೆ ಭಾಷಾದ್ವೀಪಗಳಲ್ಲಿನ ತಮಿಳು ಭಾಷಿಕ ರಚನೆ ಮತ್ತು ಬಳಕೆಯನ್ನು ಗಮನಿಸಿದಾಗ ತಮಿಳು ಭಾಷೆಯ ಸಂಬಂಧವಾಚಕಗಳಲ್ಲಿ ಮೂಲ ತಮಿಳಿನಲ್ಲಿ ಬಳಕೆಯಲ್ಲಿರುವಂತೆಯೇ ಬಳಕೆ ಮಾಡುತ್ತಿರುವುದು ಕಾಣಬಹುದು. ಈ ತಮಿಳು ಭಾಷೆಯ ಸಂಬಂಧವಾಚಕಗಳಲ್ಲಿ ಸಾಮಾಜಿಕ ಪ್ರಭೇದಗಳನ್ನು ಗುರುತಿಸಿದೆ. ಉದಾಹರಣೆಗೆ ಗೌಂಡರ್ ಸಮುದಾಯದವರು ಗಂಡನಿಗೆ 'ಮಾವ' ಎಂದು ಸಂಬೋಧಿಸುತ್ತಾರೆ. ಆದರೆ ಕೆಳವರ್ಗದ ಕೆಲವು ಸಮುದಾಯಗಳು ವೀಟುಕಾರರ್, ಅಯ್ಯ  ಎಂದು ಗೌರವ ಸೂಚಕವಾಗಿ ಸಂಬೋಧಿಸುತ್ತಾರೆ. ಭಾಷಾಬಳಕೆಯ ಹಿನ್ನೆಲೆಯಲ್ಲಿ ಸಂಬಂಧವಾಚಕಗಳು ಪಲ್ಲಟವಾಗಿರುವುದನ್ನು ಕಂಡುಕೊಳ್ಳಲಾಗಿದೆ. ಪ್ರಾಥಮಿಕ ಹಂತದ ರಕ್ತಸಂಬಂಧವಾಚಕಗಳು ನೇರವಾಗಿ ಎಲ್ಲರಲ್ಲೂ ಬಳಕೆಯಲ್ಲಿವೆ. ಎರಡನೆ ಹಂತದ ರಕ್ತಸಂಬಂಧವಾಚಕಗಳು ಇತ್ತೀಚಿನ ತಲೆಮಾರಿನ ಮಕ್ಕಳಲ್ಲಿ

ಬಳಕೆಯಲಿಲ್ಲ. ಉದಾಹರಣೆಗೆ 'ಸಗಲನ್', 'ಕೊಳಂದನಾರ್' ಈ ರೀತಿಯ ಎರಡನೇ ಹಂತದ ರಕ್ತದ ಸಂಬಂಧಗಳು ಇತ್ತೀಚಿನ ತಲೆಮಾರುಗಳಲ್ಲಿ ಬಳಕೆಯಲ್ಲಿಲ್ಲ. ಇವುಗಳು ಬಳಕೆಯಿಂದ ಜಾರಿಹೋಗುತ್ತಿವೆ. ಕನ್ನಡದ ಪರಿಸರದಲ್ಲಿ ತಮಿಳಿನ ಕೆಲವು ಸಂಬಂಧವಾಚಕಗಳು ಬಳಕೆಯಲ್ಲಿವೆ. ಉದಾಹರಣೆಗೆ 'ಮಚ್ಚ' 'ಮಾಪ್ಪೈ,' 'ತಂಗಚ್ಚಿ' ಇವುಗಳು ಶಾಲಾ-ಕಾಲೇಜು, ವ್ಯಾಪಾರಿ ಸ್ಥಳಗಳಲ್ಲಿ, ಕೆಲಸದ ಸಂದರ್ಭಗಳಲ್ಲಿ ಪ್ರಜ್ಞಾಪೂರ್ವಕವಾಗಿ ಬಳಕೆಯಾದರೆ ಇನ್ನು ಕೆಲವು ಸಂದರ್ಭಗಳಲ್ಲಿ ಸಾಮಾನ್ಯವಾಗಿ ಅನುಕರಣೆಯಿಂದ ಅಥವಾ ಅಪ್ರಜ್ಞಾಪೂರ್ವಕವಾಗಿ ಬಳಕೆಯಾಗುತ್ತಿರುವುದನ್ನು ಕಂಡುಕೊಳ್ಳಲಾಗಿದೆ.

ತಮಿಳು ಭಾಷಿಕರು ಕನ್ನಡದ ಪರಿಸರದಲ್ಲಿ ರಾಜಕೀಯ ಮತ್ತು ಸಾಮಾಜಿಕವಾಗಿ ಸ್ಥಾನವನ್ನು ಪಡೆದರೂ ಕೆಲವು ಸಂದರ್ಭಗಳಲ್ಲಿ ಅಂದರೆ ಧಾರ್ಮಿಕ ಸಂದರ್ಭಗಳಲ್ಲಿ, ಜಾತಿ ಕಾರಣಕ್ಕಾಗಿ ಅವರುಗಳನ್ನು ಬೇರೆಯಾಗಿ ಕಾಣುತ್ತಾರೆ. ಇನ್ನು ಸಾಂಪ್ರದಾಯಿಕ ಕೆಲವು ಆಚರಣೆಗಳು ಜಾತಿಯ ಹೆಸರಿನಲ್ಲಿ ಬಳಸಲ್ಪಡುತ್ತಿವೆ.

ಕನ್ನಡದ ಪರಿಸರದಲ್ಲಿ ತಮಿಳು ಭಾಷಿಕರು ಸಾಮಾಜಿಕವಾಗಿ ಬಾಹ್ಯ ಪರಿಸರದಲ್ಲಿ ಭಾಗವಹಿಸುವ ಕಾರಣಕ್ಕೆ, ಆರ್ಥಿಕ ಚಟುವಟಿಕೆಗಳ ಕಾರಣಕ್ಕೆ ಬೇರೆ ಭಾಷೆಗಳನ್ನು ಕಲಿಯುತ್ತಾರೆ. ಇವುಗಳ ಬಳಕೆಯ ಸಂದರ್ಭಗಳು ಮತ್ತು ಬಳಕೆಯ ಆವರಣಗಳು ಸೀಮಿತ ಆವರಣಗಳಲ್ಲಿ ಮಾತ್ರವಾಗಿರುತ್ತದೆ. ಈ ರೀತಿಯಾಗಿ ಬಾಹ್ಯ ಪರಿಸರದಲ್ಲಿ ತಮಿಳರು ಮತ್ತು ಕನ್ನಡಿಗರು ಮಾತನಾಡಿದರೆ ನುಡಿಜಿಗಿತ ಮತ್ತು ನುಡಿಬೆರಕೆ ಪ್ರಸಂಗಗಳು ಕಂಡುಬರುತ್ತವೆ.

ಕನ್ನಡದ ಪರಿಸರದಲ್ಲಿ ತಮಿಳು ಭಾಷಿಕರು ವ್ಯವಹಾರಕ್ಕಾಗಿ ಕನ್ನಡವನ್ನು ಬಳಕೆ ಮಾಡುತ್ತಿದ್ದಾರೆ. ಇದಕ್ಕೆ ಆರ್ಥಿಕ ಚಟುವಟಿಕೆಗಳಿಂದ ತಮಿಳು ಭಾಷಿಕರು ದುಡಿಮೆ ಮಾಡುತ್ತಿರುವುದರಿಂದಾಗಿ ಕನ್ನಡವನ್ನು ಬಳಸಿ ವ್ಯವಹರಿಸುವುದು ಮತ್ತು ತಮ್ಮ ಆರ್ಥಿಕತೆಯನ್ನು ರೂಢಿಸಿಕೊಳ್ಳುವುದು ಕಾಣಬಹುದು. ಹಾಗೆ ಬಹುಪಾಲು ಜನರು ತಮ್ಮ ದಿನನಿತ್ಯದ ಜೀವನದಲ್ಲಿ ವ್ಯಾವಹಾರಿಕ ಭಾಷೆಯಾಗಿ ಕನ್ನಡವನ್ನು ಬಳಕೆ ಮಾಡುತ್ತಿದ್ದಾರೆ.

ತಮಿಳು ಭಾಷಿಕರನ್ನು ಸಾಂಸ್ಕೃತಿಕ ಅಭಿವ್ಯಕ್ತಿ ಕಾರಣಗಳಿಗಾಗಿ ಕನ್ನಡಿಗರ ಪರಿಸರದಲ್ಲಿ ವಿಶೇಷವಾಗಿ ಗುರುತಿಸಲ್ಪಡುತ್ತಾರೆ. ಆದರೆ ಇವುಗಳು ನಾಲ್ಕನೇ ತಲೆಮಾರಿನಲ್ಲಿ ಬಳಕೆಯಿಂದ ಕೈಬಿಡಲಾಗುತ್ತಿದೆ. ಬಹುತೇಕ ಆಚರಣೆಗಳು ಬಾಹ್ಯ ಪರಿಸರದ ಒತ್ತಡ ಮತ್ತು ಆಧುನಿಕರಣದಿಂದಾಗಿ ಕಳೆದುಕೊಳ್ಳುತ್ತಿದ್ದಾರೆ.

ತಮಿಳು ಭಾಷಿಕರು ಬಳಕೆಯಲ್ಲಿರುವ ನಾಮಪದಗಳು ಅವರ ಮೂಲ ಸಂಸ್ಕೃತಿಯನ್ನು ಮತ್ತು ಸಾಮಾಜಿಕತೆಯನ್ನು ಅಭಿವ್ಯಕ್ತಿಗೊಳಿಸುತ್ತವೆ. ಆದರೆ ನಾಲ್ಕನೇ ತಲೆಮಾರಿನ ಜನರು ಇವುಗಳಿಂದ ದೂರವಾಗಿದ್ದಾರೆ. ಅಂದರೆ ನಾಮಪದಗಳು ಕನ್ನಡದ ಪರಿಸರದಲ್ಲಿ ಬಳಕೆಯಲ್ಲಿರುವ ನಾಮಪದಗಳನ್ನು ಬಳಕೆ ಮಾಡುತ್ತಾರೆ. ಕನ್ನಡ ಪರಿಸರದ ಪ್ರಭಾವವು ಇರಬಹುದು.

ಸಂಖ್ಯಾವಾಚಕಗಳು ಇತರೆ ಭಾಷಾಂಶಗಳನ್ನು ತಮಿಳು ಭಾಷಿಕರು ಬಳಕೆ ಮಾಡುತ್ತಾರೆ. ಆದರೆ ಎರಡು ಮತ್ತು ಮೂರನೇ ತಲೆಮಾರಿನವರು ಇವುಗಳನ್ನು ತಮಿಳಿನಲ್ಲಿಯೇ ಹೆಚ್ಚು ಬಳಕೆ ಮಾಡುತ್ತಾರೆ. ಆದರೆ ನಾಲ್ಕನೇ ತಲೆಮಾರಿನವರು(ಮಕ್ಕಳು) ಇವುಗಳನ್ನು ಕನ್ನಡ ಅಥವಾ ಇಂಗ್ಲಿಷ್ ಭಾಷೆಯಲ್ಲಿ ಬಳಕೆ ಮಾಡುತ್ತಾರೆ. ಇದಕ್ಕೆ ಕಾರಣ ಕನ್ನಡದ ಪರಿಸರದಲ್ಲಿ ಶಿಕ್ಷಣ ಪಡೆಯುತ್ತಿರುವುದರಿಂದಾಗಿ ಇವರುಗಳು ಹೀಗೆ ಬಳಕೆ ಮಾಡುತ್ತಾರೆ.

ವ್ಯಾವಹಾರಿಕ ನೆಲೆಗಳಲ್ಲಿ ಅಂದರೆ ಸಾಮಾನ್ಯವಾಗಿ ವ್ಯಾಪಾರ ಮತ್ತು ಸಂಪರ್ಕಗಳಲ್ಲಿ ತಮಿಳು ಭಾಷಿಕರು ಕನ್ನಡಿಗರೊಂದಿಗೆ ಮುಕ್ತವಾಗಿದ್ದಾರೆ. ಜ್ಞಾನಾತ್ಮಕ ನೆಲೆಯಲ್ಲಿ ಅಂದರೆ ಸ್ಥಳೀಯ ಕೃತಿ, ಕೌಶಲ್ಯಯುತ ಕೆಲಸಗಳನ್ನು ನಿರ್ವಹಿಸುವಾಗ ಕೆಲಸಗಳಲ್ಲಿನ ಜ್ಞಾನವನ್ನು ಕನ್ನಡಿಗರೊಂದಿಗೆ ಬೆರೆತು ಕನ್ನಡದಲ್ಲಿ ತಿಳಿದುಕೊಳ್ಳುತ್ತಾರೆ. ಆ ಮೂಲಕ ತಮಿಳು ಭಾಷಿಕರು ಕನ್ನಡಿಗರೊಂದಿಗೆ ಭಾಷಿಕವಾಗಿ ತೆರೆದುಕೊಂಡಿದ್ದಾರೆ. ಇದೇ ರೀತಿಯಲ್ಲಿ ಸಾಂಸ್ಕೃತಿಕ, ಧಾರ್ಮಿಕ ಆಚರಣೆಯ ಸಂದರ್ಭಗಳಲ್ಲಿ ತಿಳಿದುಕೊಳ್ಳಲು ಕನ್ನಡಿಗರೊಂದಿಗೆ ಅದೇ ರೀತಿಯಲ್ಲಿ ಸ್ಥಳೀಯ ಪರಿಸರದಲ್ಲಿ ರೂಢಿಯಲ್ಲಿರುವ ಕೆಲಸಗಳನ್ನು ಕಲಿಯುವಲ್ಲಿ ಮತ್ತು ಪಾಲ್ಗೊಳ್ಳುವಾಗ ಕನ್ನಡ ಭಾಷೆಯೊಂದಿಗೆ ಮುಕ್ತವಾಗಿದ್ದಾರೆ. ಹೀಗೆ ಜ್ಞಾನಾತ್ಮಕ ನೆಲೆಯಲ್ಲಿ ತಮಿಳರು ಕನ್ನಡದೊಂದಿಗೆ ಮುಕ್ತವಾಗಿ ತೆರೆದುಕೊಂಡಿದ್ದಾರೆ.

ತಮಿಳರು ಭಾಷಿಕವಾಗಿ ಪರಿವರ್ತನೆ ಆಗುತ್ತಿರುವುದನ್ನು ಕಂಡುಕೊಳ್ಳಲಾಗಿದೆ. ಅದು ವಿಶೇಷವಾಗಿ ವ್ಯಾವಹಾರಿಕ ಮತ್ತು ಶಿಕ್ಷಣದ ನೆಲೆಯಲ್ಲಿ ಹೆಚ್ಚಿದೆ. ವ್ಯಾವಹಾರಿಕ ನೆಲೆಯಲ್ಲಿ ಕನ್ನಡ ಭಾಷೆಯನ್ನು ಒಪ್ಪಕೊಂಡರೆ, ಶಿಕ್ಷಣದಲ್ಲಿ ಇಂಗ್ಲಿಷ್ ಭಾಷೆಯನ್ನು ಒಪ್ಪಿಕೊಂಡಿದ್ದಾರೆ. ಇಲ್ಲಿ ಕನ್ನಡ ಮತ್ತು ಆಧುನಿಕ ಪರಿಸರದಲ್ಲಿ ಇರುವಂತೆಯೇ ಇಂಗ್ಲಿಷ್ ಮಾಧ್ಯಮವು ಮತ್ತು ಶಿಕ್ಷಣವು ತಮಿಳರಲ್ಲಿ ರೂಢಿಯಾಗುತ್ತಿರುವುದು ಕಂಡುಕೊಳ್ಳಲಾಗಿದೆ.

ತಮಿಳು ಮಕ್ಕಳ ಶಿಕ್ಷಣವು ಕನ್ನಡದ ಪರಿಸರದಲ್ಲಿ ಸಮಸ್ಯೆಯೂ ಹೌದು ಮತ್ತು ಕನ್ನಡದ ಪರಿಸರದಲ್ಲಿ ಸವಾಲು ಆಗಿದೆ. ಅಂದರೆ ತಮಿಳು ಮಕ್ಕಳು ತಮಿಳು ಭಾಷೆಯನ್ನು ಕಲಿಯುವಲ್ಲಿ ಆಸಕ್ತಿ ತೋರದೆ ಇರುವುದು ಕಾಣಬಹುದು. ಇದು ಬಾಹ್ಯ ಪರಿಸರದಲ್ಲಿ ಜೀವನ ಕಟ್ಟಿಕೊಳ್ಳಲು ತೊಂದರೆಯಾಗುತ್ತದೆ ಎಂಬ ಕಾರಣಕ್ಕಾಗಿ ಹೀಗೆ ರೂಢಿಗೊಂಡಿದೆ. ಹಾಗೆಯೇ ಕನ್ನಡದ ಪರಿಸರದಲ್ಲಿ ಉನ್ನತ ವರ್ಗದ ಮಕ್ಕಳು ಇಂಗ್ಲಿಷ್ ಮಾಧ್ಯಮವನ್ನು ಬಳಕೆ ಮಾಡಿದರೆ, ಕೆಳವರ್ಗದ ಮಕ್ಕಳು ಕನ್ನಡ ಮಾಧ್ಯಮವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಆದರೆ ತಮಿಳು ಮಕ್ಕಳು ಭಾಷಾದ್ವೀಪದ ಪರಿಸರವನ್ನು ಬಿಟ್ಟರೆ ಬೇರೆ ಬಾಹ್ಯ ಪರಿಸರದಲ್ಲಿ ಪೂರ್ಣ ಪ್ರಮಾಣದಲ್ಲಿ ಕನ್ನಡವನ್ನು ಬಳಕೆ ಮಾಡುತ್ತಾರೆ.

**ಅಧ್ಯಯನದ ಸಾಧ್ಯತೆಗಳು:**

* ಕರ್ನಾಟಕದಲ್ಲಿರುವ ಇತರೆ ಭಾಷಾದ್ವೀಪಗಳನ್ನು ಭಾಷಿಕರ ರಚನೆಯ ಹಿನ್ನಲೆಯಲ್ಲಿ ಅಧ್ಯಯನಕ್ಕೆ ಅವಕಾಶವಿದೆ.

* ತಮಿಳು ಭಾಷಾದ್ವೀಪಗಳಲ್ಲಿ ಪ್ರಾದೇಶಿಕ ಮತ್ತು ಸಾಮಾಜಿಕ ಭಾಷಾ ಪ್ರಭೇಧಗಳನ್ನು ಕುರಿತು ಅಧ್ಯಯನಕ್ಕೆ ಅವಕಾಶವಿದೆ.

* ಕನ್ನಡ ತಮಿಳು ಭಾಷಿಕರ ಬಳಕೆಯ ಭಾಷೆಯ ರಚನಾತ್ಮಕ ಭಾಷಿಕ ಅಧ್ಯಯನಕ್ಕೆ ಅವಕಾಶವಿದೆ.

* * *

# ಅನುಬಂಧಗಳು

## ಪರಾಮರ್ಶನ ಗ್ರಂಥಗಳು

- ಕನ್ನಡ ಪುಸ್ತಕಗಳು
- ಇಂಗ್ಲಿಷ್ ಪುಸ್ತಕಗಳು
- ಕನ್ನಡ ಪತ್ರಿಕೆಗಳು
- ಇಂಗ್ಲಿಷ್ ಪತ್ರಿಕಗೆಳು
- ಅಪ್ರಕಟಿತ ಪಿಎಚ್.ಡಿ ಪ್ರಬಂಧಗಳು
- ವಕ್ತೃಗಳ ವಿವರ
- ಪ್ರಶ್ನಾವಳಿ ಪಟ್ಟಿ
- ಪದಕೋಶಗಳ ಪಟ್ಟಿ

# ಪರಾಮರ್ಶನ ಗ್ರಂಥಗಳು

• **ಕನ್ನಡ ಪುಸ್ತಕಗಳು**


೦೧. ಅಂಗಡಿ ಎಸ್.ಎಸ್., ಶೋಧನ, ಪಾರ್ವತಮ್ಮ ಪ್ರಕಾಶನ, ಯರಝುರವಿ.

೦೨ ಅಂಗಡಿ ಎಸ್. ಎಸ್., ಸಂಬಂಧವಾಚಕಗಳು ಮತ್ತು ಸಂಬೋಧನೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೩. ಅಶೋಕ ಕುಮಾರ ರಂಜೇರೆ(ಸಂ), ೨೦೧೦, ಆಡಳಿತ ಕನ್ನಡ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೪. ಆಚಾರ್ಯ ಕೆ.ವಿ.(ಸಂ), ೨೦೦೩, ಇಂಗ್ಲಿಷ್-ಕನ್ನಡ ಭಾಷಾವಿಜ್ಞಾನ ಕೋಶ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ಹಂಪಿ.

೦೫. ಕಲಬುರ್ಗಿ ಎಂ.ಎಂ., ೨೦೧೦, ಕನ್ನಡ ನಾಮ ವಿಜ್ಞಾನ, ಸಪ್ನ ಪುಸ್ತಕಾಲಯ, ಬೆಂಗಳೂರು.

೦೬. ಕೃಷ್ಣಮಾಚಾರ್ಯ, ೧೯೮೮, ಹೊಸಗನ್ನಡ ನುಡಿಗನ್ನಡಿ ಎಂಬ ಹೊಸಗನ್ನಡ ವ್ಯಾಕರಣವು, ಏಷ್ಯಿಯನ್ ಎಜುಕೇಷನಲ್ ಸರ್ವಿಸ್, ಮದ್ರಾಸ್.

೦೭. ಕೃಷ್ಣಪರಮೇಶ್ವರ ಭಟ್ಟ, ೨೦೧೩, ಭಾಷೆ ಮತ್ತು ಸಾಮಾಜಿಕ ಸಂದರ್ಭ, ಅಭಿನವ ಪ್ರಕಾಶನ, ಬೆಂಗಳೂರು.

೦೮. ಕೃಷ್ಣಯ್ಯ ಎಂ.ಎಚ್., ೨೦೧೩, ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೦೯. ಕೆಂಪೇಗೌಡ ಕೆ., ೧೯೯೬, ಸಾಮಾನ್ಯ ಭಾಷಾ ವಿಜ್ಞಾನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ.

೧೦. ಕೆಂಪೇಗೌಡ ಕೆ., ೧೯೯೭, ಕನ್ನಡ ಭಾಷಾ ಸ್ವರೂಪ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ.

೧೧. ಗಿರಡ್ಡಿ ಗೋವಿಂದರಾಜ, ೧೯೮೮, ಕನ್ನಡ ಡೈಗ್ಲಾಸಿಯ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

೧೨. ಗೋವಿಂದರಾಜು ಸಿ.ಆರ್., ೧೯೯೯, ಕನ್ನಡ ಚಳವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೧೩. ಚಂದ್ರಪೂಜಾರಿ ಎಂ., ಚಂದ್ರಶೇಖರ್ ಟಿ.ಆರ್., ಶ್ರೀಧರ ವಿ.ಎಸ್.(ಸಂ), ೨೦೧೫, ಸಾಮಾಜಿಕ ಮತ್ತು ಮಾನವಿಕ ಅಧ್ಯಯಗಳ ಪರಿಭಾಷಾ ಕೋಶ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು.

೧೪. ಚಂದ್ರಯ್ಯ ಬಿ.ನಂ., ಸೀತಾ ಆರ್.,(ಅನು) ೧೯೯೬, ಪವನಂದಿ ವಿರಚಿತ ನನ್‌ನೂಲ್, ವಿಶ್ವಮೈತ್ರಿ ಸಂಶೋಧನ ಮತ್ತು ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು.

೧೫. ಚಂದ್ರಶೇಖರ ರಾ.ನಂ., ೨೦೧೧, ಕನ್ನಡವೆಂದರೆ ಬರಿ ನುಡಿಯಲ್ಲ..., ಸಪ್ನ ಬುಕ್ ಹೌಸ್, ಬೆಂಗಳೂರು.

೧೬. ಚಿದಾನಂದ ಮೂರ್ತಿ ಎಂ., ೨೦೦೮, ಬೃಹತ್ ಕರ್ನಾಟಕದ ಭಾಷಿಕ, ಸಾಂಸ್ಕೃತಿಕ. ಸಪ್ನಬುಕ್ ಹೌಸ್ ಬೆಂಗಳೂರು.

೧೭. ಚಿದಾನಂದ ಮೂರ್ತಿ ಎಂ., ೨೦೧೩, ಭಾಷಾ ವಿಜ್ಞಾನದ ಮೂಲತತ್ವಗಳು, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೧೮. ಜಯಲಲಿತಾ(ಅನು), ೨೦೧೭, ತೋಲ್‌ಗಾಪ್ಪಿಯಂ, ಕುವೆಂಪು ಭಾಷಾ ಪ್ರಾಧಿಕಾರ, ಬೆಂಗಳೂರು.

೧೯. ತಿರುಮಲೇಶ್ ಕೆ.ವಿ., ೨೦೧೧, ಇನ್ನಷ್ಟು ಕನ್ನಡ, ಅಭಿನವ ಪ್ರಕಾಶನ, ಬೆಂಗಳೂರು.

೨೦. ತಿರುಮಲೇಶ್ ಕೆ.ವಿ., ೨೦೧೩, ಸಮೃದ್ಧ ಕನ್ನಡ, ಅಭಿನವ ಪ್ರಕಾಶನ, ಬೆಂಗಳೂರು.

೨೧. ದೀಕ್ಷಿತ್ ಜಿ. ಎಸ್., ೧೯೯೧, ಸಂಗಮರ ಕಾಲದ ವಿಜಯನಗರ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಬೆಂಗಳೂರು.

೨೨. ಧಾರವಾಡಕರ ರಾ.ಯ., ೨೦೧೩, ಕನ್ನಡ ಭಾಷಾಶಾಸ್ತ್ರ, ಗೀತಾ ಬುಕ್ ಹೌಸ್, ಮೈಸೂರು.

೨೩. ನಾರಾಯಣ ಕೆ.ವಿ., ೧೯೯೮, ದ್ವಿಭಾಷಿಕತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ನಾರಾಯಣ ಕೆ.ವಿ., ೨೦೦೧, ಮತ್ತೆ ಭಾಷೆಯ ಸುತ್ತಮುತ್ತ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು.

೨೫. ನಾರಾಯಣ ಕೆ.ವಿ., ೨೦೦೯, ಕನ್ನಡ ಜಗತ್ತು ಅರ್ಧಶತಮಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ನಾರಾಯಣ ಕೆ.ವಿ., ಮೇಟಿ ಮಲ್ಲಿಕಾರ್ಜುನ, ಚಲಪತಿ ಆರ್(ಸಂ), ೨೦೧೬, ಕನ್ನಡ ನುಡಿಯ ಆಕರ ಕೋಶ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬಎಂಗಳೂರು.

೨೭. ನಾರಾಯಣ ಕೆ.ವಿ.,(ಸಂ) ೨೦೦೯, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ–೧ ಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೮. ನಾರಾಯಣ ಕೆ.ವಿ., ೨೦೧೦, ಕೆ.ವಿ.ಎನ್. ಈವರೆಗಿನ ಬರೆಹಗಳು ಕಂತೆ ಐದು ತೊಂಡು ಮೇವು, ಬರಹ ಪಬ್ಲಿಷಿಂಗ್ ಹೌಸ್ ಬೆಂಗಳೂರು.

೨೯. ನಾರಾಯಣ ವಿಶ್ವ ಎಂ., ೧೯೯೦, ಗ್ರಾಮೀಣ ಮತ್ತು ನಗರ ಸಮಾಜಶಾಸ್ತ್ರ, ಚೇತನ್ ಬುಕ್‌ಹೌಸ್, ಮೈಸೂರು.

೩೦. ಪಾಂಡುರಂಗಬಾಬು ಡಿ., ೨೦೦೩, ನುಡಿನೋಟ ಆಕಾಶ್, ಪ್ರಕಾಶನ ಹೊಸಪೇಟೆ.

೩೧. ಪಾಂಡುರಂಗಬಾಬು ಡಿ., ೨೦೦೫, ನಮ್ಮಾತು, ಆಕಾಶ್, ಪ್ರಕಾಶನ, ಹೊಸಪೇಟೆ.

೩೨. ಪಾರ್ಥಸಾರಥಿ ಬ. (ಪ್ರಸಂ), ಚಿಕ್ಕಮಗಳೂರು ಜಿಲ್ಲಾ ದರ್ಶನ, ಚಿಕ್ಕಮಗಳೂರು ಜಿಲ್ಲೆ ಶತಮಾನೋತ್ಸವ ಸಮಿತಿ, ಚಿಕ್ಕಮಗಳೂರು.

೩೩. ಪುಟ್ಟಪ್ಪ ಕೆ.ವಿ., ೧೯೭೧, ಕನ್ನಡ ಕೈಪಿಡಿ(ಸಂ–೧), ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ.

೩೪. ಪುಟ್ಟಪ್ಪ ಕೆ.ವಿ., ೨೦೦೭, ಕನ್ನಡ ಕೈಪಿಡಿ(ಸಂ–೨), ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ.

೩೫. ಬಸವರಾಜ ಕೋಡಗುಂಟಿ, ೨೦೧೦, ಕನ್ನಡ ವಿಭಕ್ತಿ ರೂಪಗಳು, ಬಂಡಾರ ಪ್ರಕಾಶನ, ಮಸ್ಕಿ.

೩೬. ಬಸವರಾಜ ಕೋಡಗುಂಟಿ, ೨೦೧೬, ಕರ್ನಾಟಕದ ಮಾತುಗಳು, ಬಂಡಾರ ಪ್ರಕಾಶನ, ಮಸ್ಕಿ.

೩೭. ಬಸವರಾಜ ಹೆಚ್. ಎಮ್., ೨೦೦೫, ದಕ್ಷಿಣ ಭಾರತದ ಇತಿಹಾಸ, ಉಮಾಪ್ರಕಾಶನ ಬೆಂಗಳೂರು.

೩೮. ಮರುಳಯ್ಯ, ೧೯೯೨, ಕನ್ನಡ ಭಾಷಾ ಚರಿತ್ರೆ, ರಾಗಿಣಿ ಶಿಕ್ಷಣ ಅನುಷ್ಠಾನ, ಬೆಂಗಳೂರು.

೩೯. ಮಹಾದೇವಯ್ಯ ಪಿ., ೨೦೦೦, ಸಾಮಾಜಿಕ ಉಪಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೦. ಮುನಿರಾಜಪ್ಪ, ೨೦೦೫, ಮಾಗಡಿ ಸೀಮೆ ಇತಿಹಾಸ–ಸಂಸ್ಕೃತಿ, ಸ್ಫೂರ್ತಿ ಪ್ರಕಾಶನ ಬೆಂಗಳೂರು.

೪೧. ಮೇಟಿ ಮಲ್ಲಿಕಾರ್ಜುನ(ಸಂ), ೨೦೧೫, ತೆಂಕಣದ ನುಡಿಗಳು, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು.

೪೨. ಮೋಹನ ಕುಂಟಾರ್ ಎ., ೨೦೧೨, ಸಮುದಾಯಗಳ ಕನ್ನಡ ಪರಂಪರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೩. ತಮಿಳ್ ಸೆಲ್ವಿ, ೨೦೧೫, ಅನನ್ಯ, ಸೃಷ್ಟಿ ಪಬ್ಲಿಕೇಷನ್ಸ್, ಬೆಂಗಳೂರು.

೪೪. ರಾಘವ ನಂಬಿಯಾರ್, ೨೦೧೨, ದ್ರಾವಿಡ ನಾನು–ನುಡಿ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೪೫ ರಾಜಪುರೋಹಿತ, ೨೦೧೦, ಶೈಲಿವಿಜ್ಞಾನ ಮತ್ತು ಜ್ಞಾನಶಾಸ್ತ್ರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೬. ರಾಜೇಶ್ವರಿ ಮಹೇಶ್ವರಯ್ಯ, ೨೦೧೧, ಆಧುನಿಕ ವರ್ಣನಾತ್ಮಕ ಭಾಷಾ ವಿಜ್ಞಾನ, ಸಮಾಜ ಪುಸ್ತಕಾಲಯ, ಧಾರವಾಡ.

೪೭. ರಾಮಚಂದ್ರ ಮುದಲಿಯಾರ್ ಡಿ. ಬಿ., ೧೯೨೨, ಮುದಲಿಯಾರ್ ಪಂಗಡದ ಚರಿತ್ರೆ, ಜಿ. ಟಿ.ಎ ಮೈಸೂರು.

೪೮. ರಾಮಚಂದ್ರ ಸಿ.ಎನ್., ೨೦೦೪, ಚಾರಿತ್ರಿಕ ಭಾಷಾವಿಜ್ಞಾನ ಮೂಲತತ್ವ ಹಾಗೂ ವಿಧಾನಗಳು,

ಸಾರಾ ಎಂಟರ್ ಪ್ರೈಸಸ್, ಮೈಸೂರು.

೪೯. ರೇಣುಕಾ ಕೋಡಗುಂಟಿ, ೨೦೧೧, ಕನ್ನಡ ಭಾಷಾ ವಿಜ್ಞನ ಸಂಶೋಧನೆ: ಇಂದು, ಬಂಡಾರ ಪ್ರಕಾಶನ, ಮಸ್ಕಿ.

೫೦. ಲಕ್ಷಣನ್ ಚೆಟ್ಟಿಯಾರ್ ಎಸ್.ಎಮ್.ಎಲ್.(ಮೂಲ), ಪರಮಶಿವಯ್ಯ ಜೀ.ಶಂ., ೧೯೯೪, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ.

೫೧. ಶಂಕರಭಟ್ಟ ಡಿ.ಎನ್., ೧೯೯೫, ಕನ್ನಡ ಭಾಷೆಯ ಕಲ್ಪಿತ ಚರಿತ್ರೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೨. ಶಂಕರಟಭಟ್ಟ ಡಿ.ಎನ್., ೨೦೦೨, ಕನ್ನಡ ಪದಗಳ ಒಳರಚನೆ, ಭಾಷಾ ಪ್ರಕಾಶನ, ಗಡಿಕಲ್ಲು, ಕೊಪ್ಪ.

೫೩. ಶಂಕರಭಟ್ಟ ಡಿ.ಎನ್., ೨೦೦೯, ಕನ್ನಡ ನುಡಿ ನೆಡೆದು ಬಂದ ದಾರಿ, ಬಾಶಾ ಪ್ರಕಾಶನ, ಹೆಗ್ಗೋಡು.

೫೪. ಶಾಲಿನಿ ರಘುನಾಥ್, ೧೯೭೭, ಉಪಭಾಷಾಧ್ಯಯನ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೫. ಶಿವಾನಂದ ವ್ಹಿ., ೧೯೯೯, ತೌಲನಿಕ ದ್ರಾವಿಡ ಭಾಷಾ ವಿಜ್ಞಾನ, ವಿದ್ಯಾನಿಧಿ ಪ್ರಕಾಶನ, ಗದಗ.

೫೬. ಶ್ರೀಧರ್ ಎಸ್.ಎನ್., ೨೦೧೧, ಇಂದಿನ ಕನ್ನಡ: ರಚನೆ ಮತ್ತು ಬಳಕೆ, ಅಭಿನವ ಪ್ರಕಾಶನ, ಬೆಂಗಳೂರು.

೫೭. ಶ್ರೀನಿವಾಸಮೂರ್ತಿ ಕಾ.ವೆಂ., ೨೦೦೩, ಕನ್ನಡಪರ ಚಿಂನತೆ ಮತ್ತು ಪರಂಪರೆ, ಸಿ.ವಿ.ಜಿ ಪಬ್ಲಿಕೇಷನ್, ಬೆಂಗಳೂರು.

೫೮. ಸಂಗಮೇಶ ಸವದತ್ತಿಮಠ, ೧೯೯೭, ದ್ರಾವಿಡ ಭಾಷಾ ವಿಜ್ಞಾನ ಪರಿಚಯ, ಚೇತನ ಬುಕ್ ಹೌಸ್, ಮೈಸೂರು.

೫೯. ಸಂಗಮೇಶ ಸವದತ್ತಿಮಠ, ೨೦೧೩, ಕನ್ನಡ ಭಾಷಾ ವ್ಯಾಸಂಗ, ರೂಪರಶ್ಮಿ ಪ್ರಕಾಶನ, ಧಾರವಾಡ.

೬೦. ಸಣ್ಣಪಾಪಯ್ಯ, ೨೦೦೯, ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು, ಬಂಡಾರ ಪ್ರಕಾಶನ, ಮಸ್ಕಿ.

೬೧. ಸಿದ್ಧಲಿಂಗಯ್ಯ(ಪ್ರ.ಸಂ), ೨೦೧೨, ಶಾಸ್ತ್ರೀಯ ಭಾಷೆ ನಡೆದು ಬಂದ ದಾರಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೬೨. ಸೋಮಶೇಖರ ಗೌಡ, ೨೦೧೦, ಕನ್ನಡ ಉಪಭಾಷೆಗಳು, ಕನ್ನಡ ಅದ್ಯಯನ ಮತ್ತು ಸಂಶೋಧನ ವಿಭಾಗ, ಮೈಸೂರು ವಿಶ್ವವಿದ್ಯಾಲಯ.

೬೩. ಸೋಮಶೇಖರ ಗೌಡ, ೨೦೦೭, ಸಾಮಾಜಿಕ ಭಾಷಾವಿಜ್ಞಾನ, ಮೈಸೂರು ವಿಶ್ವವಿದ್ಯಾಲಯ.

೬೪. ಸೋಮಶೇಖರ ಗೌಡ, ೨೦೧೦, ಭಾಷೆಯ ರಚನೆ ಮತ್ತು ಬಳಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

• ಇಂಗ್ಲಿಷ್ ಪುಸ್ತಕಗಳು

01. Ardener and Edwin, 1971, Social anthropology and Language, Tavistock Publications, London.

02. Biligiri H.S., 1973, Classification for Linguistics and Languages, Mysore Central Institute of Language.

03. Bloomfield, 1933, Language, Leonard Newyork Heny, Halt and Company.

04. Hockfit and Charlen F, 1958, A cours in modren Linguistics, The Macmillan Company.

05. Joshi s c., 1999, Sociology of Migration and Kinship, Anmol Publication PVT. LTD., New Delhi.

06. Kothandaraman, 1976, Modern Studies in Tamil, Tamil Nuulagam Madras.

07. Laird Charlton, 1953, The Miracle of Language, The World Publishing Company.

08. Mandelbaum David G, 1949, Selected writings of Edward sapir in Language culture and personality, University of california Press.

09. Monika Kehoe, 1986, Applied Linguistics, Collier Macmillan Limited.

10. Roy Chowdhry S K and Shukla P R(Ed), 1991, Encyclopaedia of Economic Development poverty, Migration and Urban Employment(Vo-14), Akashdeep Publishing Hous

11. Sam Mohan Lal, 1908, Convergence and Language Shift In A Linguistic Minority- A Sociolinguistic Study of Tamil in Bangalore City, Central Institute of Indian Languages Mysore.

12. Shanmugam S.V., 1983, Aspects of Language Developement in Tamil,

Annamalainagara: Annamalai, All India Tamil Linguistic Associati13.

13. Sivaramamurti C., 1964, Royal Conquests and Culatural Migrations in South India and The Deccan, Indian Museum Calcutta.

14. Victor Golla(Ed.), 1991, The collected works of Edward Sapir VO-VI,(American Indian Languages-2), Moutonde Gruyter Bertin, Newyork.

15. Wardhavgh Ronald, 1986 An Introduction to Sociolinguistics,(Ed:4), Oxford black wall Publishing.

• **ಕನ್ನಡ ಪತ್ರಿಕೆಗಳು**

01. ಕನಾಟಕ ಭಾರತಿ, 1979, ಸಂಪುಟ–9, ಸಂಚಿಕೆ1 ಮತ್ತು 2, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

02. ಎಲ್ಲಿಂದಲೋ ಬಂದವರು(ಲೇಖನದ ಶೀರ್ಷಿಕೆ), ದಿನಾಂಕ: ಜನವರಿ 5, 2016. ಮಂಗಳವಾರ. ಪ್ರಜಾವಾಣಿ–ಕರ್ನಾಟಕ ದರ್ಶನ(ವಿಶೇಷ ಪುರವಣಿ)

• **ಇಂಗ್ಲಿಷ್ ಪತ್ರಿಕೆಗಳು**

01. SAM MOHAN LAL AND FRANCE MUGLER, TAMIL IN FiJI, (IDJL, VOL-XXVII, No-2, JUNE-1999)

02. SAM MOHAN LAL AND FRANCE MUGLER, FiJI IN TAMIL: THE STRUCTURE OF LANGUAGE UNDER THREAT, (IDJL, VOL-XXIV, No-2, JUNE-1999)

03. Usha R. Vijailakshmi, 2005, TAMILIAN MIGRATION INTO KARNATAKA (THE PERIOD OF CHOLA CONQUEST OF SOUTHERN KARNATAKA AND THE CONSOLIDATION OF POWER FROM 850-1279 A.D) (JOURNAL ARTICLE), Indian History Congress publication,Vol. 66 (2005-2006), pp. 239-251.

• **ಅಪ್ರಕಟಿತ ಪಿಎಚ್.ಡಿ ಪ್ರಬಂಧಗಳು**

01. ನಟರಾಜ್ ಜೆ. ಆರ್., 2017, ವ್ಯಕ್ತಿನಾಮಗಳ ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

02. ASIRVATHAMA.E, 1990, LANGUAGE AND POLITICS IN ANDAMAN AND NICOBAR ISLANDS-A STUDY, MYSORE UNIVERSITY.

03. KEMPEGOWDA.K, A DESCRIPTIVE ANALYSIS OF THE IRULA DIALET. MYSORE UNIVERSITY.

04. MATHIBO ADARHRO, 2014, LANGUISTIC ANALYSIS OF MAO LANGUAGE, MYSORE UNIVERSITY.

05. NADARAJA PILLAI, 1982, A SYNTACTIC STUDY OF TAMIL VERVBS, MYSORE UNIVERSITY.

06. SAIDALAVI.C, 2013, A SOCIOLINGUISTIC EVALUATION OF ARABIC-MALAYALAM, MYSORE UNIVERSITY.

07. THANDAPANI.M, 1999, THE PROBLEMS OF LEARNING AND TEACH-

- ವಕ್ತೃಗಳ ವಿವರ

| ಹೆಸರು | ವೃತ್ತಿ | ಸ್ಥಳ | ವಯಸ್ಸು | ಜಾತಿ |
|---|---|---|---|---|
| ಮುರುಗನ್ | ಕಂಟ್ರಾಕ್ಟರ್ | ಹಿರಿಯೂರು | 70 ವರ್ಷ | ಗೌಡ |
| ನಟರಾಜನ್ | ನಿವೃತ್ತ ಶಿಕ್ಷಕರು | ಹಿರಿಯೂರು | 60 ವರ್ಷ | ಆದಿ ದ್ರಾವಿಡ |
| ಏಳುಮಲೈ.ಕೆ.ಎಸ್, | ಕೃಷಿಕಾರರು | ಕಡ್ಡಿರಾಂಪುರ | 70 ವರ್ಷ | ಗೌಂಡರ್ |
| ಚಿನ್ನಸ್ವಾಮಿ | ಕೃಷಿಕರು | ಆದಿವಲ | 60 ವರ್ಷ | ಗೌಂಡರ್ |
| ರಾಧಿಕ | ಗೃಹಿಣಿ | ಕಡ್ಡಿರಾಂಪುರ | 29 ವರ್ಷ | ಆದಿ ದ್ರಾವಿಡ |
| ಮುತ್ತುರಾಜ್ | ವರ್ತಕರು | ಟಿ.ಬಿ. ಡ್ಯಾಂ | 50 ವರ್ಷ | ಆದಿ ದ್ರಾವಿಡ |
| ಪಳನಿಯಪ್ಪ | ಕೃಷಿಕರು | ಟಿ.ಬಿ. ಡ್ಯಾಂ | 70 ವರ್ಷ | ಆದಿ ದ್ರಾವಿಡ |
| ಸೌಮ್ಯ | ಶಿಕ್ಷಕರು | ಭದ್ರಾವತಿ | 45 ವರ್ಷ | ಲಿಂಗಾಯಿತ |
| ಈಶ್ವರಿಯಮ್ಮ | ದಿನಗೂಲಿ | ಭದ್ರಾವತಿ | 60 ವರ್ಷ | ಚಕ್ಕಲಿಯಾರ್ |
| ದಿನೇಶ್ | ಅರಣ್ಯಾಧಿಕಾರಿ | ಉಂಬ್ಳೆಬೈಲು | 35 ವರ್ಷ | ಕುರುಬ |
| ಬಾಲಮಣಿ | ಮೀನುಗಾರಿಕೆ | ಗಂಗಾವತಿ | 70 ವರ್ಷ | ಗೌಂಡರ್ |
| ಸಂಪತ್ | ಮೀನುಗಾರಿಕೆ | ಗಂಗಾವತಿ | 40 ವರ್ಷ | ಅಂಬಿಗ |
| ರಾಜಕುಮಾರ್ | ಶಿಕ್ಷಕರು | ಬಂಗಾಳಿಕ್ಯಾಂಪ್ | 45 ವರ್ಷ | ಕುರುಬ |
| ಅದೋರಿಬಂಡೋಲಿ | ವಿದ್ಯಾರ್ಥಿನಿ | ಬಂಗಾಳಿಕ್ಯಾಂಪ್ | 25 ವರ್ಷ | --- |
| ಹರಿದಾಸಬಂಡೋಲಿ | ಕೂಲಿಕಾರ್ಮಿಕ | ಬಂಗಾಳಿಕ್ಯಾಂಪ್ | 55 ವರ್ಷ | --- |
| ಕಾಳಿಯಪ್ಪ | ಕೃಷಿ | ಹಿರಿಯೂರು | 60 ವರ್ಷ | ಕಂಡಾರ್ |
| ಮಂಜುನಾಥ | ಕೂಲಿ | ಮಸ್ಕಲ್ | 40 ವರ್ಷ | ಚೆಟ್ಟಿಯಾರ್ |
| ಈಶ್ವರ್ | ವ್ಯಾಪಾರ | ಮಾರಿಕಣಿವೆ | 41 ವರ್ಷ | ಸೆಂಬಡವರ್ |
| ಪಳನಿಸ್ವಾಮಿ | ಖಾ. ನೌಕರ | ಹೊಸಪೇಟೆ | 40 ವರ್ಷ | ಗೌಂಡರ್ |
| ಮಣಿಕಂಠ | ವ್ಯಾಪಾರ | ಹೊಸಪೇಟೆ | 42 ವರ್ಷ | ಮೊದಲಿಯಾರ್ |
| ರಾಮಸ್ವಾಮಿ | ಕೂಲಿ | ಹಿರಿಯೂರು | 41 ವರ್ಷ | ಆದಿ ದ್ರಾವಿಡ |
| ಮುತ್ತು | ಕೂಲಿ | ಕಡ್ಡಿರಾಂಪುರ | 38 ವರ್ಷ | ಆದಿ ದ್ರಾವಿಡ |

| ಮನೋಜ್ | ಕೂಲಿ | ಕಮಲಾಪುರ | 25 ವರ್ಷ | ವಡ್ಡಾರ್ |
|---|---|---|---|---|
| ವಿಶಾಲ | ಸ. ನೌಕರ | ಕಡ್ಡಿರಾಂಪುರ | 26 ವರ್ಷ | ಗೌಂಡರ್ |
| ರಾಮಚಂದ್ರನ್ | ದಲ್ಲಾಳಿ | ಹಿರಿಯುರು | 26 ವರ್ಷ | ನಾಯ್ಕರ್ |
| ನಾಗರಾಜ | ಕೃಷಿ | ಹೊಸಪೇಟೆ | 57 ವರ್ಷ | ಗೌಂಡರ್ |
| ಚಿನ್ನಪ್ಪ | ಕೃಷಿ | ಹೊಸಪೇಟೆ | 60 ವರ್ಷ | ಮೊದಲಿಯಾರ್ |
| ಗುಣಶೇಖರನ್ | ಶಿಕ್ಷಕ | ಹಿರಿಯೂರು | 46 ವರ್ಷ | ಗೌಂಡರ್ |
| ಸುಮತಿ | ಗೃಹಿಣಿ | ಹಿರಿಯೂರು | 38 ವರ್ಷ | ಗೌಂಡರ್ |
| ಲಕ್ಷ್ಮೀ | ಗೃಹಿಣಿ | ಹೊಸಪೇಟೆ | 27 ವರ್ಷ | ಮೊದಲಿಯಾರ್ |
| ಸೆಲ್ವಿ | ವ್ಯಾಪಾರಿ | ಹಿರಿಯೂರು | 25 ವರ್ಷ | ನಾಯ್ಕರ್ |

## ಕರ್ನಾಟಕದಲ್ಲಿನ ಭಾಷಾದ್ವೀಪಗಳು: ಸಮಾಜೋಭಾಷಿಕ ಅಧ್ಯಯನ ತಮಿಳು ಭಾಷಿಕರನ್ನು ಅನುಲಕ್ಷಿಸಿ (ಪ್ರಶ್ನಾವಳಿ ಪಟ್ಟಿ)

**ಸಾಮಾನ್ಯ ವಿವರಗಳು, ಭಾಗ-1**

1. ಪೂರ್ಣ ಹೆಸರು.............................. ಗಂಡು/ಹೆಣ್ಣು
2. ವಿಳಾಸ: ಪ್ರಸ್ತುತ...................................................................
    ಖಾಯಂ...................................................................
3. ನಿಮ್ಮ ತಂದೆ ತಾಯಿ ಜನಿಸಿದ ಸ್ಥಳ: ತಂದೆ..................... ತಾಯಿ.........
4. ವಯಸ್ಸು:.............................. ಜನ್ಮ ಸ್ಥಳ........................................
5. ವೃತ್ತಿ...................................................
6. ನಿಮ್ಮ ತಂದೆ/ತಾಯಿ ಯಾವ ಭಾಷೆಯಲ್ಲಿ ಮಾತನಾಡುತ್ತಾರೆ/ ಮಾತನಾಡುತ್ತಿದ್ದರು?ತಂದೆ..................................ತಾಯಿ......................
7. ನೀವು ವಿವಾಹಿತರೆ?............................
8. ನಿಮಗೆ ಮಕ್ಕಳಿದ್ದಾರಾ?

| ಕ್ರ.ಸಂ | ಹೆಸರು | ಗಂ/ಹೆಂ | ವಿದ್ಯಾಭ್ಯಾಸ | ಅಧ್ಯಯನ ಮಾಧ್ಯಮ |
|---|---|---|---|---|
| 1. | | | | |
| 2. | | | | |
| 3. | | | | |
| 4. | | | | |

9. ಜಾತಿ.......................... ಉಪಜಾತಿ................................................

**ಸಾಮಾಜಿಕ ಭದ್ರತೆ, ಭಾಗ-1(ಅ)**

10. ಸ್ಥಳೀಯ ಚುನಾವಣಾ ಗುರುತಿನ ಚೀಟಿ ಹೊಂದಿದ್ದೀರಾ? ಹೌದು/ಇಲ್ಲ
11. ಪಡಿತರ ಚೀಟಿ? ಏಪಿಎಲ್/ಬಿಪಿಎಲ್
12. ಜಾತಿ ಪ್ರಮಾಣ ಪತ್ರ ಹೌದು/ಇಲ್ಲ

**ಶೈಕ್ಷಣಿಕ ಹಿನ್ನೆಲೆ, ಭಾಗ-2**

13. ನೀವು ಯಾವುದಾದರು ವಿದ್ಯಾಭ್ಯಾಸ ಪಡೆದಿದ್ದೀರಾ? ಹೌದು/ಇಲ್ಲ

| ಶೈಕ್ಷಣಿಕ ಹಂತ | ಮಾಧ್ಯಮ | ವಿಷಯ |
|---|---|---|
| ಬಾಲವಾಡಿ/ಪ್ರಾಥಮಿಕ | | |
| ಪ್ರೌಢಶಾಲೆ | | |
| ಕಾಲೇಜು | | |
| ಇತರೆ(ಡಿಪ್ಲಮೊ) | | |

14. ನೀವು ನಿಮ್ಮ ಮಕ್ಕಳನ್ನು ಯಾವ ಮಾಧ್ಯಮ ಶಾಲೆಗೆ ಕಳುಹಿಸುತ್ತೀರಾ?

**ನಿತ್ಯ ಬಳಕೆಯ ಭಾಷೆ**

15. ದಿನ ನಿತ್ಯ ಭಾಷಾ ಸಂಪರ್ಕಕ್ಕಾಗಿ ಬಳಸುವ ಭಾಷೆ..............................
16. ನೀವು ಚಿಕ್ಕವರಿದ್ದಾಗ ಮೊದಲು ಮಾತನಾಡಲು ಕಲಿತ ಭಾಷೆ ಯಾವುದು?..................................................................................
17. ಮನೆಯಲ್ಲಿ ಮಾತನಾಡಲು ಬಳಸುವ ಭಾಷೆ ಯಾವುದು? ಬಾಲ್ಯದಲ್ಲಿದ್ದಾಗ................................ ಈಗ........................................
18. ನಿಮ್ಮ ತಂದೆ/ತಾಯಿಯರು ನಿಮ್ಮನ್ನು ಯಾವ ಭಾಷೆಯಲ್ಲಿ ಮಾತನಾಡುತ್ತೀರಾ?..................................................................................
19. ನಿಮ್ಮ ಮಕ್ಕಳು ನಿಮ್ಮ ತಂದೆ/ತಾಯಿಯರನ್ನು ಮತ್ತು ನಿಮ್ಮನ್ನು ಯಾವ ಭಾಷೆಯಲ್ಲಿ ಮಾತನಾಡಿಸುತ್ತಾರೆ..........................................................

**ತಮಿಳು ಭಾಷಾ ಬಳಕೆ, ಭಾಗ-3**

20. ತಮಿಳು ಭಾಷೆಯನ್ನು ದಿನನಿತ್ಯದ ಬಳಕೆ ಎಷ್ಟರ ಮಟ್ಟಿಗೆ ಬಳಸುತ್ತೀರಾ?
    ಕಡಿಮೆ ಪ್ರಮಾಣ....................

ಅರ್ಧಕ್ಕಿಂತ ಕಡಿಮೆ..................
ಅರ್ಧ....................................
ಅರ್ಧಕ್ಕಿಂತಲೂ ಹೆಚ್ಚು................
ಪೂರ್ಣ ಪ್ರಮಾಣದಲ್ಲಿ(ಯಾವಾಗಲು)....................................

21. ಈ ಕೆಳಗಿನ ಸಂದರ್ಭಗಳಲ್ಲಿ ಯಾವ ಭಾಷೆಯನ್ನ ಪಯೋಗಿಸುತ್ತೀರಾ?
ಗಂಡ ಹೆಂಡತಿ ಮಾತನಾಡುವಾಗ..........................................................
ಮಕ್ಕಳ ಹತ್ತಿರ ಮಾತನಾಡುವಾಗ..........................................................
ಶಾಲಾ ವಾತಾವರಣದಲ್ಲಿ/ಕೆಲಸ ಮಾಡುವ ಸ್ಥಳದಲ್ಲಿ...............................
ದಿನಪತ್ರಿಕೆ ಓದುವಾಗ, ಪುಸ್ತಕಗಳನ್ನು ಓದುವಾಗ....................................
ಪತ್ರ, ಲೇಖನವನ್ನು ಬರೆಯುವಾಗ..........................................................
ಇತರೆ(ಬೇರೆಯವರೊಂದಿಗೆ ಮಾತನಾಡುವಾಗ).......................................
ಕನ್ನಡಿಗರು/ತಮಿಳರೊಂದಿಗೆ...................................................................

22. ಈ ಕೆಳಗಿನ ಎಲ್ಲ ಸಮಯಗಳಲ್ಲಿ ತಮಿಳು ಭಾಷೆಯಲ್ಲಿ ಮಾತನಾಡುತ್ತೀರಾ?
ಸನ್ನಿವೇಶ
ಮಕ್ಕಳ ಹತ್ತಿರ............................., ಪೋಷಕರ ಹತ್ತಿರ...............
ಸ್ನೇಹಿತರು/ನೆರೆಹೊರೆಯವರ ಹತ್ತಿರ.....................................................
ಸಂಬಂಧಿಕರ ಹತ್ತಿರ.........................................................................
ಶಾಲೆ/ಕೆಲಸದ ಸಂದರ್ಭದಲ್ಲಿ...............................................................
ವ್ಯಾಪಾರ ಮಾಡುವ(ಅನ್ಯಭಾಷಿಕರೊಂದಿಗೆ)...........................................
ಓದುವಾಗ/ಬರೆಯುವಾಗ.....................................................................
ಇತರೆ ಸಂದರ್ಭಗಳಲ್ಲಿ.........................................................................

**ತಮಿಳು ಭಾಷಾ ಪದಕೋಶಗಳ ಪರೀಕ್ಷೆ, ಭಾಗ–4**
23. ನಿಮ್ಮ ಬಾಲ್ಯದಲ್ಲಿ ಆಡಿದ ಕೆಲವು ಆಟಗಳ ಹೆಸರುಗಳನ್ನು ತಿಳಿಸಿ.
1.
2.
ಆ ಆಟಗಳಲ್ಲಿ ಒಂದು ಆಟದ ನಿಯಮಗಳ್ನು ವಿವರಿಸಿ.

24. ನೀವು ಯಾವುದಾದರು ಹಳೆಯ ಹಾಡು(ಜಾನಪದ) ಓಗಟುಗಳನ್ನು ನೆನಪಿಸಿಕೊಳ್ಳುತ್ತೀರಾ?

25. ಮಕ್ಕಳು ಆಣೆ ಮಾಡಲು ಬಳಸುವ ಪದಗಳು ಯಾವುವು?
1.
2.
26. ಜನರನ್ನು ನಗಿಸಲು ಬಳಸುವ ಪದಗಳು, ಸಂದರ್ಭ ಉದಾಹರಣೆ ನೀಡಿ
ಮದುವೆಯಲ್ಲಿ.

ಜಗಳ

ಹಾಸ್ಯದ ಸನ್ನಿವೇಶಗಳು

27. ನೀವು ಈ ಕೆಳಗಿನವರನ್ನು ಏನೆಂದು ಸಂಬೋಧಿಸುತ್ತೀರಾ?
ನಿಮ್ಮ ಸಹಾಯಕರನ್ನು..........................................................................
ಮಕ್ಕಳನ್ನು.......................................................................................
ಸ್ನೇಹಿತರನ್ನು....................................................................................
ಇತರರನ್ನು/ಅಪರಿಚಿತರನ್ನು.................................................................

28. ಪೊಂಗಲ್ ಅಂದರೆ ಏನು? ಹೇಗೆ ತಯಾರಿಸುತ್ತೀರಾ(ವಿವರಣೆ)

29. ಈ ಪದಗಳಿಗೆ ತಮಿಳಿನಲ್ಲಿ ಏನೆಂದು ಹೇಳುತ್ತೀರಿ
* ಗಳಿಗೆ....................
* ಗಂಟೆ...........................
ನಿಮಿಷ...........................
ಮುಂಜಾನೆ...........................
ಸಂಜೆ......................................

ಮಾರು(ಹೂ ಅಳೆಯಲು ಬಳಸುವ)
ಸಮೂಹ ವಾಚಕ
ಡಜನ್...........................
ಖಂಡಗ...........................
ಜೋಡಿ...........................
ಜೊತೆ...........................
ಗೇಣು...........................

30. ದಿನ ನಿತ್ಯ ಬಳಸುವ ತರಕಾರಿ, ಧಾನ್ಯ ಮತ್ತು ಅಡುಗೆ ಸಿದ್ಧಪಡಿಸಲು ಬಳಸುವ ಪರಿಕರಗಳನ್ನು ಹೆಸರಿಸಿ

| | ತಮಿಳು | ಕನ್ನಡ |
|---|---|---|
| ತರಕಾರಿಗಳು | | |
| ಧಾನ್ಯಗಳು | | |
| ಅಡುಗೆ ಸಿದ್ಧಪಡಿಸಲು ಬಳಸುವ ಪರಿಕರಗಳು | | |

**ಸಾಮಾಜಿಕ, ಸಾಂಸ್ಕೃತಿಕ ಅಂಶಗಳ ಕುರಿತು, ಭಾಗ–5**

31. ನಿಮ್ಮ ದೇವರು ಯಾವುದು? ವಾಹನ ಇದೆಯೇ? ಹಾಗದರೆ ಯಾವುದು?

ನಿಮಗೆ ಇಷ್ಟವಾದ ಆಹಾರ ಯಾವುದು?
ಸಸ್ಯಾಹಾರ ಮಾಂಸಾಹಾರ

32. ತಮಿಳರು ತೊಡುವ ವಿಶೇಷ ಉಡುಗೆಗಳು ಮತ್ತು ತೊಡುಗೆಗಳು

| | ಗಂಡಸರು | ಹೆಂಗಸರು |
|---|---|---|

ಉಡುಗೆಗಳು..........................................................................................
..........................................................................................
..........................................................................................
..........................................................................................

ತೊಡುಗೆಗಳು
ಕೈಗೆ..........................................................................................
ಬೆರಳುಗಳಿಗೆ..........................................................................................
ಕಿವಿಗಳಿಗೆ..........................................................................................
ಮೂಗಿಗೆ..........................................................................................
ತಲೆಯ ಕೂದಲಿಗೆ..........................................................................................
ಸೊಂಟಪಟ್ಟಿ..........................................................................................
ತೋಳಪಟ್ಟಿ..........................................................................................

ಕಾಲ ಬೆರಳಿಗೆ.................................................................................
ಕಾಲಿಗೆ.........................................................................................
ಕುತ್ತಿಗೆಗೆ.......................................................................................

33. ತಮಿಳರ ಪಂಚಾಂಗದ ಪ್ರಕಾರ ತಿಂಗಳಿಗೆ ಎಷ್ಟು ದಿನಗಳಿವೆ...................
ಮೊದಲ ಚಂದ್ರದಿನವನ್ನು ............................................ ಕರೆಯುತ್ತಾರೆ.
ಪೂರ್ಣ ಚಂದ್ರದಿನವನ್ನು.................................................ಕರೆಯುತ್ತಾರೆ.
ತಿಂಗಳ ಕೊನೆ ದಿನವನ್ನು.............................................. ಕರೆಯುತ್ತಾರೆ.
ಪೂರ್ಣ ಕತ್ತಲ ದಿನವನ್ನು ............................................ ಕರೆಯುತ್ತಾರೆ.
**ವಾರದ ಹೆಸರುಗಳು**
ಸೋಮವಾರ:
ಮಂಗಳವಾರ:
ಬುದವಾರ:
ಗುರವಾರ:
ಶುಕ್ರವಾರ:
ಶನಿವಾರ:
ಭಾನುವಾರ:

34. ಸಂಖ್ಯಾವಾಚಗಳು:
1................................. 25.............................. 39..........................
50............................... 90........................... 100..........................
1000.........................

35. ತಮಿಳಿನಲ್ಲಿ ತಿಂಗಳುಗಳ ಹೆಸರನ್ನು ತಿಳಿಸಿರಿ.
ಜನವರಿ
ಫೆಬ್ರವರಿ
ಮಾರ್ಚ್
ಏಪ್ರಿಲ್
ಮೇ
ಜೂನ್
ಜುಲೈ
ಆಗಸ್ಟ್
ಸೆಪ್ಟೆಂಬರ್
ನವೆಂಬರ್
ಡಿಸೆಂಬರ್

36. ಈ ಯಾವ ತಿಂಗಳಿಂದ ತಮಿಳಿನ ವರ್ಷದ ಮೊದಲ ತಿಂಗಳು ಎಂದು ಗುರುತಿಸುತ್ತೀರಾ?

37. ತಮಿಳರು ಆಚರಿಸುವ ಹಬ್ಬಗಳ ಹೆಸರುಗಳನ್ನು ತಿಳಿಸಿ:

| | ಹಬ್ಬಗಳು | ಆಚರಿಸುವ ತಿಂಗಳು |
|---|---|---|
| 1 | | |
| 2 | | |

38. ಸಂಬಂಧವಾಚಕಗಳನ್ನು ತಿಳಿಸಿ.

| | ಸಂಬಂಧವಾಚಗಕಳು | ಸಂಬೋಧನಾರೂಪಗಳು |
|---|---|---|
| ನಿಮ್ಮಗೆ ಜನ್ಮ ನೀಡಿದ ಹೆಣ್ಣು | | |
| ಗಂಡು | | |

ನಿಮ್ಮ ನಂತರ
ಜನಿಸಿದ ಗಂಡು
ಹೆಣ್ಣು
ನಿಮಗಿಂತಲೂ
ಮುಂಚೆ ಜನಿಸಿದ ಗಂಡು
ಹೆಣ್ಣು
ಅತ್ತೆ
ಮಾವ
ದೊಡ್ಡಪ್ಪ
ದೊಡ್ಡಮ್ಮ
ಅಜ್ಜಿ
ಅಜ್ಜ
ಭಾವ
ಇತರೆ
39. ನಿಮ್ಮಲ್ಲಿ ಬಳಸುವ ಜನಪದ ಆಚರಣೆಗಳು/ಕುಣಿತಗಳನ್ನು ತಿಳಿಸಿ.
ನವಿಲು ಕುಣಿತ
ತಮಟೆ ವಾದ್ಯ
ಜಾನಪದ ಗೀತಗಾಯನ
ಕರಗಕುಣಿತ
ನಿಮ್ಮ ಮನೋರಂಜನಾ ವಿಧಾನಗಳಾವುವು.

40. ಈ ಪ್ರದೇಶದಲ್ಲಿ ನಿಮ್ಮ ಭಾಷೆಯಲ್ಲಿ ನಾಟಕಗಳನ್ನು ಆಡುತ್ತಾರಾ?
ಹೌದು/ಇಲ್ಲ
ಹೌದಾದರೆ ಅವುಗಳು ಪೌರಾಣಿಕ/ಸಾಮಾಜಿಕ ವಸ್ತುವುಳ್ಳವಾಗಿರುತ್ತವೆಯೇ?

41. ಬೀದಿ ನಾಟಕಗಳು ನಡೆಯುತ್ತವೆಯೇ?(ತೆರಕೂಟು)ಬಯಲಾಟಗಳು

42. ನೀವು ಹೆಚ್ಚು ವೀಕ್ಷಿಸುವ ಟಿ ವಿ ಚಾನಲ್‌ಗಳು ಯಾವುವು?

ಕೇಳುವ ರೇಡಿಯೋ...............
ಓದುವ ಪತ್ರಿಕೆಗಳು(ಹೆಸರುಗಳು)...................

**ಭಾಗ–4 ಭಾಷೆಯಲ್ಲಿನ ಅರ್ಥ ಕುರಿತು**
43. ನಿಮಗೆ ತಿಳಿದಿರುವ ಬೈಗುಳ, ನಿಂದಿಸುವ ಪದಗಳನ್ನು ತಿಳಿಸಿ
ಕಳ್ಳರಿಗೆ.......................................................................................
ಅಪರಿಚಿತರು...................................................................................
ಮಕ್ಕಳು.........................................................................................

44. ಈ ಕೆಳಗಿನವುಗಳಲ್ಲಿ ನಿಮಗೆ ಅರ್ಥವಾಗುವ ಪದಗಳನ್ನು ತಿಳಿಸಿ
1.
2.

45. ಈ ಪದಗಳಿಗೆ ಸಮನಾರ್ಥಕ ಪದಗಳನ್ನು ತಿಳಿಸಿ
1.

**ಭಾಗ–5 ದ್ವಿಭಾಷಿಕತೆ ಕುರಿತು:–(ಬಹುಭಾಷಿಕತೆ)**
46. ತಮಿಳು ಬಿಟ್ಟು ಓದಲು/ಬರೆಯಲು/ಮಾತನಾಡಲು ಬೇರೆ ಯಾವ ಭಾಷೆಗಳು ಬರುತ್ತವೆ.

| | ಓದಲು | ಬರೆಯಲು | ಮಾತನಾಡಲು |
|---|---|---|---|
| ಕನ್ನಡ........................................ | | | |

ತೆಲುಗು..........................................................................................................
ಹಿಂದಿ..............................................................................................................
ಇಂಗ್ಲಿಷ್..........................................................................................................
.....................................................................................................................

47. .....................(ಕನ್ನಡ)ಭಾಷೆಯನ್ನು ಹೇಗೆ ಕಲಿತಿರಿ?
* ಶಾಲೆಯಲ್ಲಿ
* ಸಾಮಾಜಿಕ ಪರಿಸರದಲ್ಲಿ(ವ್ಯವಹಾರ)
* ವಿಶೇಷ ತರಗತಿಗಳಿಂದ/ಕೋರ್ಸ್‌ಗಳಿಂದ
* ಟಿ ವಿ ಕಾರ್ಯಕ್ರಮಗಳನ್ನು ನೋಡಿ
* ಕೆಲಸ ಮಾಡುವ ಕಡೆ/ಅಕ್ಕ–ಪಕ್ಕದವರ ನೆರವಿನೊಂದಿಗೆ/ಸ್ನೇಹಿತರಿಂದ

48. ಅನ್ಯ ಭಾಷಿಕರ ಬಳಿ ಮಾತನಾಡುವಾಗ ಯಾವ ಭಾಷೆಯಲ್ಲಿ ಮಾತನಾಡುವಿರಿ?
* ಅವರ ಭಾಷೆಯಲ್ಲಿ
* ನಮ್ಮ ಭಾಷೆಯಲ್ಲಿ
* ಎರಡರಲ್ಲೂ

49. ಇತರರೊಂದಿಗೆ ಮಾತನಾಡುವಾಗ ಕನ್ನಡ ಬೆರೆಸಿ ಮಾತನಾಡುವಿರಾ?
* ಹೌದು * ಇಲ್ಲ * ಆಗಾಗ

50. ಈ ರೀತಿ ಬೇರೆ ಭಾಷೆ ಬೆರೆಸಿ ಮಾತನಾಡುವ ಸಂದರ್ಭಗಳಾವುವು?
* ವ್ಯಾಪಾರ ಸಂದರ್ಭ
* ಕೆಲಸದವರ ಜೊತೆ
* ಕೆಲಸ ಮಾಡುವ ಕಡೆ
* ಸರಿಯಾಗಿ ಭಾಷೆ ಗೊತ್ತಿಲ್ಲದ ಸಂದರ್ಭಗಳಲ್ಲಿ
* ಮಾತನಾಡುವುದು ಕಷ್ಟವಾದಾಗ
* ಸ್ನೇಹಕ್ಕಾಗಿ
* ಬೇರೆ ಭಾಷೆಗೊತ್ತೆಂದು ತೋರಿಸಲು
* ಭಾಷೆ ಗೊತ್ತಿಲ್ಲದ ಅಪರಿಚಿತರೊಡನೆ

51. ಕನ್ನಡ ಭಾಷೆಯನ್ನು ನಿಮ್ಮಲ್ಲಿ ಯಾರು ಹೆಚ್ಚಾಗಿ ಬಳಸುತ್ತಾರೆ.

ಗಂಡು ಹೆಣ್ಣು

* ದೊಡ್ಡವರು..........................................................................................
* ನಡುವಯಸ್ಸಿನವರು...............................................................................
* ಮಕ್ಕಳು..............................................................................................

52. ನಿಮಗೆ ಕನ್ನಡ ಭಾಷೆ ಕಲಿಯುವ ಒತ್ತಾಯ/ಪ್ರೇರಣೆ ಇದೆಯೇ?
ಇದೆ/ಇಲ್ಲ

53. ಇದೆ ಎಂದಾದಲ್ಲಿ ಈ ಕೆಳಗಿನ ಯಾವ ಸಂದರ್ಭಗಳಲ್ಲಿ ಕನ್ನಡ ಕಲಿಯುವ ಒತ್ತಾಯ, ಮಾತನಾಡುವ ಒತ್ತಾಯ ಇದೆ?
* ಶಿಕ್ಷಣದ ಸಂದರ್ಭದಲ್ಲಿ
* ಮಾರುಕಟ್ಟೆಗಳಲ್ಲಿ
* ನ್ಯಾಯಾಲಯಗಳಲ್ಲಿ
* ಸರ್ಕಾರಿ ಕಛೇರಿಗಳಲ್ಲಿ
* ಬ್ಯಾಂಕ್‌ಗಳಲ್ಲಿ
* ಕನ್ನಡಿಗರೊಂದಿಗೆ ವ್ಯವಹರಿಸುವಾಗ
* ಇತರೆ

54. ನಿಮ್ಮ ಮಕ್ಕಳು ಮನೆಯಲ್ಲಿ ಯಾವ ಭಾಷೆಯಲ್ಲಿ ಮಾತನಾಡುತ್ತಾರೆ.

ನಿಮ್ಮೊಂದಿಗೆ.......................................

ನಿಮ್ಮ ಹಿರಿಯರೊಂದಿಗೆ...................

55. ಶಾಲೆಯಿಂದ ಮನೆಗೆ ಬಂದ ಮೇಲೆ ಅವರು ಯಾವ ಭಾಷೆಯಲ್ಲಿ ಮಾತನಾಡುತ್ತಾರೆ?

56. ನಿಮ್ಮ ಮಕ್ಕಳಿಗೆ ಕತೆ/ಹಾಡುಗಳನ್ನು ಹೇಳುವಾಗ ಯಾವ ಭಾಷೆ ಬಳಸುತ್ತೀರಾ?

| | ಕನ್ನಡ | ತಮಿಳು |
|---|---|---|
| ಕತೆ | | |
| ಹಾಡು | | |
| ಗಾದೆಗಳು | | |

57. ನಿಮ್ಮ ಮಕ್ಕಳು ತಮಿಳು ಭಾಷಿಕ ಸಮುದಾಯದವರನ್ನು ಬಿಟ್ಟು ಬೇರೆ ಭಾಷಿಕ ಸಮುದಾಯದವರನ್ನು ಮದುವೆಯಾಗಲು ಅವಕಾಶ ನೀಡುತ್ತೀರಾ?

58. ನೀವುಗಳು ನಿಮ್ಮ ಭಾಷಾ ಸಮುದಾಯಕ್ಕೆ ಸಂಬಂಧಿಸಿದಂತೆ ಸಂಘ/ ಸಂಸ್ಥೆಗಳನ್ನು ಹೊಂದಿದ್ದೀರಾ?(ತಮಿಳು ಸಂಘಗಳು)

* ಹೌದು * ಇಲ್ಲ

ಹೌದಾದರೆ ನಿಮ್ಮ ಸದಸ್ಯತ್ವ ಹೊಂದಿರುವೀರಾ?

ಆ ಸಂಘದಲ್ಲಿ ನೀವು ಯಾವುದಾದರು ಪದಾಧಿಕಾರ ಹೊಂದಿರುವೀರಾ?

ಪ್ರಸ್ತುತ ಆ ಸಂಸ್ಥೆಯ ಸಭೆಗಳಲ್ಲಿ ಭಾಗವಹಿಸುವೀರಾ?

ಸಭೆಗಳಲ್ಲಿ ಸಾಮಾನ್ಯವಾಗಿ ಯಾವ ಭಾಷೆಯಲ್ಲಿ ಮಾತನಾಡುತ್ತೀರಾ?

59. ಮನೆಯಲ್ಲಿ ನಿರ್ವಹಿಸುವ ಲೆಕ್ಕ ಪತ್ರಗಳು ಯಾವ ಭಾಷೆಯಲ್ಲಿರುತ್ತವೆ?

60. ನಿಮ್ಮನ್ನು ಕನ್ನಡಿಗರು ಅವರ ಸಾಂಸ್ಕೃತಿಕ ಆಚರಣೆಗಳಲ್ಲಿ ಆಹ್ವಾನ ನೀಡುತ್ತಾರಾ? ಅವರುಗಳನ್ನು ನೀವುಗಳು ನಿಮ್ಮ ಸಾಂಸ್ಕೃತಿಕ ಆಚರಣೆಗಳಿಗೆ ಕರೆಯುತೀರಾ?

61. ನಿಮ್ಮ ಸಮುದಾಯಕ್ಕೆ ಸಂಬಂಧಿಸಿದ ಜನರು ರಾಜಕೀಯ ಮುಖಂಡರಾಗಿದ್ದಾರಾ? ಮೀಸಲಾತಿ ಇದೆಯೆ?

62. ನಿಮ್ಮ ಪ್ರದೇಶದಲ್ಲಿ ತಮಿಳುನಾಡಿನ ಯಾವ ಯಾವ ಭಾಗಗಳಿಂದ ಬಂದಿರುವ ಜನರಿದ್ದಾರೆ?

63. ಈ ಪ್ರದೇಶದಲ್ಲಿ ಯಾವ ಯಾವ ಧರ್ಮ ಮತ್ತು ಜಾತಿಯ ಜನರು ವಾಸವಾಗಿದ್ದಾರೆ?

64. ಈ ನಗರ/ಗ್ರಾಮದ ಸುತ್ತಮುತ್ತ ಯಾವ ಯಾವ ಊರುಗಳಲ್ಲಿ ತಮಿಳು ಭಾಷಿಕ ಸಮುದಾಯಗಳು ವಾಸವಾಗಿದ್ದಾರೆ?

## ಪದಕೋಶ

**ಸಂಖ್ಯಾವಾಚಿಗಳು:**

| ಕನ್ನಡ | ತಮಿಳರ ಬಳಕೆಯ ರೂಪಗಳು |
|---|---|
| ಒಂದು | ಒನ್ |
| ಎರಡು | ರಂಡು |
| ಮೂರು | ಮೂಣ್ |
| ನಾಲ್ಕು | ನಾಲ್ |
| ಐದು | ಅಂಜಿ |
| ಆರು | ಆರ್ |
| ಏಳು | ಏಳ |
| ಎಂಟು | ಎಟ್ಟು |
| ಒಂಭತ್ತು | ಒಂಭದು(ಒನ್ಬದು) |
| ಹತು | ಪತ್ತು |
| ಹನ್ನೊಂದು | ಪದನೊಂದು |
| ಹನ್ನೆರಡು | ಪದಿನೆಂಡು |
| ಹದಿಮೂರು | ಪದಿಮೂನ್ |
| ಹದಿನಾಲ್ಕು | ಪನ್ನಾಲ್ |
| ಹದಿನೈದು | ಪದಿನೆಂಜಿ |
| ಹದಿನಾರು | ಪದ್ನಾರು |
| ಹದಿನೇಳು | ಪದಿನೇಳು |
| ಹದಿನೆಂಟು | ಪದಿನೆಂಟ್ಟು |
| ಹತ್ತೊಂಭತ್ತು | ಪತ್ತೊಂಬದು |
| ಇಪ್ಪತ್ತು | ಇರುವದಿ |
| ಇಪ್ಪತ್ತೈದು | ಇರವತ್ತಂಜಿ |

| | |
|---|---|
| ಮೂವತ್ತು | ಮುಪ್ಪದು |
| ಮೂವತ್ತೈದು | ಮುಪ್ಪತ್ತಂಜಿ |
| ನಲವತ್ತು | ನಾಪದು |
| ನಲವತ್ತೈದು | ನಾಪತ್ತಂಜಿ |
| ಐವತ್ತು | ಅಂಭದು |
| ಐವತ್ತೈದು | ಅಂಭತಂಜಿ |
| ಅರವತ್ತು | ಅರವದು |
| ಅರವತ್ತೈದು | ಅರವತ್ತಂಜಿ |
| ಎಪ್ಪತ್ತು | ಎಳವದು |
| ಎಪ್ಪತ್ತೈದು | ಎಳವತ್ತಂಜಿ |
| ಎಂಭತ್ತು | ಎಂಬದು |
| ಎಂಭತ್ತೈದು | ಎಂಬದಂಜಿ |
| ತೊಂಭತ್ತು | ತೊನ್ನೂರು |
| ತೊಂಭತ್ತೈದು | ತೊನ್ನುತಂಜಿ |
| ನೂರು | ನೂರು |
| ಒಂದು ನೂರು | ನೂರ ಒನ್ |
| ಎರಡು ನೂರು | ನೂತ್ತಿ ರಂಡು |
| ಮೂರು ನೂರು | ನೂತ್ತಿ ಮೂಣ್ |
| ನಾಲ್ಕು ನೂರು | ನೂತ್ತಿ ನಾಲ್ |
| ಐದು ನೂರು | ನೂತ್ತಿ ಅಂಜಿ |
| ಆರು ನೂರು | ನೂತ್ತಿ ಆರ್ |
| ಏಳು ನೂರು | ನೂತ್ತಿ ಏಳ್ |
| ಎಂಟು ನೂರು | ನೂತ್ತಿ ಎಂಟ್ಟ |
| ಒಂಭೈನೂರು | ನೂತ್ತಿ ಒಂಭದು |
| ಒಂದು ಸಾವಿರ | ನೂತ್ತಿ ಅಯರ್ |
| ಐದು ಸಾವಿರ | ಅಂಜ ಆಯರ್ |
| ಹತ್ತು ಸಾವಿರ | ಪತ್ತ ಆಯರ್ |
| ಐವತ್ತು ಸಾವಿರ | ಅಂಭದ ಆಯರ್ |
| ಒಂದು ಲಕ್ಷ | ಒರ್ ಲಕ್ಷಮ್ |

**ಕ್ರಮ ವಾಚಕಗಳು:**

| | | |
|---|---|---|
| ಒಂದನೆಯ | ಮೂತವ | ಮೊದಲನೆಯ |
| ಎರಡನೆಯ | ರಂಡಾವುದು (ಏಳೆವದು) | ಮತ್ತೊಂದು |
| ಮೂರನೆಯ | ಮೂಣಾವುದು | ಕೊನೆಯ |
| ನಾಲ್ಕನೆಯ | ನಾಲಾವುದು | |
| ಐದನೆಯ | ಅಂಜಿವುದು | |
| ಆರನೆಯ | ಆರವುದು | |
| ಏಳನೆಯ | ಏಳಾವುದು | |
| ಎಂಟನೆಯ | ಎಟ್ಟಾವುದು | |
| ಒಂಭತ್ತನೆಯ | ಒಂಬದಾವುದು | |

**ತಿಂಗಳುಗಳು:**

| | |
|---|---|
| ಒಂದು ತಿಂಗಳು | ಒರ್ ಮಾಸಂ |
| ಎರಡು ತಿಂಗಳು | ರಂಡು ಮಾಸಂ |
| ಮೂರು ತಿಂಗಳು | ಮೂಣ್ ಮಾಸಂ |
| ನಾಲ್ಕು ತಿಂಗಳು | ನಾಲ್ ಮಾಸಂ |
| ಐದು ತಿಂಗಳು | ಅಂಜಿ ಮಾಸಂ |
| ಆರು ತಿಂಗಳು | ಆರು ಮಾಸಂ |
| ಏಳು ತಿಂಗಳು | ಏಳು ಮಾಸಂ |
| ಎಂಟು ತಿಂಗಳು | ಎಂಟ್ಟು ಮಾಸಂ |
| ಒಂಭತ್ತು ತಿಂಗಳು | ಒಂಬದು ಮಾಸಂ |
| ಹತ್ತು ತಿಂಗಳು | ಪತ್ತು ಮಾಸಂ |
| ಹನ್ನೊಂದು ತಿಂಗಳು | ಪದವಂದು ಮಾಸಂ |
| ಹನ್ನೆರಡು ತಿಂಗಳು | ಪನ್ನೆರಡು ಮಾಸಂ |
| ಒಂದು ವರ್ಷ | ಒಂದು ವರ್ಷಂ |
| ಒಬ್ಬ | ಒರುವ |
| ಇಬ್ಬರು | ರಂಡು ಪೇರ್ |
| ಮೂವರು | ಮೂಣ್ ಪೇರ್ |
| ನಾಲ್ವರು | ನಾಲ್ ಪೇರ್ |

| | |
|---|---|
| ಐವರು | ಅಂಜಿ ಪೇರ್ |
| ಆರು ಜನ | ಆರ್ ಪೇರ್ |
| ಏಳು ಜನ | ಏಳ್ ಪೇರ್ |
| ಎಂಟು ಜನ | ಎಟ್ಟ್ ಪೇರ್ |
| ಒಂಭತ್ತು ಜನ | ಒಂಬದು ಪೇರ್ |
| ಹತ್ತು ಜನ | ಪತ್ತು ಪೇರ್ |

**ಪ್ರಮಾಣಸೂಚಕ ಪದಗಳು**

| | |
|---|---|
| ಕಾಲು | ಕಾಪಡಿ |
| ಅರ್ಧ | ಅರ್(ಅರಪಡಿ) |
| ಮುಕ್ಕಾಲು | ಮುಕ್ಕಾಲು |
| ಒಂದು ಕಾಲು | ಒನ್ನೆಕಾಲ್ |
| ಒಂದುವರೆ | ಒಂದುರ್ (ಒಂದ್ರ) |
| ಒಂದು ಮುಕ್ಕಾಲು | ಒನ್ನೆ ಮುಕ್ಕಾಲು |

**ಅಳತೆ**

| | |
|---|---|
| ಒಂದು ಗೇಣು | ಜಾನ್ |
| ಮೊಳ | ಮೊಳ |
| ಮಾರು | ಮಾರ್ |
| ಒಂದು ಹೆಜ್ಜೆ | ಒರು ಎಟ್ಟ |
| ಅಂಗೈ ಅಗಲ | ಕೈಯಂ |
| ಮೊಣಕಾಲು ಮಟ್ಟ | ಮೊಣಕಾ(ಗಾ)ಲ್ ವರಕ್ಕೂ |

**ಪ್ರಾಣಿಸೂಚಕ ಪದಗಳು**

| | |
|---|---|
| ನರಿ | ಗುಳ್ಳ ನರಿ(ಕುಳ್ಳೆನರಿ) |
| ಹದ್ದು | ಕಳದು |
| ಕೊಂಬು | ಕೊಂಬು |
| ಬಾಲ | ವಾಲ್ |
| ರೆಕ್ಕೆ | ರಕ್ಕ |
| ಉಡ | ಉಡುಂಬು |
| ಗೂಬೆ | ಆಂದೆ |

| | |
|---|---|
| ಕೋಣ | ಕೋಣೆ |
| ಕತ್ತೆ | ಕಳ್ದೆ |
| ಆಮೆ | ಆಮೆ |
| ಏಡಿ | ನಂಡ್ |
| ಹಾವು | ಪಾಂಬು |
| ನಾಗರಹಾವು | ನಾಗಪ್ಪ |
| ಕೇರೆ ಹಾವು | ಸಾರಪಾಂಬು |
| ಹಲ್ಲಿ | ಪಲ್ಲಿ/ಪಳ್ಳಿ/ಜವಲಿ |
| ಮಾಂಸ | ಕರಿ |
| ಕೋಳಿಮಾಂಸ | ಕೋಳಿಕರಿ |
| ಕುರಿಮಾಂಸ | ಆಡುಕರಿ |
| ಅಳಿಲು | ಅಳನು |
| ಆನೆ | ಆನೆ(ಣೆ) |
| ಇರುವೆ | ಎರುಂಬೆ |
| ಇಲಿ | ಎಲಿ |
| ಎತು | ಮಾಡು |
| ಕರು | ಕಣ್ಣುಕುಟ್ಟಿ |
| ಗಂಡುಕರು | ಕಾಳ |
| ಹೆಣ್ಣುಕರು | ಪೊಂಬಳ |
| ಕಾಗೆ | ಕಾಕೈ |
| ಕಾಡುಕೋಣ | ಕಾಟು ಕೋಣ |
| ಹಂದಿ | ಪಂದಿ |
| ಕಾಡುಹಂದಿ | ಕಾಟು ಪಂದಿ |
| ಕುರಿ | ಆಟ್ |
| ಕೋಳಿ | ಕೋಳಿ |
| ಗಿಳಿ | ಕಿಳಿ |
| ಗುಬ್ಬಚ್ಚಿ | ಕುರುವಿ |
| ಚಿರತೆ | ಚಿತರೆ |

| ದನ | ಮಾಟು |
|---|---|
| ನವಿಲು | ಮಯಿಲು |
| ನಾಯಿ | ನಾಯಿ |
| ಪಾರಿವಾಳ | ಪೊರ |
| ಬೆಕ್ಕು | ಪೂಣೆ |
| ಮೇಕೆ | ಮೇಕೆ |
| ಮುಂಗುಸಿ | ತಿರಿಪಿಳ್ಳೆ |
| ಮೀನು | ಮೀನ್ |

**ಪದ ಸಂಪತ್ತು**

| **ಕನ್ನಡ** | **ಬಳಕೆ ತಮಿಳು ರೂಪ** |
|---|---|
| ಮನೆ | ವೀಡ್(ಊಡ್) |
| ಹೊಲ | ಕಾಡ್ |
| ರಸ್ತೆ | ರೋಟ್ |
| ಓಣಿ | ವೀದಿ |
| ಅಂಗಡಿ | ಕಡ |
| ಮರ | ಮರ(ಮರಂ) |
| ಮಾವಿನಮರ | ಮಾಳಮರಮ್ |
| ತೆಂಗಿನಮರ | ತ್ಯಾಂಗ್ ಮರಮ್ |
| ಹುಣಸೆಮರ | ಪುಳಿಯು ಮರಮ್ |
| ಬಾರೆಮರ | ಎಳಂದ ಮರಮ್ |
| ಆಲದಮರ | ಅರಸ ಮರಮ್ |
| ಹಲಸಿನಮರ | ಪೆಳ ಮರಮ್ |
| ಬೇವಿನಮರ | ಹೇಪ್ ಮರಮ್ |
| ಹೊಂಗೆಮರ | ಪೊಂಗೆ ಮರಮ್ |
| ಜಾಲಿಮರ | ವೇಳ ಮರಮ್ |
| ಎಲೆತೋಟ | ವೆತ್ತಲ ತೋಟಂ |
| ತೆಂಗಿನತೋಟ | ತ್ಯಾಂಗ ತೋಪು |
| ಅಡಿಕೆತೋಟ | ಪಾಕ್ ತೋಟಂ |

| | |
|---|---|
| ಬಾಳೆತೋಟ | ವಾಡ ತೋಟಂ |
| ಎಲೆ | ವೆತ್ತಲೆ |
| ಅಡಿಕೆ | ಪಾಕ್ |
| ತೆಂಗಿನಕಾಯಿ | ತ್ಯಾಂಗಾಯಿ |
| ಕಬ್ಬು | ಕರ್ಬುಂ |
| ಎಳ್ಳು | ಎಳ್ಳು |
| ಸಜ್ಜೆ | ಕಂಬು |
| ಹೆಸರುಕಾಳು | ಪಚ್ಚ ಪೈರು |
| ಹತ್ತಿ | ಪಂಜಿ, ಪರ್ಜಿ |
| ಶೇಂಗಾ | ಕಳ್ಳಕಾಯಿ ಕೊಟ್ಟ |
| ಹೂವು | ಪೂವ್ |
| ಬೇಳೆ | ಪರ್ಬ |
| ಅಕ್ಕಿ | ಅರಿಸಿ |
| ಭತ್ತ | ನಲ್ಲ್ |
| ನವಣೆ | ತೆನ |
| ಜೋಳ | ಸೋಳ |
| ಅನ್ನ | ಸೋರು |
| ಮುದ್ದೆ | ಕಲಿ |
| ಸಾಂಬಾರು | ಸಾರು/ಕೊಳುಂಬ |
| ದೋಸೆ | ದೋಸೆ |
| ಬೆಲ್ಲ | ವೆಲ್ಲ |
| ಕರಿಬೇವು | ಕರುಪಳ |
| ಗೋಧಿ | ಗೋದಿಬುಟ್ಟಿ |
| ಜೋಳದ ಹಿಟ್ಟು: | ಚೊಳ ಮಾವು |
| ಹೋಳಿಗೆ | ಹೋಳಿಗಿ |
| ಚಪಾತಿ | ಚಪಾತಿ |
| ಸೊಪ್ಪು | ಸೊಪ್ಪು |
| ಕೊತ್ತಂಬರಿಸೊಪ್ಪು | ಕೊತ್ತುಂಬರಿ ತಲೆ |

| | |
|---|---|
| ಹಾಲು | ಪಾಲು |
| ಮೊಸರು | ತೈರು |
| ಬೆಣ್ಣೆ | ವೆಣ್ಣ |
| ತುಪ್ಪ | ನೆಯಿ |
| ಮೊಸರು | ತೈರು (ಮೋರು) |
| ಮಜ್ಜಿಗೆ | ಮೋರು |
| ಚಂಬು | ಸೊಂಬು |
| ತಟ್ಟೆ | ತಟ್ಟೆ |
| ಪಾತ್ರೆ | ಕೊಂಡು |
| ಏಳಿಗೆಮಣಿ | ಅರವ ಮಣಿ |
| ಎಣ್ಣೆ | ಎಣ್ಣೆ |
| ನೀರು | ತಣ್ಣಿ |
| ಒನಕೆ | ಒಳಕ |
| ಒರಳು | ಒರಲು |
| ಕಟ್ಟಿಗೆ | ವೆರುವ್ |
| ಮುಳ್ಳು | ಮುಳ್ಳ್ |
| ಉಪ್ಪು | ಉಪ್ಪು |
| ಬೆಳ್ಳುಳ್ಳಿ | ಪೊಂಡ್(ವೆಳ್ಳಾಂಗೆ ಪೊಂಡ್) |
| ಈರುಳ್ಳಿ | ಪೂಂಡ್ |
| ಮೆಣಸು | ಮೊಳವು |
| ಮೆಣಸಿನಕಾಯಿ | ಮೊಳವ |
| ಬದನೆಕಾಯಿ | ಕೊತ್ತರಿಕೆ |
| ಟಮೋಟ | ತಕ್ಕೊಳಿ ಫಲಂ |
| ಆಲುಗಡ್ಡೆ | ವೆಂಗಾಯಿ |
| ತೊಟ್ಟಿಲು | ಯಾಣೆ |
| ಬಾಚಣಿಕೆ | ಚೀಪೆ |
| ಕನ್ನಡಿ | ಕನ್ನಾಡಿ |
| ದಾರ | ನೂಲ್ |

| | |
|---|---|
| ಒಲೆ | ಅಡಿಮು |
| ಬೆಂಕಿ | ನೆರುಪು |
| ಗಾಳಿ | ಕಾತ್ |
| ಮಣ್ಣು | ಮಣ್ |
| ಕಪ್ಪುಮಣ್ಣು | ಕರುಪ್ |
| ಕೆಂಪುಮಣ್ಣು | ಕೆಂಪ್ |
| ಚೀಲ | ಸಾಕ್ |
| ತಿಪ್ಪೆ | ಕುಪ್ಪೆ/ಎರುವು |
| ಕುಡುಗೋಲು | ಅರವಾಲು |
| ಕೊಡಲಿ | ಕೊಡಲಿ |
| ಕಲ್ಲು | ಕಲ್ಲು |
| ಬಲೆ | ವಲೆ |
| ಗುಡ್ಡ(ಬೆಟ್ಟ): | ಮಲೈ |
| ಕೆರೆ | ಏರಿ/ಅರು |
| ಹಳ್ಳ | ವಾಕ್ಯಾಲ್ |
| ಬಾಗಿಲು | ವಾಸಮಡಿ |
| ಹೊಸ್ತಿಲು | ವಾಸಪಡಿ |
| ಗೋಡೆ | ಸೆವುರು |

**ಬಣ್ಣಗಳು**

| | |
|---|---|
| ಕಪ್ಪು | ಕರ್ಮು ಕಲ |
| ಕೆಂಪು | ಸೆವುಪು ಕಲ |
| ನೀಲಿ | ನೀಲ ಕಲ |
| ಬಿಳಿ | ವೆಳ್ಳ ಕಲ |
| ಹಳದಿ | ಮಂಜಲ ಕಲ |
| ಹಸಿರು | ಪಚ್ಚ ಕಲ |

**ಹಣ್ಣುಗಳು**

| | | |
|---|---|---|
| ಮಾವಿನಹಣ್ಣು | ಮಾಂಗ ಫಲಂ | ಮಾವು : ಮಾಂಗೈ |
| ಬಾರೆಹಣ್ಣು | ಎಳಂದ ಫಲಂ | ಬಾರೆ : ಎಳಂದ |

| | | |
|---|---|---|
| ಹಲಸಿನಹಣ್ಣು | ಫೆಲ ಫಲಂ | ಹಲಸು : ಫೆಲ |
| ಹುಣಸೇಹಣ್ಣು | ಪುಳಿ ಫಲಂ | ಹುಣಸೆ : ಪುಳಿ |
| ನಿಂಬೆಹಣ್ಣು(ನಿಂಬೆಕಾಯಿ) | ಎಲುಬು ಚಂಬಳ | |

**ಕಾಲಗಳು**

| | | |
|---|---|---|
| ಇವತ್ತು(ಈದಿನ/ಇಂದು) | ಇನ್ನಕೆ | |
| ನಾಳೆ | ನಾಳಕೆ | |
| ನಾಡಿದ್ದು | ನಾಳನನಕ್ಕಿ | |
| ನಿನ್ನೆ | ನೇತಿ | |
| ಮೊನ್ನೆ | ಮುಂದಾ ನೇತಿ(ಮೂನ್ನಾದನಾಳ್) | |
| ಮುಂಜಾನೆ | ಕಾಳ ಇಲ್ಯೆ | |
| ಮಧ್ಯಾಹ್ನ | ಮಧಯ | |
| ಸಂಜೆ | ಪೊಳ್ದಾಡಂ | |
| ರಾತ್ರಿ | ರಾತ್ರಿ | |
| ಮಧ್ಯರಾತ್ರಿ | ಸರಿ ರಾತ್ರಿ | |
| ಗಾಳಿ | ಕಾರ್ತ | |
| ಚಳಿ | ಕುಳೂರ | |
| ಮಳೆ | ಮಳ | |
| ಬಿಸಿಲು | ವೇಯಿಲು | |
| ಸೂರ್ಯ | ಸೂರ್ಯ | |
| ಚಂದ್ರ | ಚಂದಿರ | |
| ಮಳೆಗಾಲ | ಮಳಕಾಲಂ | |
| ಚಳಿಗಾಲ | ಕುಳೂರ ಕಾಲಂ(ಪಣಿಕಾಲಂ) | |
| ಬೇಸಿಗೆ | ವೇಯ್ಯ ಕಾಲಂ | |
| ಕಳ್ಳ | ತಿರುಡ | ಕಳ್ಳಿ ತಿರುಡಿ |
| ಹುಡುಗ | ಪೈಯ | ಹುಡುಗಿ ಪೊಣ್ಣ್ |

**ಮಾನವ ಅಂಗಾಂಗ ಸೂಚಕಪದಗಳು**

| | |
|---|---|
| ತಲೆ | ತಲ್ಯೆ |
| ಕರುಳು | ಕೋಡಲು |

| | |
|---|---|
| ಎಲುಬು | ಮೂಳೆ |
| ರಕ್ತ | ರತ್ತಂ(ಕಂ) |
| ಮಾಂಸ | ಕರಿ |
| ಬೆರಳು | ವೆರಳು |
| ಕೈಬೆರಳು | ಕೈ ವೆರಳು |
| ಕಾಲುಬೆರಳು | ಕಾಲ್ ವೆರಳು |
| ಉಗುರು | ನೆಗಂ |
| ಕೈ | ಕೈ |
| ಕಾಲು | ಕಾಲು |
| ಕೂದಲು | ಮೈರ್(ಮುಡಿ) |
| ಕುತ್ತಿಗೆ | ಕಳವ್ |
| ಮುಖ | ಮುಗಂ |
| ತುಟಿ | ಉದಡು |
| ಬಾಯಿ | ವಾಯಿ |
| ಹಲ್ಲು | ಪಳ್ಳ |
| ಒಕ್ಕಳು | ತೊಪ್ಪುಲು |
| ಸೊಂಟ | ಇಡುಪ್ಪು |
| ತೋಳು | ತೋಳು |
| ಭುಜ | ಸೊಪ್ಪ(ಮುಣ್ಡಾ–೪೨೫) |
| ಕಣ್ಣು | ಕಣ್ಣ |
| ಕಣ್ಣುರೆಪ್ಪೆ | ಕಣ್ಣ ರೆಪ್ಪೆ |
| ಕಿವಿ | ಕಾದ |
| ಮೂಗು | ಮೂಕ್ |
| ಮೊಣಕಾಲು | ಮೊಣಗಾಲ್ |
| ಅಂಗಾಲು | ಒಳಂಗಾಲು |
| ಹಿಮ್ಮಡಿ | ತುದಿಗಾಲು |
| ಬೆನ್ನು | ಮುದುಗು |
| ಹೃದಯ | ಇದೆಯಂ |

**ವ್ಯಕ್ತಿಗಳಿಗೆ ಸಂಬಂಧಿಸಿದ ಖಾಯಿಲೆಗಳು**

| | |
|---|---|
| ಕೆಮ್ಮು | ಇರುಂಬಲ್ |
| ನೆಗಡಿ | ಸಳಿ |
| ಜ್ವರ | ಜವರ |
| ತಲೆನೋವು | ತಲವಳಿ |
| ಮೈನೋವು | ಒಡಂಬುವಳಿ |
| ನೋವು | ವಳಿ |
| ಕೈನೋವು | ಕೈಯುಳಿ |
| ಹೊಟ್ಟೆನೋವು | ವವುತ್‌ವಳಿ |
| ಸೊಂಟನೋವು | ಈಡುಪು ವಳಿ |
| ಹಲ್ಲುನೋವು | ಪಲ್ಲುವಳಿ |
| ಕಣ್ಣುನೋವು | ಕಣ್ಣುವಲಿ |
| ಕಿವಿನೋವು | ಕಾದುವಲಿ |
| ಬೆರಳುನೋವು | ಬೆರಳವಲಿ |

**ಜಾತಿ ವಾಚಕಗಳು**

೦೧. ಬ್ರಾಹ್ಮಣರು

೦೨. ಮೊದಲಿಯಾರ್

೦೩. ಗೌಂಡರ್

೦೪. ನಾಯಕ

೦೫. ಸೆಟ್ಟಿಯಾರ್(ಸೆಟ್ಟಿ)

೦೬. ವಡಾರ್(ಬೋವಿ)

೦೭. ವಿಲ್ಲಾಳರ್(ಗೌಂಡರ್)

೦೮. ದೇವಾರ್(ತೇವರ್)

೦೯. ಆಚಾರಿ

೧೦. ನಾಟೀರ್(ಗೌಂಡರ್)

೧೧. ನಾಡಾರ್

೧೨. ಪಲ್ಲರ್(ಎಸ್.ಸಿ)

೧೩. ಆದಿದ್ರಾವಿಡ

೧೪. ಸೆಂಬಡವರ್(ಬೆಸ್ತರು)

೧೪ ಮುಸ್ಲಿಂರು

೧೫ ಕ್ರಿಶ್ಚಿಯನ್‌ರು